ಸಂಪುಟ ೯ ಸಂಚಿಕೆ ೧
ಜನವರಿ-ಜೂನ್ ೨೦೦೭

# ಮಹಿಳಾ ಅಧ್ಯಯನ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಹಿಳಾ ಅಧ್ಯಯನ

ಸಂಪಾದಕರು
ಡಾ. ಶೈಲಜ ಹಿರೇಮಠ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA**
Bi-Annual, Vol.- 9, issue-1, January-June-2007
*Edited* by
**Dr. Shailaja Hiremath**
Head of the Department of Women's Studies
Kannada University, Hampi
Vidyaranya 583 276
*Published by*
**Prof. Mallepuram G. Venkatesha**
Director, Prasaranga
Kannada University, Hampi
Vidyaranya 583 276

Pages : vi + 168, Price : Rs. 50/-

www.kannadauniversity.org

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೯, ಸಂಚಿಕೆ ೧, ಜನವರಿ-ಜೂನ್-೨೦೦೭





*ಪ್ರಕಾಶನ*
ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

| | | | |
|---|---|---|---|
| ಬಿಡಿ ಪ್ರತಿ ಬೆಲೆ | : | ರೂ. ೫೦.೦೦ | |
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ | ರೂ. ೮೦.೦೦ |
| | | ಸಂಸ್ಥೆಗಳಿಗೆ | ರೂ. ೧೦೦.೦೦ |
| ತ್ರೈವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ | ರೂ. ೨೦೦.೦೦ |
| | | ಸಂಸ್ಥೆಗಳಿಗೆ | ರೂ. ೨೫೦.೦೦ |

*ಮುಖಪುಟ* : ಕೆ.ಕೆ. ಮಕಾಳಿ

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

*ಮುದ್ರಣ*
**ಪ್ರಿಂಟ್ ಪಾರ್ಕ್**
ನಂ.೧೪೯೬/೪, ಮೂರನೆಯ ಅಡ್ಡರಸ್ತೆ, ಎರಡನೆಯ ಮುಖ್ಯರಸ್ತೆ
ಮರಿಯಪ್ಪನ ಪಾಳ್ಯ, ಮಹಾಕವಿ ಕುವೆಂಪು ರಸ್ತೆ
ಶ್ರೀರಾಂಪುರಂ ಪೋಸ್ಟ್
ಬೆಂಗಳೂರು - ೫೬೦ ೦೨೧.
ದೂರವಾಣಿ : ೦೮೦ - ೨೩೪೨ ೨೮೩೮

## ಸಂಪಾದಕೀಯ

ಶೈಲಜ ಹಿರೇಮಠ

ಮಹಿಳೆಯರ ಸ್ಥಿತಿಗತಿಗಳನ್ನು ಲಿಂಗಸಂಬಂಧಿ ವ್ಯವಸ್ಥೆಗಳ ನೆಲೆಗಳಲ್ಲಿ ವಿವಿಧ ಆಯಾಮಗಳಲ್ಲಿ ಗ್ರಹಿಸುವ ಉದ್ದೇಶವನ್ನು ಮಹಿಳಾ ಅಧ್ಯಯನ ಪತ್ರಿಕೆಯು ಹೊಂದಿದೆ. ಮಹಿಳೆಯರ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ ಉದ್ದೇಶ ಮಹಿಳಾ ಅಧ್ಯಯನ ಪತ್ರಿಕೆಗಿದೆ. ಈ ಸಂಚಿಕೆಯ ಬರಹಗಳನ್ನು ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಗಳು, ಸಮಾಜ, ಮಾಧ್ಯಮ, ಸಾಹಿತ್ಯ, ಅನುಭವ ಕಥನ, ಭಾಷಾಂತರ ಎಂದು ಆರು ವಿಂಗಡನೆಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.

ಸ್ತ್ರೀವಾದಿ ಸಂಶೋಧನೆಗೆ ಪ್ರತ್ಯೇಕವಾದ ವಿಧಾನಗಳನ್ನು ಮತ್ತು ವೈಧಾನಿಕತೆಯನ್ನು ರೂಪಿಸಿಕೊಳ್ಳುವ ಅಗತ್ಯವನ್ನು ಹಾಗೂ ಅದು ಎದುರಿಸಬೇಕಾಗಿರುವ ಸವಾಲುಗಳ ಕುರಿತ ವಿಶ್ಲೇಷಣೆಯನ್ನು ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಗಳು ಎನ್ನುವ ಮೊದಲ ವಿಂಗಡನೆಯಲ್ಲಿನ ಲೇಖನಗಳು ನಡೆಸುತ್ತವೆ.

ಮಹಿಳಾ ಸಬಲೀಕರಣದ ಸಾಧ್ಯತೆಯನ್ನು ಮಹಿಳೆಯ ರಾಜಕೀಯ ಸಬಲೀಕರಣದ ನೆಲೆಗಳಲ್ಲಿ ವಿವರಿಸುವ ಪ್ರಯತ್ನವನ್ನು, ದಂಧೆ ಮಾಡುವವರ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಆ ನೆಲೆಯಲ್ಲಿ 'ಸಮುದಾಯ' ಪರಿಕಲ್ಪನೆಯನ್ನು ನಿರ್ವಚಿಸಿಕೊಳ್ಳುತ್ತ ಅಲ್ಲಿಯ ಲಿಂಗಸಂಬಂಧಗಳ ಕುರಿತ ಅಧ್ಯಯನವನ್ನು ಹಾಗೂ ಬುಡಕಟ್ಟು ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದಂತೆ ತೆರೆದುಕೊಳ್ಳಬೇಕಾದ ಸಾಧ್ಯತೆಗಳ ಕುರಿತ ಚಿಂತನೆಗಳನ್ನು 'ಸಮಾಜ' ಎನ್ನುವ ಎರಡನೆಯ ವಿಂಗಡನೆಯ ಲೇಖನಗಳು ವಿವರಿಸುತ್ತವೆ.

'ಮಾಧ್ಯಮ' ಎನ್ನುವ ಮೂರನೆಯ ವಿಂಗಡನೆಯ ಲೇಖನ ಎರಡು ಪಾಶ್ಚಾತ್ಯ ಚಲನಚಿತ್ರಗಳನ್ನು (ಭಾಷೆಯಿಲ್ಲದ ಭಾಷೆಯಲ್ಲಿ ತೆರೆ ಕೋಟಿ ಕಡಲೊಂದು) ಹಿನ್ನೆಲೆಯಾಗಿಟ್ಟುಕೊಂಡು ಲಿಂಗಸಂಬಂಧಿ ಅಧ್ಯಯನವನ್ನು ನಡೆಸುತ್ತದೆ.

'ಮಡಿಲ ಬೆಂಕಿ'ಯು ವಿಧವಾ ಸಮಸ್ಯೆಯ ಮೂಲಕ ಮಡಿ ಅಥವಾ ಅಸ್ಪೃಶ್ಯತೆ ಕೇವಲ ಇತರ ಜಾತಿಯವರೊಂದಿಗೆ ನಡೆಸುವ ವ್ಯವಹಾರವಲ್ಲ, ಮಡಿಯ ಮೂಲಕ ಇತರರನ್ನು ಅವಮಾನಿಸುವುದಕ್ಕಿಂತಲೂ, ತಾವೇ ಸಿಲುಕಿಕೊಂಡಿರುವ ಬಲೆಯೊಳಗಿನಿಂದ ಬಿಡಿಸಿಕೊಳ್ಳಲಾರದೆ ತಮ್ಮನ್ನೇ ಶೋಷಿಸಿಕೊಳ್ಳುವ ಸ್ವಯಂ ಶಾಪದ ಬಗ್ಗೆ ವಿಶ್ಲೇಷಿಸುವ ಹಾಗೂ

ಪುರಾಣ ಸ್ತ್ರೀವಾದದ ಕಟ್ಟಿಕೊಳ್ಳಬೇಕಾದ ಅಗತ್ಯತೆ ಕುರಿತ ಚರ್ಚೆಯನ್ನು ಸಾಹಿತ್ಯ ವಿಂಗಡನೆಯಲ್ಲಿನ ಲೇಖನಗಳು ನಡೆಸುತ್ತವೆ.

'ಅನುಭವ ಕಥನ'ವು ತತ್ವಪದಕಾರಳಾದ ಚಲವಾದಿ ಗೌರಮ್ಮನ ಹೋರಾಟದ ಬದುಕನ್ನು ಕಟ್ಟಿಕೊಡುತ್ತದೆ.

'ಭಾಷಾಂತರ' ಎನ್ನುವ ವಿಂಗಡಣೆಯಲ್ಲಿರುವ ಲೇಖನವು ಸ್ತ್ರೀಯರ ಕುರಿತ ಪೂರ್ವಾಗ್ರಹ ಗಳನ್ನು, ಮಿಥ್‌ಗಳನ್ನು ಒಡೆದು ನೋಡುವ ಪ್ರಯತ್ನವನ್ನು ನಡೆಸಿದೆ.

ಈ ಸಂಚಿಕೆಯ ಸಿದ್ಧತೆಯ ಹಿನ್ನೆಲೆಯಲ್ಲಿ ಬೆಂಬಲವಾಗಿ ನಿಂತ ನಮ್ಮ ನೆಚ್ಚಿನ ಕುಲಪತಿ ಡಾ. ಬಿ.ಎ. ವಿವೇಕ ರೈ ಅವರನ್ನು ಸ್ಮರಿಸಲೇ ಬೇಕು. ತಮ್ಮ ಎಲ್ಲ ಕೆಲಸದೊತ್ತಡಗಳ ಮಧ್ಯೆ ನಾನು ಹಾಕುವ ಒತ್ತಡವನ್ನು ಸಹಿಸಿಕೊಂಡು, ಗೌರವಿಸಿ ಲೇಖನಗಳನ್ನು ಕಳುಹಿಸಿ ಸಹಕರಿಸಿದ ಎಲ್ಲ ಲೇಖಕರಿಗೆ ಕೃತಜ್ಞಳಾಗಿದ್ದೇನೆ. ಕರಡು ತಿದ್ದುವಲ್ಲಿ ಸಹಕರಿಸಿದ ಪ್ರೀತಿಯ ವಿದ್ಯಾರ್ಥಿಗಳಾದ ಯರ್ರಿಸ್ವಾಮಿ ಹಾಗೂ ಸೋಮಕ್ಕ ಅವರನ್ನು ನೆನೆಯಲೇಬೇಕು. ಡಿ.ಟಿ.ಪಿ., ಮುದ್ರಣ, ರಕ್ಷಾಕವಚದ ಸಿದ್ಧತೆ ಮೊದಲಾದವುಗಳಲ್ಲಿ ಆಸಕ್ತಿವಹಿಸಿ ಪ್ರೋತ್ಸಾಹಿಸಿದ ನಮ್ಮ ಪ್ರಸಾರಾಂಗದ ನಿರ್ದೇಶಕರನ್ನು ಹಾಗೂ ಅವರ ಸಹೋದ್ಯೋಗಿ ಬಳಗವನ್ನು ಪ್ರೀತಿಪೂರ್ವಕ ವಾಗಿ ಸ್ಮರಿಸುತ್ತಾ ಸಹೃದಯ ಓದುಗರಿಗೆ ಈ ಸಂಚಿಕೆಯನ್ನು ಒಪ್ಪಿಸುತ್ತಿದ್ದೇನೆ.

## ಪರಿವಿಡಿ

# ಸ್ತ್ರೀವಾದಿ ಸಂಶೋಧನಾ ವಿಧಾನಗಳು-ಸ್ವರೂಪ ಹಾಗೂ ಅಗತ್ಯತೆ

ಛಾಯಾ ದೇಗಾಂವಕರ್

## ಪ್ರಸ್ತಾವನೆ

ಸಂಶೋಧನೆಯ ಮೂಲ ಉದ್ದೇಶವು ಸತ್ಯಶೋಧನೆಯಾಗಿದೆ. ನೈಸರ್ಗಿಕ, ಸಾಮಾಜಿಕ ಹಾಗೂ ಕಲಾ ವಿಜ್ಞಾನಗಳಲ್ಲಿ ಸಂಶೋಧನೆಯ ಮೂಲಕ ಜ್ಞಾನವು ಬೆಳೆಯುತ್ತಿದೆ. ಈ ಪ್ರಕ್ರಿಯೆಯಲ್ಲಿ ಹಳೆಯ ಸಿದ್ಧಾಂತಗಳನ್ನು ಪರೀಕ್ಷಿಸಿ, ಅಸಮರ್ಪಕ ಅಥವಾ ಸತ್ಯಾಂಶ ಗಳಿಂದ ದೂರವಿದ್ದಲ್ಲಿ ಅವುಗಳನ್ನು ತಳ್ಳಿ ಹಾಕಿ ಹೊಸ ಸಿದ್ಧಾಂತಗಳು ರೂಪಿಸಲಾಗುತ್ತವೆ ಅಥವಾ ಅವುಗಳನ್ನು ದೃಢಪಡಿಸಲಾಗುತ್ತದೆ. ನೈಸರ್ಗಿಕ ವಿಜ್ಞಾನಗಳಲ್ಲಿ ಸಂಶೋಧನೆಯ ನಿಷ್ಕರ್ಶಗಳು ಪ್ರಖರ ಹಾಗೂ ಖಚಿತವಾಗಿರುತ್ತವೆ. ಏಕೆಂದರೆ ಇಲ್ಲಿ ಅಮಾನವೀಯ ಸ್ಥಿರ ಹಾಗೂ ಚರ ವಸ್ತುಗಳ ಮೇಲೆ ಪ್ರಯೋಗಾಲಯಗಳಲ್ಲಿ ಸಂಶೋಧನೆ ನಡೆಸಿ ಫಲಿತಾಂಶ ಗಳನ್ನು ಪಡೆಯಲಾಗುತ್ತದೆ. ಆದರೆ ಸಮಾಜವಿಜ್ಞಾನಗಳಲ್ಲಿ ಸಂಶೋಧನೆಯು ಮಾನವನ ವರ್ತನೆಯ ಬಗ್ಗೆ ನಡೆಸಲಾಗುತ್ತದೆ. ಈ ವರ್ತನೆಯಲ್ಲಿ ವ್ಯಕ್ತಿಗತ, ಸಾಂದರ್ಭಿಕ ಭಿನ್ನತೆ ಇದ್ದ ಕಾರಣ ತೆಗೆದುಕೊಂಡಿರುವ ನಿಷ್ಕರ್ಶಗಳು ದೃಢವಾಗಿ ಸತ್ಯವಾಗಿವೆಂದು ಹೇಳುವುದಕ್ಕೆ ಆಗುವುದಿಲ್ಲ. ಇಲ್ಲಿ ವಸ್ತುನಿಷ್ಠತೆಯ ಅಂಶ ಕಡಿಮೆ ಇರುವುದರಿಂದ ಭಾವನಾತ್ಮಕತೆಯ ಅಂಶಗಳು ಸೇರಿ ಸತ್ಯಾಂಶದಿಂದ ದೂರಪಡಿಸುವ ಸಾಧ್ಯತೆಗಳು ಇರುತ್ತವೆ. ಆದರೂ ಮಾನವನ ವರ್ತನೆಯ ವಿಶ್ಲೇಷಣೆ ಅವಶ್ಯಕವಾಗಿರುವುದರಿಂದ ಸಮಾಜವಿಜ್ಞಾನಗಳಲ್ಲಿ ಸಂಶೋಧನೆಯ ಅವಶ್ಯಕತೆ ಹೆಚ್ಚುತ್ತದೆ. ಇತ್ತೀಚೆಗೆ ಈ ವಿಜ್ಞಾನಗಳಲ್ಲಿ ಪರಿಮಾಣಾತ್ಮಕ ತಂತ್ರಗಳ ಬಳಿಕೆಯ ಮೂಲಕ ಸಂಶೋಧನೆಯು ನಿಖರಗೊಳಿಸುವ ಪ್ರಯತ್ನಗಳು ನಡೆದಿವೆ. ವೈಜ್ಞಾನಿಕ ವಿಧಾನವನ್ನು ಆಧಾರಿಸಿ ಸಂಗತಿಗಳ ನಿರೀಕ್ಷಣೆ, ಪ್ರಾಕಲ್ಪನೆ, ಪರೀಕ್ಷೆಗಾಗಿ ದತ್ತಾಂಶಗಳ ಸಂಗ್ರಹಣೆ, ವಿಶ್ಲೇಷಣೆ ಸಂಬಂಧಗಳ ನಿರೂಪಣೆಗಳ ಮೂಲಕ ಸಿದ್ಧಾಂತಗಳನ್ನು ರೂಪಿಸ ಲಾಗುತ್ತಿವೆ. ಸಮಾಜವಿಜ್ಞಾನದ ಜ್ಞಾನವು ಇಂದು ಅಪಾರವಾಗಿದೆ.

ಸಮಾಜದಲ್ಲಿ 'ಮಾನವ'ದ ಪರಿಕಲ್ಪನೆಯು ಸ್ತ್ರೀ ಹಾಗೂ ಪುರುಷರನ್ನು ಒಳಗೊಂಡಿದೆ. ಆದರೆ ಪುರುಷಪ್ರಧಾನ ಸಮಾಜದಲ್ಲಿ 'ಮಾನವ'ನ ವಿಶ್ಲೇಷಣೆಯಲ್ಲಿ 'ಮಹಿಳೆ'ಯು ಅಗೋಚರವಾಗಿದ್ದಾಳೆ. ಮಾನವನ ವಿಶ್ಲೇಷಣೆಯಲ್ಲಿ ಕೇವಲ ಪುರುಷರು ಮಾತ್ರ ಇರುವ

ಸತ್ಯವನ್ನು ಸ್ತ್ರೀವಾದ ಹಾಗೂ ಮಹಿಳಾ ವಿಮೋಚನಾ ಚಳುವಳಿಗಳು ಹೊರತಂದಿವೆ. ಈ ದಿಸೆಯಲ್ಲಿ ಮಹಿಳೆಯರ ಬಗ್ಗೆ ವಿಶೇಷ ಅಧ್ಯಯನ ಹಾಗೂ ಸಂಶೋಧನೆ ಮಾಡಿ ನಿಜಾಂಶ ಗಳನ್ನು ಕಂಡು ಹಿಡಿದು ಸಮಾಜವಿಜ್ಞಾನದ ಜ್ಞಾನವನ್ನು ಪೂರ್ಣಗೊಳಿಸುವ ಅವಶ್ಯಕತೆ ಇಂದು ಉಂಟಾಗಿದೆ. ಪ್ರಸ್ತುತ ಲೇಖನದಲ್ಲಿ ಈ ಬಗ್ಗೆ ವಿವೇಚನೆ ಮಾಡಲಾಗಿದೆ.

## ಸ್ತ್ರೀವಾದಿ ಸಂಶೋಧನೆ ಅರ್ಥ ಹಾಗೂ ಸ್ವರೂಪ

ಸ್ತ್ರೀವಾದಿ ಸಂಶೋಧನೆಗೆ ಸರ್ವಸಮ್ಮತವಾದ ವ್ಯಾಖ್ಯೆಯೂ ಇಲ್ಲ ಅಥವಾ ಸರ್ವಸಮ್ಮತ ನಿರ್ದೇಶನಗಳು ಅಥವಾ ವಿಧಾನಗಳೂ ಇಲ್ಲ. ಆದರೂ ಮಹಿಳೆ ಹಾಗೂ ಜಂಡರ ಬಗ್ಗೆ ಜ್ಞಾನವನ್ನು ಸೃಷ್ಟಿಸುವುದು ಸ್ತ್ರೀವಾದಿ ಸಂಶೋಧನೆ ಎಂದು ಹೇಳಲಾಗಿದೆ. ಇಲ್ಲಿ ಮಹಿಳೆಯರ ಸಮಸ್ಯೆಗಳು, ಆಂತಕಗಳು ಹಾಗೂ ನಂಬಿಕೆಗಳು ಸಂಶೋಧನಾ ಪ್ರಕ್ರಿಯೆಯ ಚೌಕಟ್ಟುಗಳನ್ನು ರೂಪಿಸುತ್ತದೆ. ಸ್ತ್ರೀವಾದಿ ಸಂಶೋಧನೆಯ ಸಾಂಪ್ರದಾಯಿಕ ಸಂಶೋಧನೆಯಿಂದ ಭಿನ್ನವಾಗಿದೆ. ಇಲ್ಲಿ ಮಹಿಳೆಯರ ಪ್ರಶ್ನೆಗಳನ್ನು ಎತ್ತಲಾಗುತ್ತವೆ. ಮಹಿಳೆಯರ ದಿನನಿತ್ಯದ ಜೀವನದ ಅನುಭವಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗುತ್ತದೆ. ಸಾಂಪ್ರದಾಯಿಕ ಸಂಶೋಧನೆಯ ವಿಷಯಗಳು ಹಾಗೂ ಪ್ರಶ್ನೆಗಳು ಪುರುಷರಿಗೆ ಸಂಬಂಧಿಸಿದ ಹಾಗೆ ಅವರಿಗೆ ಬೇಕಾಗಿರುವ ಜ್ಞಾನವನ್ನು ಸೃಷ್ಟಿಸುವ ಪ್ರಶ್ನೆಗಳಾಗಿದ್ದವು. ಮಹಿಳೆಯರ ನಿಲುವುದಿಂದ ಪ್ರಾರಂಭವಾದ ಈ ಸಂಶೋಧನೆಯ ಉದ್ದೇಶ ಕೇವಲ ಜ್ಞಾನ ಸೃಷ್ಟಿಸುವುದು ಮಾತ್ರ ಅಲ್ಲದೇ ಆದರೆ ಜೊತೆಗೆ ಲಿಂಗ ಸಮಾನತೆ ಹಾಗೂ ಮಹಿಳೆಯರ ಸಬಲೀಕರಣಕ್ಕಾಗಿ ಸಾಮಾಜಿಕ ಬದಲಾವಣೆಯ ಗುರಿಯನ್ನು ಕೂಡ ಹೊಂದಿರುತ್ತದೆ.

ಮಾರಿಯಾ ಮಿಸ್ (Maria mics, 1983) ಅವರು ಹೇಳುವ ಹಾಗೆ, ಸ್ತ್ರೀವಾದಿ ಸಂಶೋಧನೆಯು ಕೇವಲ ಮಹಿಳೆಯರ ಬಗ್ಗೆ ಸಂಶೋಧನೆ ಅಲ್ಲದೇ ಅವರ ಲಿಂಗಾಧಾರಿತ ಸಮಾಜದ ಬದಲಾವಣೆಯ ಬಗ್ಗೆ ಸಂಶೋಧನೆಯಾಗಿದೆ. ಇಲ್ಲಿ ಸಂಶೋಧನೆಯ ಜೊತೆಗೆ ಅಸಮಾನತೆ ಹೋಗಲಾಡಿಸಲು ಕ್ರಿಯೆ ಅವಶ್ಯಕವಾಗಿದೆ. ಸಂಶೋಧನೆ ಹಾಗೂ ಕ್ರಿಯೆಗಳು ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಹೀಗೆ ಸ್ತ್ರೀವಾದಿ ಸಂಶೋಧನೆಯು ಮಹಿಳೆಯರು ಮಹಿಳೆಯರ ಬಗ್ಗೆ ನಡೆಸಿದ ಅಧ್ಯಯನವಾಗಿದೆ. ಇದು ಲಿಂಗ ಅಸ್ತಿತ್ವವನ್ನು ಗಮನದಲ್ಲಿಟ್ಟು ಕೊಂಡು ಯಾವ ಪ್ರಭೇಧಗಳಿಲ್ಲದೆ ಸ್ತ್ರೀ ಹಾಗೂ ಪುರುಷರಿಗೆ ಅನ್ವಯಿಸುವ ಜ್ಞಾನವನ್ನು ಸೃಷ್ಟಿಸುತ್ತದೆ.

## ಸ್ತ್ರೀವಾದಿ ಸಂಶೋಧನಾ ವಿಧಾನಗಳು

ಸ್ತ್ರೀವಾದಿ ಸಂಶೋಧನಾ ವಿಧಾನ ಇದೆಯೇ? ಇದ್ದರೆ ಅದು ಸಾಂಪ್ರದಾಯಿಕ ಸಂಶೋಧನಾ ವಿಧಾನಗಳಿಂದ ಹೇಗೆ ಭಿನ್ನವಾಗಿದೆ ಎಂದು ಸಂಡ್ರಾ ಹಾರ್ಡಿಂಗ್ (Sandra Harding, 1987)ರವರು ಪ್ರಶ್ನಿಸುತ್ತಾರೆ. ಇಂತಹ ಪ್ರತ್ಯೇಕವಾದ ವಿಧಾನವು ಇಲ್ಲದಿದ್ದರೂ, ಪ್ರಸ್ತುತ ವಿಧಾನಗಳನ್ನು ಪುನಃರೂಪಿಸಿ ಮಹಿಳೆಯರ ವಿಷಯಗಳನ್ನು ಅಧ್ಯಯನ ಮಾಡಲು

ಸೂಕ್ತಗೊಳಿಸುವ ಅವಶ್ಯಕತೆ ಇದೆ. ಸ್ತ್ರೀವಾದಿ ಸಂಶೋಧನೆಯೆಂದರೆ ಒಂದು ಪ್ರವಾಸ ಅಥವಾ ಪುರಾತನ ವಸ್ತುಶಾಸ್ತ್ರದ ಒಂದು ಉತ್ಖನನ ಎಂದು ರಿನಹರ್ಜ (Reinharz, 1992)ರವರು ಹೇಳುತ್ತಾರೆ. ಇದರಲ್ಲಿ ಸಂಶೋಧನಾ ಪ್ರಶ್ನೆಗಳಿಗೆ ಅಥವಾ ಉದ್ದೇಶಗಳಿಗೆ ಹಾಗೂ ಸಂದರ್ಭಗಳಿಗೆ ಯೋಗ್ಯವಾದ ತಂತ್ರಗಳನ್ನು ಅಥವಾ ವಿಧಾನಗಳನ್ನು ಬಳಸಬೇಕಾಗುತ್ತದೆ. ಸಮಾಜವಿಜ್ಞಾನದ ವಿಧಾನಗಳ ಹಾಗೆ ಇಲ್ಲಿ ವಿಧಾನಗಳನ್ನು ಸಂಶೋಧನಾ ಪೂರ್ವದಲ್ಲಿಯೇ ನಿರ್ಧರಿಸಲಾಗುವುದಿಲ್ಲ.

ಸ್ತ್ರೀವಾದಿ ಜ್ಞಾನದ ಸೃಷ್ಟಿಯು ಒಂದು ಸತತವಾಗಿ ನಡೆದಿರುವ, ಬದಲಾವಣೆಗೆ ಒಳಗಾಗುತ್ತಿರುವ ಹಾಗೂ ತರಾತರಿಯ ಪ್ರಕ್ರಿಯೆ. ಇದು ಪಠ್ಯಗಳು, ಸಂಶೋಧನೆಯ ದತ್ತಾಂತಗಳು ವಿವಿಧ ಮೂಲಗಳಿಂದ ಸಂಗ್ರಹಿಸುತ್ತದೆ. ಸಂವಾದ, ಮೌಖಿಕ ಆಕರ, ಜಾಲ ಸಂಪರ್ಕ, ಜಾಗೃತಿ, ಸಂವೇದನೆ ಮುಂತಾದ ವಿಧಾನಗಳು ಇಲ್ಲಿ ಬಳಸಲಾಗುತ್ತವೆ. ವಿವಿಧ ಅಧ್ಯಯನ ಶಿಸ್ತುಗಳ ಚೌಕಟ್ಟಿನಲ್ಲಿ ಬೆಳೆದು ಬಂದ ಸಮಾಜವಿಜ್ಞಾನದ ಜ್ಞಾನವು, ಪುರುಷ ಕೇಂದ್ರಿತವಾಗಿರುವುದರಿಂದ ಈ ಜ್ಞಾನವನ್ನು ಶಂಕಿಸುತ್ತ ಹಾಗೂ ಸ್ತ್ರೀವಾದಿ ದೃಷ್ಟಿಕೋನವನ್ನು ಆಧಾರವಾಗಿ ಇಟ್ಟುಕೊಂಡು ಸಂಗತಿಗಳನ್ನು ವಿಶ್ಲೇಷಿಸುತ್ತ ಸ್ತ್ರೀವಾದಿ ಜ್ಞಾನವು ಬೆಳೆಯುತ್ತಿರುವ ಕಾರಣ ಅದು ಅಧ್ಯಯನ ಶಿಸ್ತುಗಳ ಚೌಕಟ್ಟುಗಳನ್ನು ತಳ್ಳಿ ಹಾಕಿ ಅವುಗಳು ನೀಡುವ ಜ್ಞಾನವನ್ನು ಬದಲಾಯಿಸುತ್ತದೆ. ಈ ವಿಧಾನಗಳು ಪ್ರಸ್ತುತ ವೈಜ್ಞಾನಿಕ ಭಾಷೆಯೂ ಕೂಡ ಪುರುಷ ಜ್ಞಾನವಾಹಿನಿಯಾಗಿದೆಯೆಂದು ನಿರೂಪಿಸಿ, ಲಿಂಗರಹಿತ ಭಾಷೆಯ ಬಳಕೆಯನ್ನು ಸಮರ್ಥಿಸುತ್ತದೆ.

ಸ್ತ್ರೀವಾದಿ ಸಂಶೋಧನೆಯು ಸ್ತ್ರೀವಾದಿ ಸಿದ್ಧಾಂತಗಳನ್ನು ಅವಲಂಬಿಸಿದೆ. ಈ ಸಿದ್ಧಾಂತಗಳು ಮಹಿಳೆಯರ ಬದುಕನ್ನು ನಿರಾಕರಿಸುವ ಹಾಗೂ ತುಳಿತಕ್ಕೆ ಅನುಕೂಲ ಮಾಡಿಕೊಡುವ ಪ್ರಸ್ತುತ ಸಾಮಾಜಿಕ ಸಂಸ್ಥೆಗಳು ಹಾಗೂ ಸಂಬಂಧಗಳನ್ನು ಹೊರತರುತ್ತದೆ. ಪ್ರಸ್ತುತ ಸಿದ್ಧಾಂತಗಳಿಗೆ ಪ್ರತಿಯಾಗಿ, ಸ್ತ್ರೀವಾದಿ ಸಂಶೋಧನೆಯ ಮೂಲಕ ಹೊಸ ಪರಿಪೂರ್ಣ ಸಿದ್ಧಾಂತಗಳನ್ನು ರೂಪಿಸುತ್ತದೆ.

ಮಹಿಳೆಯರ ಅನುಭವಗಳ ಅದೃಶ್ಯತೆ ಹಾಗೂ ವಿರೂಪಗೊಳಿಸುವಿಕೆಯನ್ನು ಸರಿಪಡಿಸುವುದು ಸ್ತ್ರೀವಾದಿ ಸಂಶೋಧನೆಯ ಪ್ರಮುಖ ಉದ್ದೇಶವಾಗಿದೆ. ಆದುದರಿಂದ ಸ್ತ್ರೀವಾದಿ ಸಂಶೋಧನೆಯು ವೈಧಾನಿಕತೆಯಲ್ಲಿ ಸಾಂಪ್ರದಾಯಿಕ ಸಂಶೋಧನೆಯಿಂದ ಭಿನ್ನವಾಗಿದೆಂದು ರಿನ್‌ಹರ್ಜರವರು (Reinharz, 1992) ಹೇಳುತ್ತಾರೆ. ಇದಕ್ಕೆ ಮೂರು ಪ್ರಮುಖ ಕಾರಣಗಳನ್ನು ಅವರು ಗುರುತಿಸುತ್ತಾರೆ.

೧. ಸ್ತ್ರೀವಾದಿ ಸಂಶೋಧನೆಯು ಸಂಶೋಧಕ ಹಾಗೂ ಸಂಶೋಧನಾ ವಿಷಯವಾದ ಮಹಿಳೆ ಇವೆರಡರ ನಡುವಿನ ಅಧಿಕಾರದ ಅಸಮತೋಲನ ತೆಗೆದು ಹಾಕಲು ಯತ್ನಿಸುತ್ತದೆ. ಸಾಂಪ್ರದಾಯಿಕ ಅಧ್ಯಯನದಲ್ಲಿ ಸಂಶೋಧಕಿ/ಕ ಜ್ಞಾನವುಳ್ಳವರಾಗಿರುತ್ತಾರೆ. ಇಲ್ಲಿ ಸಂಶೋಧಕ ಹಾಗೂ ಸಂಶೋಧನೆಗೆ ಒಳಗಾದವನ ನಡುವೆ ಅಸಮಾನ (ಅಂತಸ್ಥ ಕೈ

ಒಳಗಾದ) ಸಂಬಂಧ ಇರುತ್ತದೆ. ಆದರೆ, ಸ್ತ್ರೀವಾದಿ ಸಂಶೋಧನೆಯಲ್ಲಿ ಈ ಅಸಮತೋಲನ ತೆಗೆದು ಹಾಕಿರುವುದರಿಂದ ಸಂಶೋಧಕಿ/ಕ ಭಾಗವಹಿಸುವ ಮಹಿಳೆಯ ಅನುಭವಗಳಿಂದ ಜ್ಞಾನವನ್ನು ಸಂಗ್ರಹಿಸುತ್ತಾರೆ. ಸಂಶೋಧಕಿ/ಕನ ಸಾಮಾಜಿಕ ಹಿನ್ನೆಲೆ, ವರ್ಗ, ಅಂತಸ್ತು ಇಲ್ಲಿ ಸಂಶೋಧನಾ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರುತ್ತವೆ. ಆದ್ದರಿಂದ ಇಲ್ಲಿ ಎರಡು ಅಂಶಗಳು ಪ್ರಮುಖವಾಗಿ ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಒಂದು Reflexivity ಅಂದರೆ ಸಂಶೋಧಕ ವಿಷಯವಸ್ತು ಆದ ಮಹಿಳೆಯ ಸರಿಸಮಾನ ಸಾಮಾಜಿಕ ಸ್ಥಾನದಲ್ಲಿ ತನ್ನನ್ನು ಕಲ್ಪಿಸಿ ಅವಳ ಅನುಭವಗಳನ್ನು ವಿಶ್ಲೇಷಿಸಬೇಕಾಗುತ್ತದೆ.

ಎರಡನೆಯ ಅಂಶವೆಂದರೆ Intersubjectivity ಅಂತರವ್ಯಕ್ತಿನಿಷ್ಠತೆ. ಇಲ್ಲಿ ಸಂಶೋಧಕಿ/ಕ ಹಾಗೂ ವಿಷಯ ವಸ್ತು ಆದ ಮಹಿಳೆ ಇವರಿಬ್ಬರೂ ಸಮಾನವಾಗಿ ಸಂಶೋಧನಾ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾರೆ.

೨. ಸ್ತ್ರೀವಾದಿ ಸಂಶೋಧನೆಯು ಕೇವಲ ಸಂಶೋಧನೆ ಎಂದು ತಿಳಿಯುವುದು ತಪ್ಪು, ಇದು ಮಹಿಳೆಯರ ಆಸಕ್ತಿಗಳನ್ನು ಪೋಷಿಸುತ್ತದೆ. ಮಹಿಳೆಯರ ಬಗ್ಗೆ ಮಾಹಿತಿ ಹಾಗೂ ವಿಶ್ಲೇಷಣೆ ನೀಡುವ ಮೂಲಕ ಅವರ ಅಸಮಾನ ಹಾಗೂ ಶೋಷಿತ ಅವಸ್ಥೆಯನ್ನು ತೆಗೆದುಹಾಕಲು ಸೂಕ್ತವಾದ ಸಾಮಾಜಿಕ ಬದಲಾವಣೆಗಳನ್ನು ತರಲು ಪ್ರಯತ್ನಿಸುತ್ತದೆ. ಇಲ್ಲಿ ಸಂಶೋಧನಾ ಪ್ರಕ್ರಿಯೆಯಲ್ಲಿ ವಿಷಯ ವಸ್ತುವಾದ ಮಹಿಳೆಯರ ಸಂವೇದನೆಗಳು ಜಾಗೃತಗೊಳ್ಳುತ್ತವೆ. ಆದುದರಿಂದ ಈ ಮಹಿಳೆಯರು ತಮ್ಮ ಅನುಭವಗಳನ್ನು ಹಾಗೂ ನಿಲುವುಗಳು ವಿಮರ್ಶಾತ್ಮಕವಾಗಿ ಪರಿಶೀಲಿಸುತ್ತಾರೆ. ತಮ್ಮ ಸಾಮಾಜಿಕ ಸ್ಥಾನಮಾನಗಳ ಬಗ್ಗೆ ಅವರಲ್ಲಿ ಅರಿವು ಮೂಡಿ ಅವರ ಸಶಕ್ತೀಕರಣಕ್ಕೆ ಇದು ದಾರಿಯಾಗುತ್ತದೆ. ಹೀಗೆ ಸ್ತ್ರೀವಾದಿ ಸಂಶೋಧನೆಯು ಸಾಮಾಜಿಕ ಬದಲಾವಣೆಯ ಅಂಶಗಳನ್ನು ಒಳಗೊಂಡಿರುತ್ತದೆ.

೩. ಸ್ತ್ರೀವಾದಿ ಸಂಶೋಧನೆಯು ಕೇವಲ ಮಹಿಳೆಯರನ್ನು ವಿಷಯವಸ್ತುವಾಗಿ ವಿಶ್ಲೇಷಣೆ ಮಾಡುವ ಸಂಶೋಧನೆ ಅಲ್ಲ. ಮಹಿಳೆಯರ ಬದುಕು ಹಾಗೂ ಜೀವನದ ಬಗೆಗಿರುವ ಜ್ಞಾನ ಸದ್ಯದ ಜ್ಞಾನ ಜಗತ್ತಿನಲ್ಲಿ ಶೂನ್ಯವಾಗಿದೆ ಅಥವಾ ಪುರುಷ ದೃಷ್ಟಿಕೋನದಿಂದ ಕೂಡಿದೆ. ಇದನ್ನು ಸರಿಪಡಿಸುವ ಉದ್ದೇಶವು ಸ್ತ್ರೀವಾದಿ ಸಂಶೋಧನೆ ಹೊಂದಿದೆ. ಮಹಿಳೆಯರ 'ಖಾಸಗಿ' (Private) ಜಗತ್ತು ಸಂಶೋಧನಾ ವಿಷಯವಾಗಿ ಈವರೆಗೂ ಗಮನಿಸಿರುವುದಿಲ್ಲ. ಈ ವಿಷಯಗಳ ಬಗ್ಗೆ ಜ್ಞಾನವನ್ನು ಸಂಗ್ರಹಿಸಿ, ಪ್ರಸ್ತುತ ಜ್ಞಾನದಲ್ಲಿರುವ ಅಪೂರ್ಣತೆ, ಪರಿಪೂರ್ಣಗೊಳಿಸುವ ದಿಸೆಯಲ್ಲಿ ಸ್ತ್ರೀವಾದಿ ಸಂಶೋಧನೆ ಪ್ರಯತ್ನಿಸುತ್ತಿದೆ. ಇದಕ್ಕಾಗಿ ಸೂಕ್ತ ವಿಧಾನಗಳ ಬಳಿಕೆ ಅವಶ್ಯಕವಾಗಿದೆ. ಮಹಿಳೆಯರ ಅನುಭವಗಳನ್ನು ಮಹಿಳೆಯರ ಭಾಷೆಯಲ್ಲಿ ವಿಶ್ಲೇಷಣೆ ಮಾಡುವ ಅಗತ್ಯವಿದೆ. ಮಹಿಳೆಯರ ಅನುಭವಗಳನ್ನು ಸೂಕ್ತ ಭಾಷೆಯಲ್ಲಿ ವಿಶ್ಲೇಷಿಸುವುದು ಮಹಿಳಾ ಸಂಶೋಧಕರಿಗೆ ಪ್ರಮುಖ ಸಮಸ್ಯೆಯಾಗಿದೆ.

ಭಾಷೆಯು ಲಿಂಗತ್ವದಿಂದ ಕೂಡಿದ ಕಾರಣ ಸ್ತ್ರೀವಾದಿ ಸಂಶೋಧನೆಯಲ್ಲಿ ಸಂಶೋಧನಾ ಪ್ರಕ್ರಿಯೆ ಹಾಗೂ ನಿಷ್ಕರ್ಷಗಳ ಮೇಲಾಗುವ ಇದರ ಪ್ರಭಾವವು ಬೇರ್ಪಡಿಸುವುದು ಅಗತ್ಯವಾಗಿದೆ.

### ಸ್ತ್ರೀವಾದಿ ಸಂಶೋಧನಾ ವಿಧಾನಗಳು-ಗುಣಾತ್ಮಕ ಹಾಗೂ ಪರಿಮಾಣಾತ್ಮಕ

ಗುಣಾತ್ಮಕ ಸಂಶೋಧನೆ ಹಾಗೂ ವಿಧಾನಗಳು ಮಾನವ ಜೀವನದ ಅನುಭವಗಳಿಗೆ ಅರ್ಥ ಹಾಗೂ ಅವುಗಳ ಬಗ್ಗೆ ತಿಳುವಳಿಕೆ ನೀಡುತ್ತದೆ. ಈ ವಿಧಾನಗಳು ವ್ಯಕ್ತಿನಿಷ್ಠವಾಗಿವೆ. ಗುಣಾತ್ಮಕ ವಿಧಾನಗಳಲ್ಲಿ ಪ್ರಮುಖ ವಿಧಾನಗಳೆಂದರೆ (Enthnography) ಸಹಭಾಗಿತ್ವ ನಿರೀಕ್ಷಣೆ, (Participant Observation) ಮೌಖಿಕ ಆಕರಗಳು, (Oral History) ಆಶಯ ವಿಶ್ಲೇಷಣೆ, (Content Analysis) ಜಾಲ ಸಂಪರ್ಕ, ಸಂವಾದ, ಕೇಳುವಿಕೆ (Listening) ಪ್ರಕರಣ ಅಧ್ಯಯನ ಸಂದರ್ಭ ವಿಶ್ಲೇಷಣೆ (Context - Analysis) ಎಂದು ಹೇಳಬಹುದು. ವಿವಿಧ ವಿಷಯ ವಸ್ತುಗಳಿಗೆ ಹಾಗೂ ಸಂದರ್ಭಗಳಿಗೆ ಅನುಗುಣವಾಗಿ ಈ ವಿಧಾನಗಳ ಆಯ್ಕೆ ಮಾಡಲಾಗುತ್ತದೆ. ಈ ವಿಶ್ಲೇಷಣೆಯಲ್ಲಿ ವರ್ಣನೆ ಹಾಗೂ ವಿವರಣೆಯ ಅಂಶಗಳು ಪ್ರಮುಖವಾಗಿರುತ್ತವೆ. ಹಲವಾರು ಸಂದರ್ಭಗಳಲ್ಲಿ ವಿಷಯದ ಬಗ್ಗೆ ಪೂರ್ವ ಮಾಹಿತಿ ಇರುವುದಿಲ್ಲ. ಆ ಸಂದರ್ಭಗಳಲ್ಲಿ ಸಂವಾದ, ಕೇಳುವಿಕೆ ನಿರೀಕ್ಷಣೆಯ ಮೂಲಕ ಸಂಶೋಧನೆಗೆ ಅಗತ್ಯವಿರುವ ಜ್ಞಾನವನ್ನು ಸಂಗ್ರಹಿಸಲಾಗುತ್ತದೆ.

ಸ್ತ್ರೀವಾದಿ ಸಂಶೋಧನೆಯಲ್ಲಿ ಪ್ರಕರಣ ಅಧ್ಯಯನ ವಿಧಾನವು ಪ್ರಮುಖ ವಿಧಾನವಾಗಿದೆ. ಪ್ರಕರಣ ಅಧ್ಯಯನದಲ್ಲಿ ಮಹಿಳೆಯರನ್ನು ವಿಷಯವಾಗಿ ಆಯ್ಕೆ ಮಾಡಿ ಅವರ ಬಗ್ಗೆ ಪ್ರತ್ಯೇಕವಾದ ಅಧ್ಯಯನವನ್ನು ನಡೆಸಲಾಗುತ್ತದೆ. ಇದು ಆಳವಾದ ಅಧ್ಯಯನವಾಗಿರುವುದರಿಂದ ವಿಷಯದ ಮೂಲಕ್ಕೆ ಹೋಗಿ ಸತ್ಯವನ್ನು ಹೊರತರಲು ಸಾಧ್ಯವಾಗುತ್ತದೆ. ಮೌಖಿಕ ಆಕರಗಳು, ಸಂವಾದ, ಸಂದರ್ಭ ವಿಶ್ಲೇಷಣೆಗಳು ಮಹಿಳೆಯರ ಬದುಕಿನ ಬಗ್ಗೆ ಜ್ಞಾನವನ್ನು ಪಡೆಯಲು ನೆರವು ನೀಡುತ್ತವೆ. ಮುಕ್ತ ಸಂವಾದಗಳು ಹಲವಾರು ವಿಷಯಗಳನ್ನು ಬೆಳಕಿಗೆ ತರಲು ಸಹಾಯಕವಾಗುತ್ತವೆ.

ಮಹಿಳೆಯರ ಅನುಭವದ ವಿಶ್ಲೇಷಣೆಯಲ್ಲಿ ಹಲವಾರು ಮಾನಸಿಕ, ಭಾವನಾತ್ಮಕ ಅಂಶಗಳು ಒಳಗೊಂಡಿರುತ್ತವೆ. ಇವುಗಳನ್ನು ಹೊರತರಲು ಗುಣಾತ್ಮಕ ವಿಧಾನಗಳು ಅವಶ್ಯಕವಾಗಿವೆ. ಕೌಟುಂಬಿಕ ಚೌಕಟ್ಟಿನೊಳಗಡೆ ಪುರುಷರು ಮಹಿಳೆಯರನ್ನು ಹೊಡೆಯುವುದರಿಂದ ಶಾರೀರಿಕ ಹಿಂಸೆಯ ಜೊತೆಗೆ ಮಾನಸಿಕ ವೇದನೆ ಕೂಡ ಆಗುತ್ತದೆ. ಈ ಮಾನಸಿಕ ಪ್ರಭಾವದಿಂದ ಉಂಟಾದ ಪರಿಣಾಮಗಳನ್ನು ತಿಳಿಯಲು ಗುಣಾತ್ಮಕ ವಿಧಾನಗಳು ಅವಶ್ಯಕವಾಗಿವೆ. ಹಲವಾರು ಸಂದರ್ಭಗಳಲ್ಲಿ ಅನುಭವಗಳ ವಿವರಣೆ ಅಥವಾ ಹೇಳುವಿಕೆಯ ಮೂಲಕ ಮಾತ್ರ ಸತ್ಯವನ್ನು ಕಂಡು ಹಿಡಿಯಲು ಸಾಧ್ಯವಾಗುತ್ತದೆ. ಹೀಗೆ ಸ್ತ್ರೀವಾದಿ ಸಂಶೋಧನಾ ವಿಧಾನಗಳಲ್ಲಿ ಗುಣಾತ್ಮಕ ವಿಧಾನಗಳನ್ನು ಹೆಚ್ಚಾಗಿ ಬಳಸಲಾಗುತ್ತದೆ. ಆದರೆ, ಪ್ರಸ್ತುತ ಜ್ಞಾನಶಾಸ್ತ್ರದ ದೃಷ್ಟಿಯಲ್ಲಿ ಗುಣಾತ್ಮಕ ಸಂಶೋಧನಾ ವಿಧಾನಗಳು ಮೌಲ್ಯ ಪ್ರಭಾವಿತವಾಗಿವೆ. (biased) ಭಾವನಾತ್ಮಕತೆಯ ಅಂಶಗಳನ್ನು ಹೊಂದಿರುವುದರಿಂದ ಇವುಗಳು ವೈಜ್ಞಾನಿಕವಾಗಿರುವುದಿಲ್ಲವೆಂದು ತಿಳಿಯಲಾಗಿದೆ.

ಪರಿಮಾಣಾತ್ಮಕ ವಿಧಾನಗಳು ಸಾಂಖ್ಯಿಕ ದತ್ತಾಂಶಗಳ ಆಧಾರದ ಮೇಲೆ ಸತ್ಯಶೋಧನೆ ಮಾಡುತ್ತವೆ. ಈ ವಿಧಾನಗಳು ವಸ್ತುನಿಷ್ಠವಾಗಿದ್ದು ಮೌಲ್ಯಗಳಿಂದ ಸ್ವತಂತ್ರವಾಗಿವೆ.

ಆದುದರಿಂದ ಈ ವಿಧಾನಗಳು ವೈಜ್ಞಾನಿಕವಾಗಿವೆ ಎಂದು ಖಚಿತಪಡಿಸಲಾಗಿದೆ. ಈ ವಿಧಾನಗಳಲ್ಲಿ ಕ್ಷೇತ್ರಕಾರ್ಯ, ಸಾಮಾಜಿಕ ಸಮೀಕ್ಷೆಯನ್ನು ತೆಗೆದುಕೊಂಡು, ಪ್ರಶ್ನಾವಳಿ ಅಥವಾ ಸಂದರ್ಶನ ಪಟ್ಟಿಯನ್ನು ಸಿದ್ಧಪಡಿಸಿ, ದತ್ತಾಂಶಗಳನ್ನು ಸಂಗ್ರಹಿಸಲಾಗುತ್ತದೆ. ವಿವಿಧ ಗಣಿತದ ಹಾಗೂ ಸಂಖ್ಯಾಶಾಸ್ತ್ರಗಳ ವಿಧಾನಗಳ ಮೂಲಕ ಈ ದತ್ತಾಂಶಗಳನ್ನು ವಿಶ್ಲೇಷಿಸಿ, ನಿಖರವಾಗಿ ಪರಿಮಾಣಗಳ ರೂಪದಲ್ಲಿ ಸ್ಪಷ್ಟಪಡಿಸಲಾಗುತ್ತದೆ. ಇಲ್ಲಿ ಸಂಶೋಧಕಿ/ಕ ಸಂಶೋಧನಾ ಪ್ರಕ್ರಿಯೆ ಹಾಗೂ ಅದರಲ್ಲಿ ಭಾಗವಹಿಸುವವರಿಂದ ತಮ್ಮನ್ನು ಬೇರ್ಪಡಿಸುತ್ತಾರೆ. ಆದುದರಿಂದ ಪ್ರಖರವಾದ ಮೌಲ್ಯರಹಿತ, ವಸ್ತುನಿಷ್ಠ ಸಿದ್ಧಾಂತಗಳನ್ನು ರಚಿಸಲು ಸಾಧ್ಯವಾಗುತ್ತದೆ. ಸಮಾಜವಿಜ್ಞಾನಗಳಲ್ಲಿ ಇದರ ಬಳಿಕೆ ಇಂದು ಹೆಚ್ಚುತ್ತಿದೆ.

ಪರಿಮಾಣಾತ್ಮಕ ವಿಧಾನಗಳು ವೈಜ್ಞಾನಿಕವಾಗಿದ್ದರೂ ಮಹಿಳೆಯರ ಬಗ್ಗೆ ಅಧ್ಯಯನ ಮಾಡುತ್ತಿರುವಾಗ ಸತ್ಯಾಂಶಗಳು ಹೊರತರಲು ಅಸಫಲವಾಗಬಹುದು. ಉದಾ: ಕೌಟುಂಬಿಕ ಹಿಂಸೆಯ ಬಗ್ಗೆ ತಿಳಿದುಕೊಳ್ಳುವಾಗ ಇದರ ಬಗ್ಗೆ ದಾಖಲಾತಿಯಾದ ಪ್ರಕರಣಗಳ ಸಂಖ್ಯೆಯ ಮೇಲೆ ಅಂದಾಜು ಮಾಡಲು ಸಾಧ್ಯವಾಗುವುದಿಲ್ಲ. ಈ ಸಂಖ್ಯೆಯು ಪುರುಷಪ್ರಧಾನ ವ್ಯವಸ್ಥೆಯ ಸಾಮಾಜಿಕ ಪರಿಸರವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪುರುಷಪ್ರಧಾನ ಮೌಲ್ಯಗಳು ಹೊಂದಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಪ್ರಕರಣಗಳು ದಾಖಲಾತಿ ಆಗುವ ಸಾಧ್ಯತೆಗಳು ಕಡಿಮೆ ಇರುತ್ತವೆ.

ಗುಣಾತ್ಮಕ ಹಾಗೂ ಪರಿಮಾಣಾತ್ಮಕ ವಿಧಾನಗಳ ಬಗೆಗಿನ ಚರ್ಚೆಗೆ ಪರಿಹಾರವಿಲ್ಲ (Jayarathe, 1991). ಇಲ್ಲಿ ವಿಧಾನಗಳ ಶ್ರೇಷ್ಠತೆಯ ಬಗ್ಗೆ ಪ್ರಶ್ನೆಗಳನ್ನು ಎತ್ತುವುದು ಸೂಕ್ತವಿಲ್ಲ. ಸ್ತ್ರೀವಾದಿ ಸಂಶೋಧನೆಗೆ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ವಿಧಾನಗಳ ಅವಶ್ಯಕತೆ ಇದೆ. ಸಂಶೋದನೆಯ ಸಂದರ್ಭ ಹಾಗೂ ಉದ್ದೇಶಕ್ಕೆ ಅನುಗುಣವಾಗಿ ಸಂಶೋಧನಾ ವಿಧಾನವನ್ನು ಆಯ್ಕೆ ಮಾಡುವುದು ಸೂಕ್ತವಾಗಿದೆ. ಸ್ತ್ರೀವಾದಿ ಸಂಶೋಧನೆಯು ವಿಧಾನಗಳ ಜಾಲದಲ್ಲಿ ಸಿಕ್ಕು ಹಾಕಿಸುವುದು ಯೋಗ್ಯವಲ್ಲ. ಸ್ತ್ರೀವಾದಿ ಸಂಶೋಧನೆಗೆ ವಿವಿಧ ವಿಧಾನಗಳನ್ನು ಕೂಡಿಸಿ ಸತ್ಯಶೋಧನೆ ಮಾಡುವ ಸಾಮರ್ಥ್ಯವಿದೆ. ಸಂಶೋಧಕರು ಮಹಿಳೆಯರ ಸ್ಥಿತಿಗಳಿಗೆ ಹಾಗೂ ಅನುಭವಗಳಿಗೆ ಅನುಗುಣವಾಗಿ ಸೂಕ್ತವಾದ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ತಂತ್ರಗಳ ಆಯ್ಕೆ ಮಾಡಬೇಕಾಗಿದೆ.

ಇತ್ತೀಚೆಗೆ ಆಧುನಿಕೋತ್ತರ ಸ್ತ್ರೀವಾದದ ಬೆಳವಣಿಗೆಯ ಜೊತೆಗೆ ಸ್ತ್ರೀವಾದಿ ಸಂಶೋಧನೆಯ ಬಗ್ಗೆ ಹಲವಾರು ಪ್ರಶ್ನೆಗಳನ್ನು ಎತ್ತಲಾಗಿವೆ. ಸ್ತ್ರೀವಾದಿ ಸಂಶೋಧನೆ ಎಂದರೆ ಮಹಿಳೆಯರು ಮಹಿಳೆ ಹಾಗೂ ಜಂಡರ ಬಗ್ಗೆ ಜ್ಞಾನವನ್ನು ಸೃಷ್ಟಿಸುವುದಾದರೆ, ಈ ಜ್ಞಾನದ ಮೂಲಕ ಸತ್ಯಾಂಶಗಳನ್ನು ಹೊರತರಲು ಸಾಧ್ಯವಾಗಬಹುದೇ? 'ನಾವು' ಎಂದರೆ ಯಾರು? ನಾವು ನಮಗಾಗಿ ಜ್ಞಾನವನ್ನು ಸೃಷ್ಟಿಸಬೇಕಾದರೆ 'ನಮ್ಮವರು ಯಾರು? ಎಲ್ಲ ಮಹಿಳೆಯರನ್ನು ಸೇರಿ ಜ್ಞಾನವನ್ನು ಸೃಷ್ಟಿಸುವ ಸಾಧ್ಯತೆ ಇದೆ ಏನು? ಮಹಿಳೆಯರಲ್ಲಿ ಹಲವಾರು ವರ್ಗಗಳಿವೆ. ಪಾಶ್ಚಾತ್ಯ ಹಾಗೂ ತೃತೀಯ ಜಗತ್ತಿನ ಮಹಿಳೆ ಭಿನ್ನವಾಗಿದ್ದಾಳೆ.

ಶ್ರೀಮಂತ ಹಾಗೂ ಬಡ ಮಹಿಳೆ, ಉನ್ನತ ಹಾಗೂ ಕೆಳಜಾತಿಗೆ ಸೇರಿದ ಮಹಿಳೆಯರು ಭಿನ್ನರಾಗಿದ್ದಾರೆ. ಮಹಿಳೆ ಮಹಿಳೆಯರಲ್ಲಿರುವ ಈ ಅಸಮಾನತೆಗಳು ಲಿಂಗ ಅಸಮಾನತೆಯ ಜೊತೆಗೆ ಕೂಡುತ್ತವೆ. ಮಹಿಳೆಯರ ಬಗ್ಗೆ ಜ್ಞಾನವನ್ನು ಸೃಷ್ಟಿಸುತ್ತಿರುವಾಗ ಈ ವ್ಯತ್ಯಾಸಗಳನ್ನು ಕಣ್ಮರೆ ಮಾಡಲು ಸಾಧ್ಯವಿಲ್ಲ. ಈ ವ್ಯತ್ಯಾಸಗಳನ್ನು ಕೂಡ "ಮಹಿಳೆಯರ ಜ್ಞಾನದಲ್ಲಿ" ಸೇರಿಸುವ ವಿಧಾನಗಳನ್ನು ಆಯ್ಕೆ ಮಾಡುವ ಅವಶ್ಯಕತೆ ಇಂದು ಇದೆ.

### ಉಪಸಂಹಾರ

ಸ್ತ್ರೀವಾದಿ ಸಂಶೋಧನೆಯು ಇಂದು ಹಲವಾರು ಸವಾಲುಗಳನ್ನು ಎದುರಿಸುತ್ತಿದೆ. ಆದರೂ ಇದನ್ನು ಮುಂದುವರೆಸುವ ಅಗತ್ಯವಿದೆ. ಸ್ತ್ರೀವಾದಿ ಸಂಶೋಧನೆಯ ಮೂಲಕ ಮಹಿಳೆಯರ ಬದುಕಿನ ಅನುಭವಗಳನ್ನು ವಿಶ್ಲೇಷಿಸಿ, ಮಹಿಳೆಯರ ಬಗ್ಗೆ ಸತ್ಯಾಂಶಗಳನ್ನು ಹೊರತರುವುದು ಅವಶ್ಯಕವಾಗಿದೆ. ಹೊಸ ಸ್ತ್ರೀವಾದಿ ಸಿದ್ಧಾಂತಗಳ ಮೂಲಕ ಪುರುಷ ಕೇಂದ್ರಿತ ಜ್ಞಾನದ ಅಪರಿಪೂರ್ಣತೆಯನ್ನು ಸರಿಪಡಿಸಬೇಕಾಗಿದೆ. ಮಹಿಳೆಯರ ಜ್ಞಾನವನ್ನು ಮುಖ್ಯವಾಹಿನಿಯಲ್ಲಿ ಸೇರಿಸಬೇಕಾಗಿದೆ. ಈ ಸಂಶೋಧನೆಯ ಮೂಲಕ ಸಾಮಾಜಿಕ ಬದಲಾವಣೆಗಳನ್ನು ತಂದು ಮಹಿಳೆಯರ ಸಬಲೀಕರಣ ಮಾಡುವುದು ಅಗತ್ಯವಾಗಿದೆ.

ಸ್ತ್ರೀವಾದಿ ಸಂಶೋಧನೆಗೆ ಹಲವಾರು ಗುಣಾತ್ಮಕ ಹಾಗೂ ಪರಿಮಾಣಾತ್ಮಕ ವಿಧಾನಗಳು ಲಭ್ಯವಾಗಿವೆ. ವಿಷಯಕ್ಕೆ ಅನುಗುಣವಾಗಿ ವಿಧಾನಗಳನ್ನು ಆಯ್ಕೆ ಮಾಡಿದರೆ ಸತ್ಯಶೋಧನೆ ಸಾಧ್ಯವಾಗಬಹುದು. ಸ್ತ್ರೀವಾದಿ ಸಂಶೋಧನೆಯಲ್ಲಿ ಎಲ್ಲಾ ಹಂತಗಳಲ್ಲಿ ಸ್ತ್ರೀವಾದಿ ತತ್ವಗಳನ್ನು ಬಳಸಬೇಕು. ಸ್ತ್ರೀವಾದಿ ಸಿದ್ಧಾಂತಗಳ ಆಧಾರದ ಮೇಲೆ ಸಂಶೋಧನಾ ಚೌಕಟ್ಟು ರೂಪಿಸಬೇಕಾಗಿದೆ.

ಸ್ತ್ರೀವಾದಿ ಸಂಶೋಧನೆ ಹಾಗೂ ಅದರ ವೈಧಾನಿಕತೆಯ ಬಗ್ಗೆ ಹಲವಾರು ಪ್ರಶ್ನೆಗಳು ಇಂದು ಚರ್ಚೆಯಲ್ಲಿವೆ. ಆಧುನಿಕೋತ್ತರ ಸ್ತ್ರೀವಾದದ ಹಿನ್ನೆಲೆಯಲ್ಲಿ, ಸ್ತ್ರೀವಾದ ಸಂಶೋಧನೆಯ ಮೂಲಕ ಮಹಿಳೆಯರ ಬಗ್ಗೆ ಪೂರ್ಣ ಸತ್ಯವನ್ನು ಹೊರತರಲು ಸಾಧ್ಯವಿಲ್ಲ. ಮಹಿಳೆಯರು ವಿಭಿನ್ನ ಜಾತಿ, ವರ್ಗ, ವಂಶಕ್ಕೆ ಸೇರಿದ ಕಾರಣ ಈ ಸತ್ಯಕ್ಕೆ ಹಲವಾರು ರೂಪಗಳಿವೆ. ಈ ಸನ್ನಿವೇಶಗಳಲ್ಲಿ ಸ್ತ್ರೀವಾದಿ ಸಂಶೋಧನೆಯು ಎಲ್ಲ ಮಹಿಳೆಯರ ಬಗ್ಗೆ ಹೇಳದಿದ್ದರೂ ಮಹಿಳೆಯರ ಅನುಭವಗಳ ಮೂಲಕ ಹಲವಾರು ನಿಜಾಂಶಗಳನ್ನು ಹೊರತರುವ ಸಾಮರ್ಥ್ಯ ಪಡೆದಿದೆ. ಇವೆಲ್ಲ ಸವಾಲುಗಳು ಹಾಗೂ ಸಮಸ್ಯೆಗಳ ನಡುವೆ ಕೂಡ ಸ್ತ್ರೀವಾದಿ ಸಂಶೋಧನೆಯು ಮುಂದುವರಿಸುವುದು ಬಹಳ ಅಗತ್ಯವಾಗಿದೆ. ಸ್ತ್ರೀವಾದಿ ಸಂಶೋಧಕರು ತಮ್ಮ ಸಂಶೋಧನೆಯ ಉದ್ದೇಶ ಹಾಗೂ ವಿಷಯಕ್ಕೆ ಅನುಗುಣವಾಗಿ ಸೂಕ್ತವಾದ ತಂತ್ರಗಳನ್ನು ಉಪಯೋಗಿಸುತ್ತಿದ್ದಾರೆ. ಕೆಲವರು ಸಮೀಕ್ಷೆಗಳ ಮೂಲಕ ಸಾಂಖ್ಯಿಕ ಮಾಹಿತಿಯನ್ನು ಪಡೆದು ಗಣಿತ ಹಾಗೂ ಸಂಖ್ಯಾಶಾಸ್ತ್ರದ ವಿಧಾನಗಳ ಮೂಲಕ ವಿಶ್ಲೇಷಣೆ ಮಾಡಿದರೆ, ಇನ್ನೂ ಕೆಲವರು ಪ್ರಸ್ತುತ ಲಭ್ಯವಿದ್ದ ಮಾಹಿತಿ ಹಾಗೂ ನೀತಿಗಳ ಆಶಯ ವಿಶ್ಲೇಷಣೆಯಲ್ಲಿ ತೊಡಗಿದ್ದಾರೆ. ಹಲವಾರು ಮಹಿಳಾ ಸಂಶೋಧಕರು ಆಳವಾದ

ಸಂದರ್ಶನ ಅಥವಾ ಬದುಕಿನ ಅನುಭವಗಳನ್ನು ಕೇಳುತ್ತ ಸತ್ಯ ಸಂಗತಿಗಳ ಶೋಧನೆಯನ್ನು ನಡೆಸಿದ್ದಾರೆ. ಹೀಗೆ ಹಲವಾರು ವಿಧಾನಗಳ ಮೂಲಕ ಇಂದು ಸ್ತ್ರೀವಾದಿ ಸಂಶೋಧನೆಯು 'ಮಹಿಳಾ ಜ್ಞಾನವೃದ್ಧಿ'ಯಲ್ಲಿ ತೊಡಗಿದೆ.

### ಸಂದರ್ಭ ಗ್ರಂಥಗಳು


Harding Sandra (ed), (1987), Feminsim and Methodology : Bloomington, Indiana University Press.

Harding Sandra, (1986), The Science question in Feminsim, Cornell University Press, Ithaca.

Harding Sandra, (1991), Whose Science? Whose Knowledge? Thinking from Women's Lives, Cornell University Press.

Jayarathe, Epstein and Stewart, (1991), Qualitative and Quantitative Methods in Social Sciences Current Feminist Issues and Practical Strategies in Fonow and Cook (ed) Beyond Methodology : Feminist Scholarship as lived Research. Bloomington, Indiana University Press.

Mies, Maria, (1991), Women's Research or Feminist Research? The Debate Surrounding Feminist Science and Methodology in Fonow and Cook (ed) Op.cit.

Nielsen, Joyce Mc Carl (ed), (1990), Feminist Research Methods : Exemplary Readings in Social Sciences, West View Press Boulder.

Reinharz Shulamit, (1992), Feminist Methods in Social Research, Oxford University Press, Newyork.

# ಫೆಮಿನಿಸ್ಟ್ ಎತ್ನೊಗ್ರಫಿ : ಸಂಶೋಧನಾ ವಿಧಾನ ಮತ್ತು ವೈಧಾನಿಕತೆಯ ಕುರಿತು ಕೆಲವು ಟಿಪ್ಪಣಿಗಳು

ಎಚ್. ನಿಖಿಲಾ

'ಫೆಮಿನಿಸ್ಟ್' ಎಂದು ಕರೆಯಲ್ಪಡುವ ಅಧ್ಯಯನಗಳು ಸಮಾಜಶಾಸ್ತ್ರ, ತತ್ವಶಾಸ್ತ್ರ, ಸೈಕೊ-ಅನಾಲಸಿಸ್, ಮಾನವಶಾಸ್ತ್ರ, ಮಹಿಳಾ ಅಧ್ಯಯನ, ಫಿಲ್ಮ್ ಅಧ್ಯಯನ, ಸಾಹಿತ್ಯ ಅಧ್ಯಯನ, ಶಿಕ್ಷಣಶಾಸ್ತ್ರ ಹೀಗೆ ಅನೇಕ ಅಧ್ಯಯನಶಾಸ್ತ್ರಗಳಲ್ಲಿ ಬಂದಿವೆ. ಬೇರೆ ಬೇರೆ ದೇಶಗಳಲ್ಲಿ-ಆಫ್ರಿಕ, ಫ್ರಾನ್ಸ್, ಬ್ರೆಜಿಲ್, ಅಮೇರಿಕ, ಬಾಂಗ್ಲದೇಶ್, ಭಾರತ, ಚೈನ, ಮುಂತಾದವು ಮತ್ತು ಬೇರೆ ಬೇರೆ ರಾಜಕೀಯ ನೆಲೆಗಳಿಂದ-ಬ್ಲಾಕ್, ದಲಿತ ವುಮನಿಸ್ಟ್, ಮಾರ್ಕಸಿಸ್ಟ್, ಪೋಸ್ಟ್-ಕಲೋನಿಯಲ್, ಮುಂತಾದವು-ಫೆಮಿನಿಸ್ಟ್ ಅಧ್ಯಯನಗಳು ನಡೆದಿವೆ. ಹೀಗಾಗಿ ಫೆಮಿನಿಸ್ಟ್ ಅಧ್ಯಯನಕ್ಕೆ ಏಕಸೂತ್ರವಿರದೆ, ಅದು ಅಧ್ಯಯನ ನಡೆಯುವ ಅಧ್ಯಯನಶಾಸ್ತ್ರ, ದೇಶ-ಕಾಲ, ಐಡಿಯಾಲಜಿಗಳು ರೂಪಿಸುವಂತೆ ರೂಪಗೊಳ್ಳುತ್ತದೆ. ಯಾವುದೇ ಅಧ್ಯಯನದ ಐಡಿಯಾಲಜಿ ವಿಶ್ಲೇಷಿಸುವಾಗ ಅಧ್ಯಯನ ರೂಪಗೊಳ್ಳುವ ಅಧ್ಯಯನಶಾಸ್ತ್ರದ ಕಡೆಗೂ ಗಮನಹರಿಸಬೇಕಾಗುತ್ತದೆ. ಇದು ಫೆಮಿನಿಸ್ಟ್ ಅಧ್ಯಯನದ ವಿಚಾರದಲ್ಲಂತೂ ತುಂಬ ಮುಖ್ಯವಾಗುತ್ತದೆ. ಏಕೆಂದರೆ ಫೆಮಿನಿಸ್ಟ್ ಅಧ್ಯಯನ ಒಂದು ಅಧ್ಯಯನಶಾಸ್ತ್ರದಲ್ಲಿ ನೆಲೆಸಿದ್ದರೂ, ಅದರ ಕಾಣ್ಕೆಗಳು, ಪರಿಣಾಮಗಳು ಬರೀ ಆ ಅಧ್ಯಯನಶಾಸ್ತ್ರಕ್ಕೆ ಸೀಮಿತವಾಗಿರದೆ ಬೇರೆ ಬೇರೆ ಅಧ್ಯಯನಶಾಸ್ತ್ರಗಳಿಗೂ ಅವು ಸಂಚರಿಸುತ್ತವೆ. ಫೆಮಿನಿಸ್ಟ್ ಅಧ್ಯಯನವನ್ನು ಒಂದು ಬಹುಶಾಸ್ತ್ರೀಯ ಜಾಲ (Feminist studies as a network of many disciplines)ದಂತೆ ಕಲ್ಪಿಸಿಕೊಳ್ಳಬಹುದು.

ಹೀಗೆ ಒಂದು ಅಧ್ಯಯನದ ಕಾಣ್ಕೆಗಳನ್ನು, ಪರಿಣಾಮಗಳನ್ನು ಒಂದು ಅಧ್ಯಯನ ಶಾಸ್ತ್ರದಿಂದ ಇನ್ನೊಂದಕ್ಕೆ ಎಕ್ಸ್ಟ್ರಪೊಲೇಟ್ ಮಾಡುವಾಗ ಸಂಶೋಧನಾ ಮೂಲಗಳು, ವಿಧಾನ, ವೈಧಾನಿಕತೆಗಳ ಕಡೆ ಗಮನಹರಿಸಬೇಕಾಗುತ್ತದೆ. ಪ್ರಸ್ತುತ ಲೇಖನವು ಮಾನವ ಶಾಸ್ತ್ರದಲ್ಲಿ ರೂಪಗೊಂಡಂತಹ 'ಎತ್ನೊಗ್ರಫಿ' ಸಂಶೋಧನಾ ವಿಧಾನವನ್ನು ಫೆಮಿನಿಸ್ಟ್ ಅಧ್ಯಯನದಲ್ಲಿ ಯಾಕೆ ಅಳವಡಿಸಲಾಗುತ್ತಿದೆ; ಎತ್ನೊಗ್ರಫಿಯ ವೈಧಾನಿಕತೆಯ ಬಿಕ್ಕಟ್ಟನ್ನು ಫೆಮಿನಿಸ್ಟ್ ಅಧ್ಯಯನ ಯಾವ ರೀತಿ ಎದುರಿಸುತ್ತೆ - ಈ ವಿಷಯಗಳನ್ನು ಪ್ರಸ್ತಾಪಿಸುತ್ತದೆ.

ವೈಧಾನಿಕತೆಯ ಪ್ರಶ್ನೆ ಸಂಶೋಧನಾ ವಿಧಾನ, ಕ್ರಮಗಳನ್ನು ಮಾತ್ರ ಒಳಗೊಂಡಿರದೆ, ಜ್ಞಾನೋತ್ಪನ್ನದ ರಾಜಕೀಯವನ್ನೂ ಒಳಗೊಂಡಿದೆ ಎಂಬುದನ್ನು ಇಲ್ಲಿ ವಿಸ್ತರಿಸಿದ್ದೇನೆ.

ಯಾವುದೇ ಸಂಶೋಧನೆಯ ಉದ್ದೇಶ ಜ್ಞಾನ ಸಂಪಾದನೆ. ಹೀಗೆ ಹೇಳುವಾಗ ಏಳುವ ಇನ್ನೊಂದು ಪ್ರಶ್ನೆ, ಯಾವುದನ್ನು 'ಜ್ಞಾನ' ಎಂದು ಪರಿಗಣಿಸಲಾಗುತ್ತೆ ಎಂಬುದು. ಹಾಗೇ 'ಇದು ಜ್ಞಾನ' ಎಂದು ಪ್ರತಿಪಾದಿಸಲು ಮನುಷ್ಯನಿಗಿರುವ ಆಸಕ್ತಿ ಏನು?

ಹ್ಯಾಬರ್ಮಾಸ್ (೧೯೭೧) ಎಂಬ ಜರ್ಮನ್ ತತ್ವಜ್ಞಾನಿ ಜ್ಞಾನ ಪ್ರತಿಪಾದನೆಯನ್ನು ಪುಷ್ಟಿಗೊಳಿಸುವ ಮನುಷ್ಯರ ಆಸಕ್ತಿಯನ್ನು ಮೂರು ವಿಭಾಗಗಳಾಗಿ ನೋಡಿದ್ದಾರೆ :

೧. ಪ್ರವಾದಿಸುವುದು - ಇದರ ಪ್ರಕಾರ ಮುಂದೆ ಬರುವುದನ್ನು ತಿಳಿ ಹೇಳುವುದು 'ಜ್ಞಾನ'; ಉದಾ: ಪಾಸಿಟಿವಿಸ್ಟ್ ಸಂಶೋಧನಾ ಮಾದರಿಗಳು.
೨. ಅರ್ಥೈಸುವುದು - ಇದರ ಪ್ರಕಾರ ಯಾವುದೇ ವಿದ್ಯಮಾನ, ಮನುಷ್ಯರಲ್ಲಿ ಅಥವಾ ಅವರ ಪ್ರಪಂಚದಲ್ಲಿ, ಹೇಗೆ ಕೆಲಸ ಮಾಡುತ್ತೆ ಎಂದು ತಿಳಿ ಹೇಳುವುದು 'ಜ್ಞಾನ'; ಉದಾ: ಹರ್ಮೆನ್ಯೂಟಿಕ್, ಫಿನೊಮೆನೊಲೋಜಿಕಲ್ ಸಂಶೋಧನಾ ಮಾದರಿಗಳು
೩. ವಿಮುಕ್ತಿಸುವುದು - ಇದರ ಪ್ರಕಾರ ಈಗಿರುವ ಅಸಮಾನ ವ್ಯವಸ್ಥೆಯಿಂದ ಸಮಾನತೆ ಯೆಡೆಗೆ ಕೈತೋರಿಸುವುದು 'ಜ್ಞಾನ'; ಉದಾ: ಕ್ರಿಟಿಕಲ್ ಮಾದರಿಗಳು.

ಎತ್ನೊಗ್ರಫಿ ಪಾಸಿಟಿವಿಸ್ಟ್ ಮಾದರಿಯಲ್ಲಿ ೧೯ನೇ-೨೦ನೇ ಶತಮಾನದಲ್ಲಿ ರೂಪ ಗೊಂಡು. ೧೯೭೦ರ ದಶಕದಲ್ಲಿ ಹರ್ಮೆನ್ಯೂಟಿಕ್ ಮಾದರಿಯಾಗಿ, ೮೦ರ ದಶಕದಲ್ಲಿ ಕ್ರಿಟಿಕಲ್ ಮಾದರಿಯಾಗಿ ರೂಪಗೊಂಡಿರುವ ಕತೆಯನ್ನು ಈ ಲೇಖನ ನಿರೂಪಿಸುತ್ತದೆ. ಅಂದರೆ ಎತ್ನೊಗ್ರಫಿಯ 'ಜ್ಞಾನ' ಪ್ರವಾದಿಸುವ, ಅರ್ಥೈಸುವ ಮತ್ತು ಇತ್ತೀಚೆಗೆ ವಿಮುಕ್ತಿಸುವ 'ಜ್ಞಾನ'ವಾಗಿ ಬೇರೆ ಬೇರೆ ಕಾಲದಲ್ಲಿ, ಬೇರ ಬೇರೆ ಮಾದರಿಗಳಲ್ಲಿ ರೂಪತಾಳಿದೆ.

ಎತ್ನೊಗ್ರಫಿ ಮಾನವಶಾಸ್ತ್ರದಲ್ಲಿ ೧೯ನೇ ಶತಮಾನದ ಕೊನೆಗೆ ಮತ್ತು ೨೦ನೇ ಶತಮಾನದ ಆರಂಭವಲ್ಲಿ ಯೂರೋಪಿಯನ್ನರಿಂದ ಹೆಚ್ಚಾಗಿ ಬಳಕೆಗೆ ಬಂತು. ಬ್ರೊನಿಸ್ಲಾ ಮಾಲಿನೌಸ್ಕಿಯ ಪೆಸಿಫಿಕ್ ಮಹಾಸಮುದ್ರದ ಟ್ರೊಬ್ರಿಯಂಡ್ ದ್ವೀಪ ವಾಸಿಗಳ ಎತ್ನೊಗ್ರಫಿಕ್ ಅಧ್ಯಯನ ಮಾನವಶಾಸ್ತ್ರದಲ್ಲಿ ಒಂದು ಕ್ಲಾಸಿಕ್ ಎಂದು ಪರಿಗಣಿಸಲಾಗಿದೆ. ಭಾರತದಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ರಿಸ್ಲೆ, ಕ್ರೂಕ್, ತರ್ಸ್ಟನ್ ವೆರ್ರಿಯರ್ ಎಲ್ವಿನ್, ಮುಂತಾದವರು ಭಾರತದಲ್ಲಿನ ಜಾತಿ ಸಮುದಾಯಗಳ, ಬುಡಕಟ್ಟು ಜನಾಂಗದವರ ಎತ್ನೊಗ್ರಫಿಕ್ ಅಧ್ಯಯನ ಕೈಗೊಂಡರು. ಅವರ ಪದ್ಧತಿಗಳನ್ನು, ವಿಧಿ ವಿಧಾನಗಳನ್ನು ಸಂಗ್ರಹ ಮಾಡಿ ಬೇರೆ ಬೇರೆ ಸಮುದಾಯಗಳ ಬಗ್ಗೆ ಜ್ಞಾನ ಉತ್ಪನ್ನ ಮಾಡಿದರು. ಹೀಗಾಗಿ ಎತ್ನೊಗ್ರಫಿ ಯೂರೋಪಿಯನ್ನರು ಬಳಸಿ ಪಳಗಿಸಿದ ವಿಧಾನವಾಯಿತು. 'ಪುರಾತನ' ಸಂಸ್ಕೃತಿಗಳ ಅಧ್ಯಯನ ಈ ವಿಧಾನದ ಉದ್ದೇಶ ಮತ್ತು ವಸ್ತುವಾಗಿತ್ತು.

ಎತ್ನೊಗ್ರಫಿ ವಿಧಾನದಲ್ಲಿ ಅಧ್ಯಯನಕಾರ ಮಾಡುವುದು; ಕ್ಷೇತ್ರಕಾರ್ಯ; ಅಧ್ಯಯನ ಮಾಡುವ ಜನರ ವಿಶ್ವಾಸಗಳಿಸುವುದು; ಅವರಲ್ಲಿ ಮಾಹಿತಿ ಕೊಡುವವರ ಆಯ್ಕೆ; ಅವರ ಅವಲೋಕನ; ಅವರಿಂದ ಕೈಫಿಯತ್ತು, ಸಂದರ್ಶನ ತೆಗೆದುಕೊಳ್ಳುವುದು; ಅವರ

ವಂಶಾವಳಿಗಳನ್ನು ರಚಿಸುವುದು; ಕ್ಷೇತ್ರ ಟಿಪ್ಪಣಿ ಮತ್ತು ದಿನಚರಿ ಬರಹ; ಫೋಟೊ, ವಿಡಿಯೊ, ಟೇಪ್ರೆಕಾರ್ಡರ್ ಬಳಸಿ ಮಾಹಿತಿಗಳಿಸುವುದು, ಇವು ಮುಖ್ಯವಾದ ಕ್ರಮಗಳು.

ಕ್ಲಿಫರ್ಡ್ ಗಿಯರ್ಟ್ಸ್ ತಮ್ಮ -**The Interpretation of Cultures (1973)** ಪುಸ್ತಕದಲ್ಲಿ ಎತ್ನೊಗ್ರಫಿಯ ಉದ್ದೇಶ ಒಂದು ಜನಾಂಗದ ಸಂಜ್ಞೆ ಸಂಕೇತಗಳನ್ನು ಅರ್ಥೈಸುವುದು ಎಂದು ವಾದಿಸುತ್ತಾರೆ. ಒಂದು ಸಮುದಾಯವನ್ನು ಅಧ್ಯಯನ ಮಾಡುವಾಗ ಉದಾಹರಣೆಗೆ, ಕಣ್ಣು ಮಿಟುಕಿಸುವುದು/ಕಣ್ಣು ಹೊಡೆಯುವುದು ಸಾಂದರ್ಭಿಕವಾಗಿ ಯಾವುದರ ಸೂಚಕ ಎಂದು ವಿವರಿಸಬೇಕಾಗುತ್ತದೆ. ಅಂದರೆ ಒಂದು ಸಂದರ್ಭದಲ್ಲಿ ಕಣ್ಣು ಹೊಡೆಯುವುದನ್ನು ಆ ಸಮುದಾಯದವರು ಹೇಗೆ ಅರ್ಥೈಸುತ್ತಾರೆ; ಕಣ್ಣದಿರುವುದಕ್ಕೂ, ಮಿಟುಕಿಸುವುದಕ್ಕೂ, ಹೊಡೆಯುವುದಕ್ಕೂ, ಈ ಕ್ರಿಯೆಗಳ ಅಣಕಕ್ಕೂ, ಅಭ್ಯಾಸಕ್ಕೂ ಗೊಂದಲಗೊಳ್ಳದೆ ಸಂದರ್ಭಕ್ಕೆ ತಕ್ಕಾಗಿ ಸಂಕೇತಗಳ ಉತ್ಪತ್ತಿ, ಗ್ರಹಿಕೆ, ಅರ್ಥೈಸುವಿಕೆ ಹೇಗೆ ನಡೆಯುತ್ತದೆ - ಅವುಗಳ ವಿವರಣೆ ಎತ್ನೊಗ್ರಫಿಕ್ ಅಧ್ಯಯನದ ಉದ್ದೇಶವಾಗಬೇಕು ಎಂದು ಗಿಯರ್ಟ್ಸ್ ಹೇಳುತ್ತಾರೆ. ಒಂದು ಜನಾಂಗವನ್ನು ಅಧ್ಯಯನ ಮಾಡುವುದೆಂದರೆ ಅರ್ಥಕಾಂಡ ಹುಡುಕುವುದಲ್ಲದೆ, ಅವರ ಸಂಕೇತಗಳ ಅಧ್ಯಯನ - 'thick description' - ಎಂದು ತಮ್ಮ 'interpretive theory of culture'ನಲ್ಲಿ ಮಂಡಿಸಿದ್ದಾರೆ. ಇಲ್ಲಿ ಎತ್ನೊಗ್ರಫಿ ಒಂದು ಹರ್ಮೆನ್ಯೂಟಿಕ್ ಮಾದರಿಯಲ್ಲಿ ರೂಪಗೊಂಡು, ಒಂದು ಸಂಜ್ಞೆ ವ್ಯವಸ್ಥೆಯನ್ನು ಅರ್ಥೈಸುವ 'ಜ್ಞಾನ'ವಾಗಿರುವುದನ್ನು ಕಾಣುತ್ತೇವೆ.

ಅಮೆರಿಕದ ಸ್ಟಾನ್ಫೋರ್ಡ್ ವಿಶ್ವವಿದ್ಯಾಲಯದ ಜಾರ್ಜ್ ಮತ್ತು ಲೂಯಿ ಸ್ಪಿಂಡ್ಲರ್ ಎಂಬ ಅಭ್ಯಸಿಸುತ್ತಿರುವ ಮಾನವಶಾಸ್ತ್ರಜ್ಞರು ಒಳ್ಳೆಯ ಎತ್ನೊಗ್ರಫಿ ಎನಿಸಿಕೊಳ್ಳಲು ಇರಬೇಕಾದ ಅಂಶಗಳನ್ನು ಹೀಗೆ ಪಟ್ಟಿ ಮಾಡಿದ್ದಾರೆ :

- ಸಾಂದರ್ಭಿಕ ಅವಲೋಕನ
- ಸಾಂದರ್ಭಿಕ ಪ್ರಮೇಯ ರೂಪಣೆ
- ದೀರ್ಘಕಾಲ ಅವಲೋಕನ
- ಸ್ಥಳೀಯದ ದೃಷ್ಟಿಕೋನಕ್ಕೆ ಗಮನ
- ಅವರ ಸಾಮಾಜಿಕ ಜ್ಞಾನಕ್ಕೆ ಗಮನ
- ಅಧ್ಯಯನ ಸಲಕರಣೆಗಳ ಸಾಂದರ್ಭಿಕ ಬಳಕೆ
- ರೆಕಾರ್ಡಿಂಗ್ ಉಪಕರಣಗಳ ಸೂಕ್ತ ಬಳಕೆ
- ಸಂಸ್ಕೃತಿಗಳ ಕುರಿತ ತೌಲನಾತ್ಮಿಕ ದೃಷ್ಟಿಕೋನ
- ಮಾಹಿತಿದಾರರಿಂದ 'ಸಹಜವಾಗಿ' ವಿಷಯ ಸಂಗ್ರಹ
- ಸಾಮಾಜಿಕ ಒಡನಾಟದ ಮೇಲೆ ಪ್ರಭಾವ ಬೀರುವ ಅಂಶಗಳನ್ನು ಮುಚ್ಚುಮರೆಯಿಲ್ಲದೆ ಗೊತ್ತುಪಡಿಸುವುದು.

ಈಗ ಎಥ್ನೊಗ್ರಫಿಕ್ ವಿಧಾನ ಮಾನವಶಾಸ್ತ್ರದಲ್ಲಲ್ಲದೆ, ಬೇರೆ ಬೇರೆ ಶಾಸ್ತ್ರಗಳಲ್ಲೂ ಬಳಕೆಯಾಗುತ್ತಿದೆ. ಇಂಟರ್ನೆಟ್‌ನಲ್ಲಿ ಹುಡುಕಿದರೆ ಸಿಗುವ ಕೆಲವು ಅಧ್ಯಯನಗಳು : A Critical Ethnography on the Production of the Indian MBA discourse"; "Maritime Ethnography on the construction of boats together with the environment and context in which they are used", "Ethnography of the University"; "Ethnography of Speaking"; "Ethnography of Viewing **Hum Apke Hai Kaun"**; "Electoral Ethnography"; "Ethnographic Study of 3 hi-tech firms to see whether they are hostile or welcoming to women". ಎಥ್ನೊಗ್ರಫಿ ಈಗ ನೋಡಿದರೆ ಅನೇಕ ಅಧ್ಯಯನಶಾಸ್ತ್ರಗಳಲ್ಲಿ ಮತ್ತು ಅಕಾಡೆಮಿಕ್ ಉದ್ದೇಶ ಅಲ್ಲದೆ ಬೇರೆ ಉದ್ದೇಶಗಳಿಗೂ ಬಳಸುವ ಅಧ್ಯಯನ ವಿಧಾನವಾಗಿರುವ ಸೂಚನೆ ಇಲ್ಲಿದೆ.

ಎಥ್ನೊಗ್ರಫಿ ವಿಧಾನ ಅನೇಕ ಅಧ್ಯಯನಶಾಸ್ತ್ರಗಳಲ್ಲಿ ಬಳಕೆಯಾದರೂ ಅಧ್ಯಯನ ಸಂದರ್ಭಾನುಸಾರವಾಗಿ ವೈಧಾನಿಕತೆಗೆ ಸಂಬಂಧಪಟ್ಟ ಪ್ರಶ್ನೆಗಳು ಬರುತ್ತವೆ: ಅಂದರೆ ಒಂದು ಅಧ್ಯಯನದ ಉದ್ದೇಶವನ್ನು ಪೂರೈಸಲು ಯಾವುದು ಸೂಕ್ತವಾದ ವಿಧಾನ? ಆ ವಿಧಾನದ ಬಳಕೆಯಿಂದ ಅಧ್ಯಯನದಲ್ಲಿ ಉತ್ಪನ್ನವಾಗುವ ಜ್ಞಾನದ ಲಕ್ಷಣ ಏನು? ಆ ವಿಧಾನದ ಬಳಕೆಯಿಂದ ಅಧ್ಯಯನಕಾರನಿಗೆ ಏನನ್ನು ನೋಡಬಹುದು. ಏನನ್ನು ನೋಡಲಾಗದು? ಅಧ್ಯಯನಕಾರ-ಅಧ್ಯಯನವಸ್ತು ನಡುವೆ ಯಾವ ರೀತಿ ಆ ವಿಧಾನ ಮಧ್ಯಸ್ತಿಕೆ ನಡೆಸುತ್ತೆ?

ಮಾನವಶಾಸ್ತ್ರದಲ್ಲಿ ಎಥ್ನೊಗ್ರಫಿ ವೈಧಾನಿಕತೆ ಕುರಿತು ಅನೇಕ ಚರ್ಚೆಗಳು ನಡೆದಿವೆ. ಈ ಚರ್ಚೆಗಳು ಹೆಚ್ಚಾಗಿ ಎಥ್ನೊಗ್ರಫಿ ಪಾಸಿಟಿವಿಸ್ಟ್ ಮಾದರಿಯಲ್ಲಿ ಉತ್ಪನ್ನ ಮಾಡುವ 'ಜ್ಞಾನ'ದ ಕುರಿತಾದವು. ಉದಾಹರಣೆಗೆ, ಬ್ರಿಟಿಷರು ವಸಾಹತುಶಾಹಿ ಸಂದರ್ಭದಲ್ಲಿ ಎಥ್ನೊಗ್ರಫಿಕ್ ಅಧ್ಯಯನದಿಂದ ಭಾರತದ ಸಮಾಜದ ಬಗ್ಗೆ ಜ್ಞಾನಸಂಪಾದನೆ ಮಾಡಿ, ಒಂದು 'ಎಥ್ನೊಗ್ರಫಿಕ್ ಸ್ಟೇಟ್' ನಿರ್ಮಿಸಿ, ಮಾನವಶಾಸ್ತ್ರದ ಜ್ಞಾನದಿಂದ ಭಾರತೀಯರನ್ನು ಹಿಡಿತದಲ್ಲಿಟ್ಟುಕೊಂಡು, ತಮ್ಮ ದಬ್ಬಾಳಿಕೆಯನ್ನು ಸಮರ್ಥಿಸಿಕೊಂಡರು ಎಂದು ಇತ್ತೀಚಿನ ದಿನಗಳಲ್ಲಿ ನಿಕಲಸ್ ಡರ್ಕ್ಸ್ (೨೦೦೨) ಅವರು ವಾದಿಸಿದ್ದಾರೆ. ಥರ್ಸ್ಟನ್, ಮುಲ್ಲಾಲಿ ಯಂತವರು ಮದುವೆ, ಸಾವು, ಇತ್ಯಾದಿಗಳಿಗೆ ಸಂಬಂಧಪಟ್ಟ ವಿಧಿವಿಧಾನಗಳನ್ನು ಜಾತಿಜಾತಿ ಗಳಲ್ಲಿ ಅಧ್ಯಯನ, ಸರ್ವೆಗಳ ಮೂಲಕ ಸಂಗ್ರಹಿಸಿ, ಭಾರತೀಯರ ಪದ್ಧತಿಗಳನ್ನು ಬರ್ಬರ ವೆಂದು ಕಂಡು, ಭಾರತೀಯ ಸಮಾಜದ ಸುಧಾರಣೆಗೆ ಒತ್ತಾಯಿಸುವ ಮೂಲಕ ವಸಾಹತುಶಾಹಿಗೊಳಗಾದವರ ದೇಹವನ್ನು ಬ್ರಿಟಿಷರು ಒಂದು ಎಥ್ನೊಗ್ರಫಿಕ್ ಪತ್ರ ವಾಗಿಸಿದರು ಎಂದು ಡರ್ಕ್ಸ್ ವಾದಿಸುತ್ತಾರೆ. ಎಥ್ನೊಗ್ರಫಿ ವಸಾಹತುಶಾಹಿಯನ್ನು ನಿರ್ಮಿಸಲು, ಬ್ರಿಟಿಷರ ಅಧಿಕಾರ, ದಬ್ಬಾಳಿಕೆಯನ್ನು ಸಮರ್ಥಿಸಲು ಹೇಗೆ ರೂಪಗೊಂಡಿತು ಮತ್ತು ಈ ವಿಧಾನವನ್ನು ಬಳಸಿಕೊಂಡು ಉತ್ಪನ್ನ ಮಾಡಿದ ಜ್ಞಾನ ರಾಜಕೀಯ ಏನೆಂಬುದು ಇಲ್ಲಿ ಚರ್ಚೆಯಾಗಿದೆ.

ಎ.ಕೆ. ರಾಮಾನುಜನ್‌ರವರ ಸಣ್ಣಕತೆ "ಅಣ್ಣಯ್ಯನ ಮಾನವಶಾಸ್ತ್ರ" ಅಧಿಕೃತ ಜ್ಞಾನ, ನೋಟ (gaze), ಸ್ಥಳೀಯ ಮಾಹಿತಿಗಾರರ ಪಾತ್ರ, ಸಬ್ಜೆಕ್ಟ್-ಆಬ್ಜೆಕ್ಟ್ ನಡುವಿನ ಸಂಬಂಧ ಈ ವಿಷಯಗಳನ್ನು ಚರ್ಚಿಸುವ ಮೂಲಕ ಎತ್ನೊಗ್ರಫಿಯನ್ನು ಸಮಸ್ಯೀಕರಿಸಿದೆ. ದೂರದ ಅಮೇರಿಕದಲ್ಲಿ ಪಾಶ್ಚಾತ್ಯರ ಮಾನವಶಾಸ್ತ್ರದ ಡೀ-ಫೆಮಿಲಿಯರೈಸ್ಡ್ ಕಣ್ಣಿನಿಂದ ತನ್ನ ಸಂಸ್ಕೃತಿಯನ್ನು ಪುನರ್-ಶೋಧಿಸಿದ ಉತ್ಸಾಹದಲ್ಲಿದ್ದ ಅಣ್ಣಯ್ಯನಿಗೆ, ಮಾನವಶಾಸ್ತ್ರದ ಪುಸ್ತಕದಲ್ಲಿ ಹತ್ತಿರದ, ತೀರಾ ಫೆಮಿಲಿಯರ್ ನೋಟ ಕಂಡಾಗ ಆಗುವ ಗೊಂದಲದ ಕತೆ "ಅಣ್ಣಯ್ಯನ ಮಾನವಶಾಸ್ತ್ರ". ತನಗೆ ಗೊತ್ತಾಗುವ ಮೊದಲೇ ಅಧಿಕೃತ ಜ್ಞಾನವಾಗಿ, ಫರ್ಗಸನ್ನಿನ ಎತ್ನೊಗ್ರಫಿಕ್ ಅಧ್ಯಯನ, **Hindusim : Custom and Ritual** ಪುಸ್ತಕ ದಲ್ಲಿ ತನ್ನ ಸಂಸಾರದ ವಿಷಯಗಳು - ತಂದೆಯ ಸಾವು, ತಾಯಿಯ ವೈಧವ್ಯ, ತಮ್ಮ ಖಾಸಗಿ ದುಃಖಗಳು ಸಾರ್ವಜನಿಕವಾಗಿ ವಸ್ತುನಿಷ್ಠ ಜ್ಞಾನವಾಗಿ ಬಿತ್ತರವಾಗಿರುವುದನ್ನು ಕಂಡು ಅಣ್ಣಯ್ಯನಿಗೆ ಆಘಾತವಾಗುತ್ತದೆ, ಸ್ಥಳೀಯ ಮಾಹಿತಿಗಾರನಾಗಿ ಫರ್ಗಸನ್ನಿನ ಅಧ್ಯಯನಕ್ಕೆ ಸಹಾಯ ಮಾಡಿದ ತನ್ನ ದಾಯಾದಿ ಬಗ್ಗೆ ಅಣ್ಣಯ್ಯನಿಗೆ ಉಂಟಾಗುವ ನಿಸ್ಸಹಾಯಕರೋಷದೊಂದಿಗೆ ಕತೆ ಕೊನೆಗೊಳ್ಳುತ್ತದೆ. ತನ್ನ ಸಂಸ್ಕೃತಿ ಮೇಲೆ ಮೊದಲು ಹಿತವೆನಿಸಿದ ಪಾಶ್ಚಾತ್ತ್ಯನ ನೋಟ, ಹೇಗೆ ಅನುಚಿತ, ಕ್ರೂರ ನೋಟವಾಗಿ ಪರಿವರ್ತಿಸಿತು ಎಂಬುದು ಕತೆಯಲ್ಲಿ ನಿರೂಪಿಸಲಾಗಿದೆ. ಬೇರೆಯವರ ಪ್ರತಿನಿಧೀಕರಣಕ್ಕೆ ಒಳಗಾದವರ ಬಲಹೀನತೆಯ ಕತೆ ಇದು. ಎಲ್ಲಕ್ಕಿಂತ, ಒಂದು ಸಂಸ್ಕೃತಿಯೊಳಗೆ ನಿಂತು ಹೊರಗಿನವರ ಅಧ್ಯಯನಕ್ಕೆ ಮಾಹಿತಿಗಾರನಾದವನ ಬೇಜವಾಬ್ದಾರಿತನ, ಅವನ ಸೂಕ್ಷ್ಮರಹಿತ ಮಧ್ಯಸ್ತಿಕೆಯ ಟೀಕೆ ಈ ಕತೆಯಲ್ಲಿದೆ.

ಡರ್ಕ್ಸ್ ಅವರ ವಾದದಲ್ಲಿ ಮತ್ತು ರಾಮಾನುಜನ್ ಅವರ ಕತೆಯಲ್ಲಿ ಉಲ್ಲೇಖಿಸಿರುವ ವೈಧಾನಿಕತೆಯ ಸಮಸ್ಯೆಗಳನ್ನು ಈಗ ಎತ್ನೊಗ್ರಫಿ ವಿಧಾನವನ್ನು ಬಳಸುವ ಯಾವುದೇ ಅಧ್ಯಯನ ಎದುರಿಸಬೇಕಾಗುತ್ತದೆ. ಅಂದರೆ, ಸಂಶೋಧಕ-ಸಂಶೋಧನೆಗೊಳಗಾದವರ ನಡುವೆ ಉಂಟಾಗುವ ಅಧಿಕಾರದ ಸಂಬಂಧ ಕುರಿತು ಮತ್ತು ಸಂಶೋಧನೆಗೊಂಡವರ, ಅವರ ಸಮಾಜದ, ಸಂಸ್ಕೃತಿಯ ಪ್ರತಿನಿಧೀಕರಣ ಕುರಿತು ಏಳುವ ಪ್ರಶ್ನೆಗಳನ್ನು ಒಂದು ಅಧ್ಯಯನ ಯಾವ ರೀತಿ ನಿರ್ವಹಿಸಬೇಕು ಎಂಬುದು ವೈಧಾನಿಕತೆಗೆ ಸಂಬಂಧಪಟ್ಟ ತೀರ್ಮಾನ. ಇಲ್ಲಿ ಬರುವ ಪ್ರಶ್ನೆ ಎತ್ನೊಗ್ರಫಿ ವಿಧಾನ ಒಂದು ಅಧ್ಯಯನದಲ್ಲಿ ಎಷ್ಟರಮಟ್ಟಿಗೆ ಸಂಶೋಧಕ ಸಂಶೋಧನೆಗೊಂಡವರ ಮೇಲೆ ಅಧಿಕಾರ ನಡೆಸಲು, ಸಮರ್ಥಿಸಲು ಜ್ಞಾನಸಂಪಾದನೆಯ ಹೆಸರಲ್ಲಿ ಬಳಕೆಯಾಗುತ್ತದೆ ಎನ್ನುವುದು; ಮತ್ತು ಈ ರೀತಿ ಉತ್ಪನ್ನವಾದ ಜ್ಞಾನ ಯಾರಿಗೆ ಸಹಾಯಕವಾಗಬಹುದು, ಯಾರಿಗೆ ಮಾರಕವಾಗಬಹುದು ಎನ್ನುವುದು. ಹೀಗೆ ಸಂಶೋಧನೆಗೊಳಗಾಗಿ ಪ್ರತಿನಿಧಿಗೊಂಡವರ ಇಷ್ಟಾನಿಷ್ಟಗಳ ಪ್ರಶ್ನೆ ಅಧ್ಯಯನ ಶಾಸ್ತ್ರಗಳಲ್ಲಿ "ಪ್ರತಿನಿಧೀಕರಣದ ಬಿಕ್ಕಟ್ಟು" ಒಡ್ಡಿದೆ.

ಎತ್ನೊಗ್ರಫಿಕ್ ಜ್ಞಾನದ ಈ ಸಮಸ್ಯೆಗಳ ಕುರಿತು ಮತ್ತು ಪ್ರತಿನಿಧೀಕರಣದ ಬಿಕ್ಕಟ್ಟು ಕುರಿತು ಎತ್ನೊಗ್ರಫಿ ವಿಧಾನವನ್ನು ಬಳಸುವ ಇತ್ತೀಚಿನ ಫೆಮಿನಿಸ್ಟ್ ಅಧ್ಯಯನಗಳು ಯಾವ

ನಿಲುವು ತಾಳಿವೆ ಎಂದು ಈಗ ನೋಡೋಣ. ಯಾವುದೇ ವಿಧಾನದ ಅಳವಡಿಕೆಗೆ ಫೆಮಿನಿಸ್ಟ್ ಅಧ್ಯಯನ ಕಟ್ಟುವ ಸಿದ್ಧಾಂತವನ್ನು ಫೆಮಿನಿಸ್ಟ್ ವೈಧಾನಿಕತೆ ಒಳಗೊಂಡಿರುತ್ತೆ. ಅಂದರೆ ಬಳಸಿದ ವಿಧಾನ ಫೆಮಿನಿಸ್ಟ್ ಉದ್ದೇಶಗಳಿಗೆ ಯಾವ ರೀತಿ ಸೂಕ್ತ ಮತ್ತು ಅದು ಉತ್ಪನ್ನ ಮಾಡುವ ಜ್ಞಾನ ಫೆಮಿನಿಸ್ಟ್ ಜ್ಞಾನಭಂಡಾರಕ್ಕೆ ಕೊಡುಗೆಯಾಗುತ್ತದೆಯೆ ಎಂಬುದು ಫೆಮಿನಿಸ್ಟ್ ವೈಧಾನಿಕತೆಯಲ್ಲಿ ನಿರ್ಧಾರವಾಗಬೇಕು. ಫೆಮಿನಿಸ್ಟರ ಪ್ರಕಾರ ಪ್ರತಿನಿಧೀಕರಣದ ಸಮಸ್ಯೆ -

೧. ಹೆಣ್ಣಿನ ಪ್ರತಿನಿಧೀಕರಣದಲ್ಲಿನ ನ್ಯೂನತೆ ಮತ್ತು ಸೂಕ್ತವಲ್ಲದ ಪ್ರತಿನಿಧೀಕರಣ.
೨. ಹೆಣ್ಣಿನ ಬರವಣಿಗೆಯನ್ನು, ಅವಳ ಪ್ರತಿನಿಧೀಕರಣದ ಬೇರೆ ಬೇರೆ ನಮೂನೆಗಳನ್ನು ನಿರ್ಲಕ್ಷಿಸಿ ಅನಧಿಕೃತಗೊಳಿಸಿರುವುದು.
೩. ಸಂಶೋಧಕ (ಹೆಣ್ಣು) ಮತ್ತು ಸಂಶೋಧನೆಗೊಳ್ಳುವರ (ಹೆಣ್ಣಿನ) ನಡುವಿನ ಸಾಮಾಜಿಕ ಅಂತರ ಅವರ ನಡುವೆ ತರುವ ಅಧಿಕಾರದ ತಾರತಮ್ಯ.

ಅಂದರೆ, ಪ್ರತಿನಿಧೀಕರಣದ ಸಮಸ್ಯೆ ಉಂಟಾಗಿರುವುದು ಎತ್ನೊಗ್ರಫಿ ವಿಧಾನವನ್ನು ಗಂಡಸರು ಬಳಸುವುದರಿಂದ ಅಥವಾ ಹೆಂಗಸರು ಬರೆದ ಎತ್ನೊಗ್ರಫಿಕ್ ವೃತ್ತಾಂತಗಳನ್ನು ಮೂಲೆಗುಂಪು ಮಾಡಿರುವುದರಿಂದ, ಇಲ್ಲವೇ ವರ್ಗ, ವರ್ಣಗಳ ತಾರತಮ್ಯವನ್ನು ಗಣನೆಗೆ ತೆಗೆದುಕೊಳ್ಳದೆ 'ಹೆಣ್ಣು' ಎಂಬ ಹೊಮೊಜಿನಸ್ ಕ್ಯಾಟಗರಿಯನ್ನು ಎತ್ನೊಗ್ರಫಿಕ್ ಅಧ್ಯಯನದಲ್ಲಿ ನಿರ್ಮಿಸಿರುವುದರಿಂದ ಎಂಬುದು ಫೆಮಿನಿಸ್ಟರ ಪರಿಕಲ್ಪನೆ. ಆದುದರಿಂದ, ಫೆಮಿನಿಸ್ಟರ ಪ್ರಕಾರ ಪ್ರತಿನಿಧೀಕರಣದ ಸಮಸ್ಯೆ ಎತ್ನೊಗ್ರಫಿ ವಿಧಾನದ ಸಮಸ್ಯೆಯಲ್ಲ, ವೈಧಾನಿಕತೆಯ ಸಮಸ್ಯೆ. ಹೀಗಾಗಿ, ಎತ್ನೊಗ್ರಫಿಯನ್ನು ಫೆಮಿನಿಸ್ಟ್ ಅಧ್ಯಯನಗಳು ತಮ್ಮ ಉದ್ದೇಶಗಳಿಗೆ ಅಳವಡಿಸಿಕೊಳ್ಳಲು ಹಿಂಜರಿದಿಲ್ಲ.

ಫೆಮಿನಿಸ್ಟ್ ಅಧ್ಯಯನಗಳು ಅನೇಕ ಆಧಾರಗಳ ಮೇಲೆ ಎತ್ನೊಗ್ರಫಿಯ ಬಳಕೆಯನ್ನು ಸಮರ್ಥಿಸಿಕೊಳ್ಳುತ್ತವೆ. ೧೯೬೦ರ ದಶಕದಲ್ಲಿ ಸಮಾಜವಿಜ್ಞಾನದಲ್ಲಾದ ಪರಿಮಾಣಾತ್ಮಕ ವಿಧಾನಗಳ ವಿರುದ್ಧ ಗುಣಾತ್ಮಕ ವಿಧಾನಗಳನ್ನು ಎತ್ತಿಹಿಡಿಯುವ ಚರ್ಚೆಗಳಿಂದ ಪ್ರಭಾವಿತರಾದ ಕೆಲವು ಫೆಮಿನಿಸ್ಟರು, ಪರಿಮಾಣಾತ್ಮಕ ಸಂಶೋಧನಾ ವಿಧಾನಗಳ ಬಗ್ಗೆ ಅಪನಂಬಿಕೆ ತೋರುತ್ತಾರೆ: ಅವುಗಳ ವಸ್ತುನಿಷ್ಠತೆ, ನಿಷ್ಪಕ್ಷಪಾತತೆ, ಸಾಧಾರಣೀಕರಣಗಳನ್ನು ಪ್ರತಿಪಾದಿಸುವುದು ಎಂದು ಅವರ ವಾದ. ಎತ್ನೊಗ್ರಫಿಯು ಗುಣಾತ್ಮಕ ವಿಧಾನವಾಗಿರುವುದರಿಂದ ಅಂಚಿಗೆ ನೂಕಲ್ಪಟ್ಟಿರುವ ಹೆಣ್ಣಿನ ಅನುಭವವನ್ನು ಎತ್ತಿಹಿಡಿಯಬಲ್ಲದು, ಅವಳಿಗೆ ಧ್ವನಿಕೊಡಬಹುದು ಎಂಬುದು ಅವರ ನಂಬಿಕೆ. ಹೆಣ್ಣನ್ನು ಒಂದು ಅಂಕಿಯಾಗಿ ಅಥವಾ ಗಂಡಿನಲ್ಲಿ ಸೇರಿ ಹೋದ ಒಂದು ಅಂಶವಾಗಿ ನೋಡದೆ, ಅವಳ ಜೀವನದ ಅನನ್ಯತೆಯನ್ನು ಎತ್ನೊಗ್ರಫಿ ವಿಧಾನ ತೋರಿಸಿಕೊಡಬಹುದು ಎನ್ನುತ್ತಾರೆ.

ಇನ್ನು ಕೆಲವು ಫೆಮಿನಿಸ್ಟರು ಎತ್ನೊಗ್ರಫಿ ವಿಧಾನವನ್ನು ಬಳಸಿ ಹೆಣ್ಣಿನ ಪ್ರತಿನಿಧೀಕರಣದ ನ್ಯೂನತೆಯನ್ನು ತುಂಬಬಹುದು ಎಂದು ವಾದಿಸುತ್ತಾರೆ. ಅವರ ಪ್ರಕಾರ ಹೆಣ್ಣಿನ ದಿನನಿತ್ಯದ

ಜೀವನದ ಆಗುಹೋಗುಗಳನ್ನು, ಅವರ ಅನುಭವವನ್ನು ಎತ್ತಿಹಿಡಿಯಲು ಎತ್ನೊಗ್ರಫಿಕ್ ವಿಧಾನವೇ ಸೂಕ್ತ. ಹಾಗೆಯೇ, ಹೆಂಗಸರೇ ಈ ವಿಧಾನವನ್ನು ಬಳಸುವುದರಿಂದ ಸೂಕ್ತ ಪ್ರತಿನಿಧೀಕರಣ ಸಾಧ್ಯವಾಗುವುದು ಎನ್ನುತ್ತಾರೆ. ಇನ್ನು ಕೆಲವು ಫೆಮಿನಿಸ್ಟರ ಪ್ರಕಾರ ಎತ್ನೊಗ್ರಫಿ ಮೊದಲಿನಿಂದಲೂ ಹೆಂಗಸರು ಬಳಸಿ ಪಳಗಿಸಿರುವ ವಿಧಾನ; ಆದರೆ ಪಾಸಿಟಿವಿಸಮ್‌ನ ಛಾಯೆಯಲ್ಲಿ ವಸ್ತುನಿಷ್ಠತೆಯನ್ನು ಎತ್ತಿಹಿಡಿದು ಶಾಸ್ತ್ರಗಳು ಹೆಂಗಸರ ಬರವಣಿಗೆ ವ್ಯಕ್ತಿನಿಷ್ಠ, ಬರೀ ಕಾಲ್ಪನಿಕ ಎಂದೂ, ಎತ್ನೊಗ್ರಫಿಕ್ ಅಧ್ಯಯನ ಅಲ್ಲವೇ ಅಲ್ಲ ಎಂದು ವಾದಿಸಿ ಕಡೆಗಣಿಸಿವೆ. ಅವುಗಳನ್ನು ಅಗೆದು ಹೊರ ತೆಗೆದು, ಅವುಗಳೂ ಎತ್ನೊಗ್ರಫಿಕ್ ಜ್ಞಾನ/ ಅಧ್ಯಯನ ಎಂದು ಪರಿಗಣಿಸಬೇಕು ಎಂದು ಕೆಲವು ಫೆಮಿನಿಸ್ಟರ ವಾದಿಸುತ್ತಾರೆ. ಉದಾ: ಹೆಂಗಸರು ಬರೆದಿರುವ ಪರ್ಯಟನಾ ಬರವಣಿಗೆ, ಕಾದಂಬರಿಗಳು ಇತ್ಯಾದಿಗಳಲ್ಲಿ ಎತ್ನೊಗ್ರಫಿಕ್ ವಿವರಗಳು ಹೇರಳವಾಗಿ ದೊರೆಯುತ್ತವೆ ಎನ್ನುತ್ತಾರೆ. ಇವೆಲ್ಲ ಚರ್ಚೆಗಳಲ್ಲಿ ಎತ್ನೊಗ್ರಫಿ ವಿಧಾನವನ್ನು ವಿಮುಕ್ತಿಸುವ 'ಜ್ಞಾನ' ಉತ್ಪನ್ನ ಮಾಡಲು ಬಳಸಲು ಸಾಧ್ಯವೆಂದು ನೋಡಿದ್ದಾರೆ.

ಆದರೆ ಇವೆಲ್ಲವುದಕ್ಕಿಂತ ಮುಖ್ಯ ಸಂಶೋಧಕ - ಸಂಶೋಧನೆಗೊಳಗೊಂಡವರ ನಡುವಿನ ಅಂತರದ ಸಮಸ್ಯೆಯನ್ನು ಫೆಮಿನಿಸ್ಟರು ಹೇಗೆ ಎದುರಿಸುತ್ತಾರೆ ಎಂಬುದು. ಈ ವಿಷಯದ ಬಗ್ಗೆ ಫೆಮಿನಿಸ್ಟರು ತೀಕ್ಷ್ಣವಾಗಿ ಆತ್ಮಶೋಧನೆ ನಡೆಸಿಕೊಂಡಿದ್ದಾರೆ. ಈ ಕಷ್ಟಕರವಾದ ಸಮಸ್ಯೆ ಎದುರಿಸಲು ಸೂಚಿಸಲಾಗಿರುವ ಮೂರು ಕ್ರಿಯಾತ್ಮಕ ಮಾರ್ಗೋಪಾಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ನೋಡೋಣ :

### ೧. ಪಾರ್ಟಿಸಿಪೇಟರಿ ಎತ್ನೊಗ್ರಫಿ

ಸಂಶೋಧನೆಗೊಂಡವರ ಜೊತೆಗೂಡಿ ಅವರೂ ಸಂಶೋಧನೆಯಲ್ಲಿ ಪಾಲ್ಗೊಳ್ಳುವ ಎತ್ನೊಗ್ರಫಿಕ್ ಅಧ್ಯಯನ, ಉದಾ: ಎಲಿಜಬತ್ ಎನ್ಸಲಿನ್ (೧೯೯೪) ಅವರ ನೇಪಾಳದ ಚಿಟ್ವಾನ್ ಜಿಲ್ಲೆಯ ಗುಂಜಾನಗರ ಹಳ್ಳಿಯಲ್ಲಿನ ಮಹಿಳಾ ಚಳುವಳಿಯ ಎತ್ನೊಗ್ರಫಿಕ್ ಅಧ್ಯಯನ. ಪಾಶ್ಚಾತ್ಯ ಮಾನವಶಾಸ್ತ್ರಜ್ಞೆ, ಫೆಮಿನಿಸ್ಟ್, ಅಲ್ಲದೆ ಅಲ್ಲಿನ ರಾಜಕೀಯದಲ್ಲಿ ನಿರತವಾಗಿದ್ದ, ಅದರಲ್ಲೂ ಮಹಿಳಾ ಚಳುವಳಿಯ ಮುಂದಾಳತ್ವ ವಹಿಸಿದ್ದ ಮನೆಯವರ ಸೊಸೆಯಾಗಿ ಎನ್ಸಲಿನ್ ಆ ಹಳ್ಳಿಯಲ್ಲಿದ್ದು ಓದು ಬರಹ ಬರದ ಹೆಂಗಸರಿಗೆ ಅಕ್ಷರಾಭ್ಯಾಸದ ಸಂದರ್ಭದಲ್ಲಿ ಹಾಡು, ಚರ್ಚೆ, ಮಾತುಕತೆಗಳ ಮೂಲಕ ಅವರಿಂದ ಮಾಹಿತಿ ಪಡೆದು, ಆ ಹೆಂಗಸರ ವಿಮರ್ಶಾತ್ಮಕ ಸಾಮರ್ಥ್ಯವನ್ನು ಜಾಗೃತಗೊಳಿಸಿ, ಸಂಶೋಧನೆಯ ಹಂತ ಹಂತದಲ್ಲೂ ಅವರನ್ನು ಭಾಗಿಗಳಾಗಿಸಿ, ಪಾಶ್ಚಾತ್ಯ ಓದುಗರಿಗೆ ಬೇಕಾದ 'ಸಂಸ್ಕೃತಿ ಬರಹ' ಮಾಡಲು ನಿರಾಕರಿಸುವ ಎತ್ನೊಗ್ರಫಿಕ್ ಅಧ್ಯಯನ ಎನ್ಸಲಿನ್‌ರದ್ದು. ಅಂದರೆ ಅಧ್ಯಯನಕಾರ 'ಒಳಗಿ'ನವರಾಗಿ - ಇಲ್ಲಿ ಮಹಿಳಾ ಚಳುವಳಿಯ ಭಾಗಿಯಾಗಿ, ಹಳ್ಳಿಯ ವಾಸಿಯಾಗಿ, ಕುಟುಂಬದ ಸದಸ್ಯೆಯಾಗಿ - 'ಹೊರಗೆ' ಆ ಸಂಸ್ಕೃತಿಯ ಬಗ್ಗೆ ಸಂಚರಿಸುವ ಜ್ಞಾನ ಯಾವ ರೀತಿಯದ್ದಾಗಿರಬೇಕು ಎನ್ನುವುದನ್ನು ಜಾಗರೂಕತೆಯಿಂದ ನಿರ್ಧರಿಸುವುದು ಒಂದು ರೀತಿಯ ಪಾರ್ಟಿಸಿಪೇಟರಿ ಎತ್ನೊಗ್ರಫಿ.

೨. ಆಂತ್ರೊಪಾಲಜಿ ಇನ್ ರಿವರ್ಸ್

ಇದು ಮೇರಿ ಜಾನ್ (೧೯೯೬) ಮಂಡಿಸಿರುವ ವಾದ. ಪಾಶ್ಚಿಮಾತ್ಯ ಜ್ಞಾನ, ಅದರಲ್ಲೂ ಪಾಶ್ಚಿಮಾತ್ಯ ಫೆಮಿನಿಸಮ್‌ನ ಕುರುಡು ಚುಕ್ಕೆಗಳನ್ನು ಗುರುತಿಸುವುದು ಈ ಬಗೆಯ ಅಧ್ಯಯನದ ಉದ್ದೇಶ. ಮೇರಿ ಜಾನ್ ಪ್ರಕಾರ ಪಾಶ್ಚಾತ್ಯ ಮಹಿಳೆಯರು ಪಾಶ್ಚಾತ್ಯರಲ್ಲದ ಮಹಿಳೆಯರ ಬಗ್ಗೆ ಬರೆದಾಗ ಈ ಎತ್ನೊಗ್ರಫಿಕ್ ಸಂಬಂಧ ಒಂದು ಕಂದಕ ಉಂಟು ಮಾಡುತ್ತೆ-ಪಾಶ್ಚಾತ್ಯ ಮಹಿಳೆಯರ ಭಾವನೆ 'ನಾವು ಫೆಮಿನಿಸ್ಟರು' ಒಂದು ಲೋಕದಲ್ಲಿದ್ದೇವೆ, 'ಬೇರೆ ಮಹಿಳೆಯರು' ಬೇರೊಂದು ಲೋಕದವರು, ಅವರು ಫೆಮಿನಿಸ್ಟರಲ್ಲ ಎಂಬುದು. ಇದಕ್ಕೆ ಮೇರಿ ಜಾನ್ ಕೇಳುವ ಪ್ರಶ್ನೆ "Why not an ethnography about being a feminist in other places?" ಮತ್ತೆ ಮೇರಿ ಜಾನ್ ಅವರು 'ಪಾಶ್ಚಾತ್ಯ' ಎಂಬುದನ್ನು ಅಧ್ಯಯನ ಕ್ಷೇತ್ರ (field) ಆಗಿ ಕಾಣುತ್ತ, "What kind of fieldnotes would I like to see carried back to a third world nation like India?" ಎಂದು ಕೇಳಿಕೊಳ್ಳುತ್ತಾರೆ. ಅಂದರೆ ಪಾಶ್ಚಾತ್ಯೇತರರು ಪಾಶ್ಚಾತ್ಯವನ್ನು, ಪಾಶ್ಚಾತ್ಯರನ್ನು ಎತ್ನೊಗ್ರಫಿಕ್ ಅಧ್ಯಯನದ ವಸ್ತುವಾಗಿಸುವಂತೆ ಮೇರಿ ಜಾನ್ ಅವರು ವಾದಿಸುತ್ತಾರೆ.

೩. ಫೀಲ್ಡ್‌ವರ್ಕ್ ಟು ಹೋಂವರ್ಕ್

ಅಧ್ಯಯನಕ್ಷೇತ್ರ 'ನಮ್ಮದಲ್ಲದ' 'ನಮ್ಮದಕ್ಕಿಂತ ಭಿನ್ನವಾದ' ಕ್ಷೇತ್ರ, ಆಗಿರದೆ 'ಮನೆ'ಯೇ ಸಂಶೋಧನಾ ಕ್ಷೇತ್ರವಾಗಬೇಕು. ಇದು ಕಮಲ ವಿಶ್ವೇಶ್ವರನ್ (೧೯೯೬) ಅವರ ವಾದ. ಫೆಮಿನಿಸ್ಟ್ ಎತ್ನೊಗ್ರಫರಸ್‌ರ ಅಧ್ಯಯನಕ್ಷೇತ್ರ 'ಬೇರೆಡೆ' ಇರದೆ, ತಮ್ಮ ನೆರೆಹೊರೆಯ ಜಾಗಗಳು, ಬೆಳೆದು ದೊಡ್ಡವರಾದ ಸ್ಥಳಗಳೇ, ಅಂದರೆ 'ಮನೆಯೇ' ಯಾಕಾಗಬಾರದೆನ್ನುತ್ತಾರೆ. ಬೇರೆಡೆ ಇದ್ದು 'ಮನೆಗೆ ಹಿಂದಿರುಗಿ' ಅದನ್ನು ನೋಡುವ ನೋಟ ಸಂಕೀರ್ಣವಾದದ್ದು; ಅದು ನಾವು ಬಿಟ್ಟುಬಂದ ಮನೆಯಾಗಿರುವುದಿಲ್ಲ: "Home once interrogated is a place we have never before been.... For indeed the countryside at home has always held promise of dangerous journeys" ಎನ್ನುತ್ತಾರೆ. ಇದು ಅವರು ಪಾಶ್ಚಾತ್ಯದಲ್ಲಿ ಅಧ್ಯಯನ ಮಾಡುವ ಪಾಶ್ಚಾತ್ಯೇತರರ ಕುರಿತು ಹೇಳಿದ್ದರೂ, ಬೇರೆಡೆಯಲ್ಲೂ ಅನ್ವಯವಾಗಬಹುದು. ರಾಮಾನುಜನ್‌ರವರ ಅಣ್ಣಯ್ಯನಂತೆ ಬೇರೆಯವರ ದೃಷ್ಟಿಯಿಂದ ಮನೆಯನ್ನು ನೋಡುವ ಬದಲು, ನಮ್ಮದೇ ಹೊಸ ದೃಷ್ಟಿಯಿಂದ ಮನೆಯನ್ನು ಪುನರ್-ಅವಲೋಕಿಸಿದರೆ, ಮನೆಯನ್ನು ಅಧ್ಯಯನದ ವಸ್ತುವಾಗಿಸಿದರೆ ಹೇಗೆ ಕಾಣಬಹುದು ಎಂಬ ವಿಚಾರ ಇಲ್ಲಿ ಪ್ರಸ್ತಾಪವಾಗಿದೆ. ಎತ್ನೊಗ್ರಫಿ ಅಧ್ಯಯನ 'ಕ್ಷೇತ್ರ ಕಾರ್ಯದ' ಬದಲು 'ಮನೆ ಕಾರ್ಯ' ಆಗಿ ಪರಿವರ್ತನೆಗೊಂಡರೆ 'ಮನೆ' ಫೆಮಿನಿಸ್ಟ್ ಸಿದ್ಧಾಂತದ ನೆಲೆಯಾಗಬಹುದು ಎನ್ನುತ್ತಾರೆ ಕಮಲ ವಿಶ್ವೇಶ್ವರನ್ ಅವರು.

ಹೀಗೆ ಈ ಚರ್ಚೆಗಳನ್ನು ನೋಡಿದಾಗ ಒಂದು ಸಂಶೋಧನ ವಿಧಾನವನ್ನು ಯಾರು ಬಳಸುತ್ತಾರೆ, ಯಾವ ನೆಲೆಯಿಂದ ಬಳಸಲಾಗುತ್ತಿದೆ - ಈ ವಿಷಯಗಳು ಸಾಕಷ್ಟು ಪ್ರಾಮುಖ್ಯತೆ ಪಡೆದಿರುವುದನ್ನು ಕಾಣುತ್ತೇವೆ. ಆದರೆ ಇಲ್ಲಿ ಎಲ್ಲೆಡೆ 'ಮಹಿಳಾ ಚಳುವಳಿ', 'ಪಾಶ್ಚಾತ್ಯ

ಮಹಿಳೆ', 'ಮನೆ' - ಇವೆಲ್ಲದರ ಮೇಲಿನ ಒತ್ತು ಕಂಡಾಗ ಬರುವ ಪ್ರಶ್ನೆ ಫೆಮಿನಿಸ್ಟ್ ಎತ್ನೊಗ್ರಫಿಯಲ್ಲಿಯೂ ಕೂಡ 'ಮಹಿಳೆ' ಒಂದು ಅಧ್ಯಯನ ವಸ್ತುವಾಗುತ್ತಿದೆಯೇ, ಮಹಿಳೆ ರಿ-ಡೊಮೆಸ್ಟಿಕೇಟ್ ಆಗುತ್ತಿದ್ದಾಳೆಯೇ ಎಂದು. ಹೆಣ್ತನದ ಕಡೆ ಒತ್ತುಕೊಟ್ಟಂತೆ ಇದು ರೂಪಗೊಳ್ಳುವ ಸಾಮಾಜಿಕ ಸಂದರ್ಭಗಳ ಕಡೆ, ಹೆಣ್ಣು-ಗಂಡಿನ ಒಡನಾಟದ ಕಡೆ, ಗಂಡುತನದ ಬಗ್ಗೆ, ಇವೆಲ್ಲವನ್ನೂ ಮತ್ತು ಹೆಣ್ಣು-ಗಂಡಿನ ಸಂಬಂಧವನ್ನು ನಿಯಂತ್ರಿಸುವ ಪಿತೃಪ್ರಧಾನ ವ್ಯವಸ್ಥೆಯನ್ನು ಫೆಮಿನಿಸ್ಟ್ ಅಧ್ಯಯನ ಹೆಚ್ಚು ಹೆಚ್ಚು ಕೈಗೊಳ್ಳಬೇಕಾಗಿದೆ.

### ಉಲ್ಲೇಖಗಳು


Dirks, Nicholas. 2003 (2002). **Castes of Mind: Colonialism and the Making of Modern India,** Delhi: Permanent.

Enslin, Elizabeth. 1994. "Beyond Writing: Feminist Practice and the Limitations of Ethnography". **Cultural Anthropology,** Vol. 9, No. 4, pp. 537-568.

*http://links.jstor.org/sici=0886-7356%28199411%299%3A4% 3Cs37% 3ABWFPAT%3E2.0.CO%3B2-N*

Geertz, Clifford. 1973. "Thick Description: Towards an Interpretive Theory of Cultrue" in Geertz C. (Ed). **The Interpretation of Cultures,** New York: Basic Books.

Habermas, Jurgen. 1971. **Theory and Practice,** Boston. Viking.

John, Mary. 1989. "Postcolonial Feminists in the Western Intellectual Field: Anthropologists and Native INformants?" **Inscriptions 5**.

_________. 1996. **Discrepant Dislocations,** Berkeley: University of California Press.

Ramanujan, A.K. "Annayya's Anthropology" (English trans. of "Annayyana Maanavashastra) Trans. from Kan. by Narayan Hegde, *http://www.indiastar.com/hegde.html* as retrieved on 29 Jan 2006.

Spindler, George and Louise "Criteria for a Good Ethnography", *http://courses.essex.uk/LG554/CritEthno.html* as retrieved on 2 Oct 2006.

Visweswaran, Kamala. 1996. *Fictions of Feminist Ethnography,* Delhi: OUP.

# ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ವೈಧಾನಿಕತೆ

ಎಲ್.ಜಿ. ಮೀರಾ

ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ವಾಸ್ತವವು ಪ್ರತಿನಿಧೀಕರಣಗೊಂಡಿರುವ ಕ್ರಮವನ್ನು ಸ್ತ್ರೀವಾದಿ ದೃಷ್ಟಿಯಿಂದ ಅಧ್ಯಯನ ಮಾಡುವುದು ಈ ಪ್ರಬಂಧದ ಗುರಿಯಾಗಿದೆ. ಈ ಪ್ರಸ್ತಾವಿಕ ಮಾತುಗಳಲ್ಲಿ ಅಧ್ಯಯನದ ಹಿಂದಿನ ಉದ್ದೇಶ, ವ್ಯಾಪ್ತಿ ತಾತ್ವಿಕ ನೆಲೆಗಟ್ಟು ಮತ್ತು ಓದುವಿಕೆಯ ವಿಧಾನಗಳನ್ನು ವಿವರಿಸುವ ಪ್ರಯತ್ನವಿದೆ.

ಪ್ರಪ್ರಥಮವಾಗಿ ನಾವು ಮಾಡಬೇಕಾಗಿರುವ ಕೆಲಸವೆಂದರೆ "ಕನ್ನಡ ಕಥನವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕಾದ ಅಗತ್ಯವಾದರೂ ಏನು?" ಎಂಬ ಪ್ರಶ್ನೆಗೆ ಉತ್ತರಿಸಿಕೊಳ್ಳುವುದು. ನಾನು ಕಂಡುಕೊಂಡ ಉತ್ತರವನ್ನು ಈ ಮುಂದೆ ವಿವರಿಸುತ್ತೇನೆ.

## ಸ್ತ್ರೀವಾದಿ ವಿಮರ್ಶಾ ಕ್ರಮದ ಅಗತ್ಯ

ನಾವು ಬದುಕುತ್ತಿರುವ ಪ್ರಪಂಚವು ನಾನಾ ರೀತಿಯ ಅಸಮಾನತೆಗಳು ಮತ್ತು ಭೇದಗಳಿಂದ ಕೂಡಿರುವಂಥದ್ದು. ವರ್ಗ, ವರ್ಣ, ಜಾತಿ, ಲಿಂಗ, ಜನಾಂಗ... ಹೀಗೆ ಹತ್ತು ಹಲವು ಸಂಗತಿಗಳು ಮನುಷ್ಯರನ್ನು ಮನುಷ್ಯರಿಂದ ಬೇರ್ಪಡಿಸಿವೆ. ಇವುಗಳಲ್ಲಿ ಲಿಂಗಭೇದವು ಒಂದು ಮೂಲಭೂತ ವಿಭಾಗವಾಗಿದೆ. ನಮಗೆ ಉಂಟಾಗುವ ಮೊತ್ತ ಮೊದಲ ಸಾಮಾಜಿಕ ಅರಿವುಗಳಲ್ಲಿ ಇದು ಒಂದು. ಲಿಂಗಭೇದವನ್ನು ಆಧರಿಸಿ ಬೆಳೆದಿರುವ ಪ್ರಪಂಚದ ಹಲವು ಸಮಾಜಗಳು ಪುರುಷಪ್ರಧಾನವಾಗಿವೆ ಅಥವಾ ಪಿತೃಪ್ರಧಾನವಾಗಿವೆ. ಈ ಬದುಕಿನ ಕ್ರಮವು ಸಹಜ ಎಂಬಂತೆ ಹಬ್ಬಿ ಬೆಳೆದುಬಿಟ್ಟಿದೆ.

ಪುರುಷ ಪ್ರಧಾನ ಸಮಾಜದ ಲಕ್ಷಣಗಳನ್ನು ಸ್ವಲ್ಪ ಪರಿಶೀಲಿಸೋಣ. ಈ ಸಮಾಜದಲ್ಲಿ ಪುರುಷಾನುಕೂಲಿಯಾದ ನಿಲುವುಗಳು ಕೆಲಸ ಮಾಡುತ್ತಿರುತ್ತವೆ. ಅವು ಎಷ್ಟು ಗಾಢವಾಗಿ ಹಬ್ಬಿಬಿಟ್ಟಿರುತ್ತವೆ ಅಂದರೆ ಅವು ಮಾನವ ಜನಾಂಗದ ಅರ್ಧಭಾಗಕ್ಕೆ ಮಾತ್ರ ಅನುಕೂಲಕರವಾಗಿವೆ ಎಂದು ತಿಳಿಯಲಾರದಷ್ಟು! ಪುರುಷ ಪಕ್ಷಪಾತವು ಸಂಸ್ಥೀಕರಣಗೊಂಡಾಗ ಹೀಗಾಗುತ್ತದೆ.

ಸಮಾಜದಲ್ಲಿ ಪುರುಷ ಪಕ್ಷಪಾತವಿದ್ದಾಗ ಸ್ತ್ರೀಯನ್ನು ಪುರುಷನ ದೃಷ್ಟಿಯಿಂದ ನೋಡಲಾಗುತ್ತದೆ. ವ್ಯಾಖ್ಯಾನಿಸಲಾಗುತ್ತದೆ. ದೈಹಿಕವಾಗಿ ಪುರುಷನಿಂದ ಬೇರೆಯಾಗಿರುವ

ಸ್ತ್ರೀ, ಪುರುಷ ಪ್ರಪಂಚದಲ್ಲಿ ಪರಕೀಯಳಾಗುತ್ತಾಳೆ. (ಸ್ತ್ರೀವಾದದ ಮಾತೃಚಿಂತಕಿ 'ಸಿಮೋನ್ ದ ಬೋವಾ'' ಕೂಡಾ ಈ 'ಅನ್ಯದ' ಬಗೆಗೇ ಮಾತಾಡಿದ್ದು) ಇಂತಹ ಸಮಾಜಗಳಲ್ಲಿ ಸ್ತ್ರೀಯನ್ನು ಎರಡನೆ ದರ್ಜೆಯ ಪ್ರಜೆಯೆಂದು ಪರಿಗಣಿಸಲಾಗುತ್ತದೆ. ನಮ್ಮ ಸಮಾಜ ಇದಕ್ಕೆ ಹೊರತಲ್ಲ.

ಶತಮಾನಗಳಿಂದ ನಡೆದು ಬಂದಿದ್ದ ಈ ಪುರುಷ ಪಕ್ಷಪಾತವನ್ನು ಪ್ರಶ್ನಿಸುವ ಹಂತವೊಂದು ಚರಿತ್ರೆಯಲ್ಲಿ ಬಂತು. ಹದಿನೆಂಟನೇ ಶತಮಾನದಿಂದ ಈಚೆಗೆ ಪ್ರಪಂಚದಲ್ಲಿ ಆದ ವಿವಿಧ ಕ್ರಾಂತಿಗಳು, ಕೈಗಾರಿಕೀಕರಣ, ಎರಡು ಮಹಾಯುದ್ಧಗಳು, ಸ್ತ್ರೀಯರಿಗೆ ದೊರೆತ ಶಿಕ್ಷಣ, ಆಧುನಿಕ ವಿಜ್ಞಾನದ ಬೆಳವಣಿಗೆ... ಒಟ್ಟಿನಲ್ಲಿ ನಾನಾ ಕಾರಣಗಳಿಂದ ಸ್ತ್ರೀಪ್ರಜ್ಞೆಯ ನವೋದಯವಾಯಿತು. ವಿವಿಧ ಸ್ತ್ರೀವಾದಿ ಚಳುವಳಿಗಳು ಹುಟ್ಟಿದವು. (ಸ್ತ್ರೀವಾದಿ ಚಳುವಳಿಗಳನ್ನು ವಿವರಿಸುವುದು ಈ ಪ್ರಬಂಧದ ವ್ಯಾಪ್ತಿಗೆ ಬರುವುದಿಲ್ಲ ವಾದ್ದರಿಂದ ನಾನು ಈ ವಿಷಯವನ್ನು ವಿಸ್ತರಿಸುವುದಿಲ್ಲ.)

ಸ್ತ್ರೀ ಪ್ರಜ್ಞೆಯ ಉಗಮದಿಂದಾಗಿ ಪ್ರಪಂಚವನ್ನು ಸ್ತ್ರೀಯ ಕಣ್ಣಿನಿಂದ ನೋಡುವ ಹೊಸ ವೈಧಾನಿಕತೆಯೊಂದು ಬೆಳೆಯಿತು. ತತ್ವಶಾಸ್ತ್ರ, ಕಲೆ, ವಿಜ್ಞಾನ, ಮಾನವಶಾಸ್ತ್ರ, ಚರಿತ್ರೆ... ಎಲ್ಲ ಜ್ಞಾನಶಿಸ್ತುಗಳು ಮತ್ತು ಗ್ರಹಿಕೆಯ ಕ್ರಮಗಳಲ್ಲಿರುವ ಪುರುಷ ಪಕ್ಷಪಾತವನ್ನು ಗುರುತಿಸಿ, ಅವುಗಳನ್ನು ಮತ್ತೆ ಸ್ತ್ರೀಯ ಕಣ್ಣಿನಿಂದ ನೋಡಿ ಮರುವ್ಯಾಖ್ಯಾನಿಸುವ ಪ್ರಯತ್ನ ಗಳು ಮೊದಲಾದವು. ಸಾಹಿತ್ಯ ವಿಮರ್ಶೆಯಲ್ಲಿ ಸ್ತ್ರೀವಾದಿ ದೃಷ್ಟಿಕೋನದ ಅಗತ್ಯವು ಈ ಪ್ರಯತ್ನದ ಒಂದು ಭಾಗವಾಗಿ ಬೆಳೆಯಿತು. ಈ ಪ್ರಬಂಧವೂ ಕೂಡಾ ಸ್ತ್ರೀಯ ಕಣ್ಣಿನಿಂದ ಸಾಹಿತ್ಯವನ್ನು ನೋಡುವ ಪ್ರಯತ್ನವಾಗಿದೆ. ಅದರ ವ್ಯಾಪ್ತಿ ಆಧುನಿಕ ಕನ್ನಡ ಕಥನ ಸಾಹಿತ್ಯ.

ಈಗ ಸ್ತ್ರೀವಾದಿ ವಿಮರ್ಶಾ ಕ್ರಮವನ್ನು ಸ್ವಲ್ಪ ವಿವರಿಸುವ ಪ್ರಯತ್ನ ಮಾಡುತ್ತೇನೆ. ಸ್ತ್ರೀವಾದಿ ವಿಮರ್ಶೆ ಅಂದರೆ ಸಾಹಿತ್ಯವನ್ನು ಸ್ತ್ರೀಯ ದೃಷ್ಟಿಕೋನದಿಂದ ಅಥವಾ ಸ್ತ್ರೀ ಸಂವೇದನೆಯಿಂದ ವ್ಯಾಖ್ಯಾನಿಸುವ ಕ್ರಮವಾಗಿದೆ. ಈಗ ಒಂದು ಪ್ರಶ್ನೆ ಕೇಳಬಹುದು. "ಸಾಹಿತ್ಯ ರಚನೆ'' ಎಂಬ ಮೇಲ್ನೋಟಕ್ಕೆ ಲಿಂಗನಿರಪೇಕ್ಷವೆನ್ನಿಸುವ ಕ್ರಿಯೆಯಲ್ಲಿ ಗಂಡು, ಹೆಣ್ಣು ಎಂಬ ಭೇದವಿರಲು ಸಾಧ್ಯವೇ? ಎಂಬ ಪ್ರಶ್ನೆ ಅದು. ಮೇರಿ ವೋಲ್ ಸ್ಟೋನ್ ಕ್ರಾಫ್ಟ್, ಕೇಟ್ ಮಿಲ್ಲೆಟ್, ಹೈಲ್ಡ್ ಹೀನ್, ಜರ್ಮೇನ್ ಗ್ರಿಯರ್... ಮುಂತಾದ ಸ್ತ್ರೀವಾದಿ ಧೀಮಂತರು "ಸಾಹಿತ್ಯ ಕ್ಷೇತ್ರವು ಲಿಂಗಭೇದದಿಂದ ಹೊರಗುಳಿಯುವ ಕ್ಷೇತ್ರವಲ್ಲ'' ಎಂಬ ಆಘಾತಕಾರಿ ಸತ್ಯವನ್ನು ತೋರಿಸಿಕೊಟ್ಟಿದ್ದಾರೆ. ಪಾಶ್ಚಾತ್ಯ ವಿಮರ್ಶೆಯ ಬುಡವನ್ನೇ ಹಿಡಿದು ಅಲ್ಲಾಡಿಸಿದ ತಿಳುವಳಿಕೆಯಿದು.

ಸಾಹಿತ್ಯ ಸೃಷ್ಟಿ, ಪ್ರಸಾರ ಮತ್ತು ಓದುವಿಕೆಯ ಕ್ರಿಯೆಗಳನ್ನು ನಾವು ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಅವು ಸಮಾಜದಿಂದ ಬೇರ್ಪಟ್ಟ ದಂತಗೋಪುರದ ಕ್ರಿಯೆಯಲ್ಲ ಎಂಬುದು ಅರ್ಥವಾಗುತ್ತದೆ. ನಾವು ಬದುಕುವ ವಿಧಾನ, ಆಡುವ ಭಾಷೆ, ಪಡೆಯುವ ಶಿಕ್ಷಣ, ನಮ್ಮ ಗ್ರಹಿಕೆಯ ಕ್ರಮಗಳು ಎಲ್ಲವನ್ನೂ ನಮ್ಮ ಹೊರಗಿನ ಅಂದರೆ, ಸಮಾಜದಲ್ಲಿನ ಶಕ್ತಿಗಳು

ನಿಯಂತ್ರಿಸುತ್ತಿರುತ್ತವೆ. "ಬರೆಯುವ ಏಕಾಂತ, ಅವಕಾಶ ಯಾರಿಗೆ ಸಿಗುತ್ತದೆ?" ಎಂಬ ಮೂಲಭೂತ ಪ್ರಶ್ನೆಯಿಂದ ಹಿಡಿದು ಯಾವುದನ್ನು ಜನ ಓದುತ್ತಾರೆ, ಯಾವುದನ್ನು ಓದುವುದಿಲ್ಲ, ಯಾವುದನ್ನು ಶ್ರೇಷ್ಠ ಎನ್ನಲಾಗುತ್ತದೆ? ಯಾವುದನ್ನು ಕನಿಷ್ಠ ಎನ್ನಲಾಗುತ್ತದೆ? ಇವೆಲ್ಲವನ್ನೂ ಕೂಡ ಸಮಾಜ ನಿಯಂತ್ರಿಸುತ್ತಿರುತ್ತದೆ. ವಾಸ್ತವದ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಕ್ರಮಗಳನ್ನೂ ಅದು ನಿರ್ಧರಿಸುತ್ತದೆ ಎಂದು ಬೇರೆ ಹೇಳಬೇಕಿಲ್ಲ. ಈಗ ನಾವು ವಾಸ್ತವದ ಪ್ರತಿನಿಧೀಕರಣದ ಚರ್ಚೆಗೆ ಬಂದು ತಲುಪಿದ್ದೇವೆ.

'ವಾಸ್ತವದ ಪ್ರತಿನಿಧೀಕರಣ' ಎಂದರೆ ಲೋಕಸತ್ಯವು ಸಾಹಿತ್ಯ ಸತ್ಯವಾಗಿ ಪರಿವರ್ತಿತ ವಾಗುವ ಪ್ರಕ್ರಿಯೆ. ಸಾಹಿತ್ಯಸತ್ಯ ಮತ್ತು ಲೋಕಸತ್ಯಗಳು ಒಂದರೊಡನೊಂದು ನೇರ ಸಂಬಂಧ ಪಡೆದಿವೆ ಎಂದು ಸ್ತ್ರೀವಾದಿ ವಿಮರ್ಶೆ ತಿಳಿಯುತ್ತದೆ. ಸಂಸ್ಕೃತಿಯಿಂದ ದತ್ತವಾದ ನಂಬಿಕೆಗಳು, ಆದರ್ಶಗಳು, ಕನಸುಗಳು ಸಮೂಹ ಪ್ರಜ್ಞೆಯಲ್ಲಿ ಮನೆ ಮಾಡಿರುತ್ತವೆ. ಇವುಗಳೇ ಲೇಖಕರ ಆಕರಗಳೂ ಆಗುತ್ತವೆ. ಹೀಗಾಗಿ ಅವರ ಕೃತಿಗಳಲ್ಲಿ ಮೂಡುವ ವಾಸ್ತವವು ಅವರ ದೃಷ್ಟಿಕೋನದಿಂದ ನಿಯಂತ್ರಿಸಲ್ಪಡುವುದು ಸಹಜವೇ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ವಾಸ್ತವದ ಪ್ರತಿನಿಧೀಕರಣದ ಅಧ್ಯಯನವು ಲೇಖಕ/ಲೇಖಕಿಯ ದೃಷ್ಟಿಕೋನದಿಂದ ಹಾದು ಸಂಸ್ಕೃತಿಯ ಮೂಲಸೂತ್ರವನ್ನೇ ಹಿಡಿಯಬಲ್ಲದು. ಸಾಹಿತ್ಯ ವಿಮರ್ಶೆ ಅನ್ನುವುದು ಅಂತಿಮವಾಗಿ ಲೋಕ ವಿಮರ್ಶೆಯಾದಾಗಲೇ ಅದಕ್ಕೆ ಅಧಿಕೃತತೆ ಬರುವುದು ಮತ್ತು ನಾವು ಬದುಕುತ್ತಿರುವ ವಾಸ್ತವವನ್ನು ಬದಲಾಯಿಸುವ ಸೂಚನೆಗಳನ್ನು ಅದು ಕೊಡುವುದು.

ಸಾಹಿತ್ಯ ಮತ್ತು ಸಂಸ್ಕೃತಿಗಳಿಗಿರುವ ಸಂಬಂಧವನ್ನು ನಮ್ಮ ಸಂದರ್ಭದ ಮತ್ತು ಪಾಶ್ಚಾತ್ಯ ಜಗತ್ತಿನ ಅನೇಕ ವಿದ್ವಾಂಸರು ಗುರುತಿಸಿಯೇ ಇದ್ದಾರೆ. ಸಾಹಿತ್ಯವು ಒಂದು ಸಾಂಸ್ಕೃತಿಕ ಸಂಗತಿ ಎಂದು ಒಪ್ಪಿಕೊಂಡಾಗ ಸಂಸ್ಕೃತಿಯಲ್ಲಿರುವ ಪುರುಷಪ್ರಾಧಾನ್ಯತೆ ಸಾಹಿತ್ಯಕ್ಕೂ ಸೋರಿ ಬರುತ್ತದೆ ಎಂದು ಗ್ರಹಿಸುವುದು ಕಷ್ಟದ ಕೆಲಸವಲ್ಲ.

ಸಾಹಿತ್ಯದ ಪ್ರಧಾನವಾಹಿನಿಯ ಭಾಷೆ, ಅಭಿವ್ಯಕ್ತಿಯ ಕ್ರಮ, ಪ್ರತಿಮಾವಳಿ, ಉಪಮೆ, ರೂಪಕಗಳು ಪುರುಷ ಪ್ರಧಾನವಾಗಿದ್ದುದನ್ನು ಮತ್ತು ಸ್ತ್ರೀ ಬದುಕಿನ ಸತ್ಯಗಳನ್ನು ಅರಿಯುವುದಕ್ಕೆ ಬೇರೆಯೇ ಆದ ವಿಮರ್ಶೆಯ ಅಗತ್ಯವಿದ್ದುದನ್ನು ಕೇಟ್ ಮಿಲ್ಲೆಟ್ ಮುಂತಾದ ಸ್ತ್ರೀವಾದಿ ಚಿಂತಕರು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ನಮ್ಮ ಸಾಹಿತ್ಯ ಸಂದರ್ಭದಲ್ಲಿ ಇಂಥ ವಿಮರ್ಶೆಯ ಅಗತ್ಯ ಇರುವುದನ್ನು ಮನಗಂಡು ಕಳೆದ ೧೫-೨೦ ವರ್ಷಗಳಿಂದ ಸ್ತ್ರೀವಾದಿ ದೃಷ್ಟಿಕೋನದಿಂದ ಸಾಹಿತ್ಯ ವಿಮರ್ಶೆ ಮಾಡುವ ಪ್ರಯತ್ನಗಳು ನಡೆಯುತ್ತಿವೆ.

### ಕನ್ನಡದಲ್ಲಿನ ಸ್ತ್ರೀವಾದಿ ವಿಮರ್ಶೆಯ ಮಾದರಿಗಳು

೧೯೮೦ ರಿಂದ ಈಚೆಗೆ ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಯ ಕುರಿತು ಕೆಲವಾರು ಕೃತಿಗಳು ಬಂದಿವೆ. ಆ ಕೃತಿಗಳ ಅಧ್ಯಯನದ ಹಿನ್ನೆಲೆ ಈ ಪ್ರಬಂಧಕ್ಕಿದೆ.

ಸೂಕ್ಷ್ಮವಾಗಿ ಗಮನಿಸಿದಾಗ ಕನ್ನಡದ ಸ್ತ್ರೀವಾದಿ ವಿಮರ್ಶೆಗೆ ಎರಡು ಪ್ರಧಾನಧಾರೆಗಳಿರುವುದು ತಿಳಿಯುತ್ತದೆ. ಮೊದಲನೆಯದು, ಪ್ರಧಾನವಾಹಿನಿಯ ಬರಹವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಮರು ಅಧ್ಯಯನ ಮಾಡಿ ಅದರಲ್ಲಿರುವ ಪುರುಷಾಧಿಕಾರವನ್ನು ಪ್ರಶ್ನಿಸುವುದು. ಎರಡನೆಯದು ಸ್ತ್ರೀ ಬರಹದ ಪರಂಪರೆಯೊಂದನ್ನು ಕಟ್ಟಿಕೊಳ್ಳುವುದು. ಈ ಎರಡು ಧಾರೆಗಳು ಪಾಶ್ಚಾತ್ಯ ಸ್ತ್ರೀವಾದದ ಎರಡು ಮುಖ್ಯ ಕಾಳಜಿಗಳೂ ಆಗಿವೆ.

ಮೊದಲನೆಯ ವಿಮರ್ಶಾ ಧಾರೆಯಲ್ಲಿ ವಿವಿಧ ಲೇಖಕ, ಲೇಖಕಿಯರ ಕೃತಿಗಳನ್ನು ಸ್ತ್ರೀವಾದಿ ವಿಮರ್ಶೆಗೆ ಒಳಪಡಿಸಲಾಗಿದೆ. ಕೇಶವಶರ್ಮ, ಬಿ.ಎನ್. ಸುಮಿತ್ರಾಬಾಯಿ, ವಿಜಯಾ ದಬ್ಬೆ, ಬಿ.ಎಸ್. ವೆಂಕಟಲಕ್ಷ್ಮಿ, ನಿರಂಜನ ಸಹೋದರಿಯರು, (ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ), ಮನುಚಕ್ರವರ್ತಿ, ಎಲ್.ಸಿ. ಸುಮಿತ್ರಾ, ಶಾಲಿನಿ ರಘುನಾಥ್.... ಮುಂತಾದವರು ಈ ಧಾರೆಗೆ ಸೇರುತ್ತಾರೆ. ಅವರಲ್ಲಿ ಬರುವ ವಿಮರ್ಶಾ ವಿನ್ಯಾಸಗಳಲ್ಲಿ ಈ ಲೇಖಕಿ ಅನುಮೋದಿಸುವ ಮಾದರಿಗಳೆಂದರೆ 'ಭಾರತೀಯ ಸ್ತ್ರೀವಾದ' ಪುಸ್ತಕದಲ್ಲಿ ಬಳಸಲಾಗಿರುವ ಸೌಂದರ್ಯಾತ್ಮಕ ಪ್ರತಿರೋಧದ ವಿಮರ್ಶೆಯ ಮಾದರಿ ಮತ್ತು 'ವಿಭಾವ' ಪುಸ್ತಕದಲ್ಲಿ ಬಳಸಲಾಗಿರುವ ಸಾಂಸ್ಕೃತಿಕ ಸ್ತ್ರೀವಾದಿ ವಿಮರ್ಶೆಯ ಮಾದರಿ. 'ಭಾರತೀಯ ಸ್ತ್ರೀವಾದದ' ಸಂಪಾದಕರಾದ ಮನುಚಕ್ರವರ್ತಿಯವರಿಗೆ, ಸ್ತ್ರೀವಾದದ ರಾಜಕೀಯ, ಸಾಂಘಿಕ ಹೋರಾಟ ಎಷ್ಟು ಮುಖ್ಯವೋ, ಸೌಂದಯಾತ್ಮಕ ಪ್ರತಿರೋಧವೂ ಅಷ್ಟೇ ಮುಖ್ಯವೆನ್ನಿಸಿದೆ. ದೋಪ್ಡಿ, ಅಕ್ಕು, ಸ್ತನದಾಯಿನಿ ಮುಂತಾದ ಕತೆಗಳನ್ನು ಅವರು ವಿಮರ್ಶೆ ಮಾಡಿರುವ ರೀತಿಯಿಂದ ಇದನ್ನು ಗುರುತಿಸಬಹುದು. ಇನ್ನು 'ವಿಭಾವ'ದಲ್ಲಿ ಎಲ್.ಸಿ. ಸುಮಿತ್ರಾ ಅವರು, ಒಂದೇ ವಸ್ತುವನ್ನು ಪುರುಷ ದೃಷ್ಟಿಕೋನ ಗ್ರಹಿಸುವ ಕ್ರಮಕ್ಕೂ, ಸ್ತ್ರೀ ದೃಷ್ಟಿಕೋನ ಗ್ರಹಿಸುವ ಕ್ರಮಕ್ಕೂ ಇರುವ ವ್ಯಾತ್ಯಾಸವನ್ನು ಸಶಕ್ತ ಉದಾಹರಣೆಯೊಂದರ ಮೂಲಕ ವಿವರಿಸಿದ್ದಾರೆ. ಅದು ಯಾವುದೆಂದರೆ 'ಅಡುಗೆ ಮನೆಯ ಹುಡುಗಿ' (ರಚನೆ: ವೈದೇಹಿ) ಮತ್ತು 'ಮನೆಮನೆಯ ತಪಸ್ವಿನಿಗೆ' (ರಚನೆ: ಕುವೆಂಪು) ಕವನಗಳನ್ನು ಇಟ್ಟುಕೊಂಡು ಅವರು ಮಾಡಿರುವ ತುಲನಾತ್ಮಕ ವಿಮರ್ಶೆ. ಇಲ್ಲಿ ಗೃಹಿಣೀ ಜೀವನವನ್ನು ಗ್ರಹಿಸುವಲ್ಲಿ ಪುರುಷ ಮತ್ತು ಸ್ತ್ರೀ ನೋಟ ಕ್ರಮಗಳಿಗಿರುವ ವ್ಯತ್ಯಾಸವನ್ನು ತುಂಬ ಮಾರ್ಮಿಕವಾಗಿ ಗುರುತಿಸಲಾಗಿದೆ. ಒಂದರಲ್ಲಿ ವೈಭವೀಕರಣವಿದ್ದರೆ, ಇನ್ನೊಂದರಲ್ಲಿ ವಿಷಾದವಿದೆ. ಈ ಪ್ರಬಂಧವು ವಾಸ್ತವದ ಪ್ರತಿನಿಧೀಕರಣದ ಅಧ್ಯಯನವಾದ್ದರಿಂದ ಈ ಎರಡು ಮಾದರಿಗಳು ಒಳ್ಳೆ ತಳಪಾಯವೊಂದನ್ನು ಹಾಕಿಕೊಡುತ್ತವೆ.

ಕನ್ನಡದ ಸ್ತ್ರೀವಾದಿ ವಿಮರ್ಶೆಯ ಎರಡನೆಯ ಧಾರೆಯೆಂದರೆ ಎನ್. ಗಾಯಿತ್ರಿ, ನೇಮಿಚಂದ್ರ, ವಿಜಯಾ ದಬ್ಬೆ ಮುಂತಾದ ಲೇಖಕಿಯರು ಕೈಗೊಂಡಿರುವ ಮರೆತ/ನಿರ್ಲಕ್ಷಿತ ಲೇಖಕಿಯರ ಪುನರ್‌ಶೋಧನೆ. ಈ ದಿಸೆಯಲ್ಲಿ ಕನ್ನಡದಲ್ಲಿ ಆಗುತ್ತಿರುವ ಪ್ರಯತ್ನಗಳು ಪ್ರಶಂಸನೀಯವಾಗಿವೆ. ನೇಮಿಚಂದ್ರ ಅವರ "ಬೆಳಗೆರೆ ಜಾನಕಮ್ಮ : ಬದುಕು ಬರಹ" ಕೃತಿ, ವಿಜಯಾ ದಬ್ಬೆ ಅವರ "ಶ್ಯಾಮಲಾ ಸಂಚಯ" ಪುಸ್ತಕ, ಎನ್.ಗಾಯಿತ್ರಿ ಮತ್ತು

ಬಿ.ಎಸ್. ಸುಮಿತ್ರಾಬಾಯಿ ಸಂಪಾದಿಸಿರುವ 'ವಿಮುಕ್ತಿಯ ಹಾದಿ' (ಹೆಚ್.ವಿ. ಸಾವಿತ್ರಮ್ಮ ಅವರನ್ನು ಕುರಿತ ಪುಸ್ತಕ) ಇವು ಈ ದಿಸೆಯಲ್ಲಿ ನಡೆದ ಯಶಸ್ವಿ ಪ್ರಯತ್ನಗಳು. ಕರ್ನಾಟಕದ ಲೇಖಕಿಯರೆಲ್ಲರನ್ನೂ ಒಂದೆಡೆ ಪರಿಚಯಿಸುವ 'ಸಮನ್ವಿತ' ಮಹಿಳಾ ಅಧ್ಯಯನ ವಿಭಾಗದ (ಎಸ್.ಎಂ.ಕೆ.ಆರ್.ವಿ. ಕಾಲೇಜು) ಪ್ರಯತ್ನವೂ ಗಮನಾರ್ಹವಾದದ್ದು.

ಹೀಗೆ ಕನ್ನಡದಲ್ಲಿ ಬೆಳೆಯುತ್ತಿರುವ ಸ್ತ್ರೀವಾದಿ ವಿಮರ್ಶಾ ಪರಂಪರೆಯು, ಸಾಹಿತ್ಯವನ್ನು ಸ್ತ್ರೀವಾದಿ ನೋಟ ಕ್ರಮದಿಂದ ಅಧ್ಯಯನ ಮಾಡುವುದು ಎಷ್ಟು ಮುಖ್ಯ ಅನ್ನುವುದನ್ನು ಎತ್ತಿ ತೋರಿಸಿದೆ.

ಸ್ತ್ರೀವಾದಿ ವಿಮರ್ಶಾಕ್ರಮದ ಅಗತ್ಯವನ್ನು ಸಮರ್ಥಿಸಿಕೊಳ್ಳುವಗೋಸ್ಕರ ಇಲ್ಲಿಯ ತನಕ ಇಷ್ಟು ವಿಚಾರಗಳನ್ನು ಮಂಡಿಸಲಾಯಿತು. ಈಗ ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡುವುದು ಹೇಗೆ ಎಂಬುದನ್ನು ನೋಡೋಣ.

### ಅಧ್ಯಯನ ವಿಧಾನ

ಸ್ತ್ರೀವಾದಿ ವಿಮರ್ಶೆ ಹೊರಟದ್ದೇ ಮೂಲತಃ ಪ್ರಧಾನವಾಹಿನಿಯ ವಿಮರ್ಶೆಯಲ್ಲಿದ್ದ ಪುರುಷ ಪಕ್ಷಪಾತವನ್ನು ಗುರುತಿಸಿ ಅದರಿಂದಾಗಿ ಸ್ತ್ರೀ ಬದುಕಿನ ಅನಾವರಣ ಅಲ್ಲಿ ಸಾಧ್ಯ ಇಲ್ಲ ಎಂಬುದನ್ನು ಗ್ರಹಿಸಿ, ಪ್ರಧಾನವಾಹಿನಿಯಲ್ಲಿದ್ದ ಈ ದೋಷವನ್ನು ನಿವಾರಿಸು ವುದಕ್ಕೋಸ್ಕರ. ಪಿತೃಪ್ರಧಾನ ನಿಲುವುಗಳು ಸಾಹಿತ್ಯದೊಳಗಡೆ ಇಳಿಯುವ ಕ್ರಮಗಳ ಅಧ್ಯಯನವೂ ಸ್ತ್ರೀವಾದಿ ವಿಮರ್ಶೆಯ ವ್ಯಾಪ್ತಿಗೆ ಬರುತ್ತದೆ. ಜೊತೆಗೆ ಪಿತೃ ವಿಮರ್ಶೆಯ ಕಣ್ಣಿಗೆ ಕಾಣದ ಸತ್ಯಗಳನ್ನು ಹೆಕ್ಕಿ ತೆಗೆಯುವುದು ಕೂಡಾ ಇದರ ಪ್ರಮುಖ ಉದ್ದೇಶವಾಗಿದೆ. ಈ ವಿಮರ್ಶಾ ಕ್ರಮದ ಮುಖ್ಯ ಉಪಕರಣಗಳೆಂದರೆ:

- ಪಿತೃಪ್ರಧಾನ ಗ್ರಹಿಕೆಯಿಂದ ಸಾಹಿತ್ಯದಲ್ಲಿ ಉಂಟಾಗುವ ಸಿದ್ಧಪಡಿಯಚ್ಚಿನ (ಸ್ಟೀರಿಯೋಟೈಪ್) ಸ್ತ್ರೀಪಾತ್ರವನ್ನು ಗುರುತಿಸುವುದು.
- ಉಪಮೆ, ರೂಪಕ ಹಾಗೂ ಪ್ರತಿಮಾ ನಿರ್ಮಿತಿಗಳಲ್ಲಿ ಭಾಷೆ, ಬಳಕೆಯಾಗುವ ಕ್ರಮ ಮತ್ತು ಅದರಲ್ಲಿರುವ ಲೈಂಗಿಕ ರಾಜಕಾರಣವನ್ನು ಸೂಕ್ಷ್ಮವಾಗಿ ನೋಡುವುದು.
- ಸಾಹಿತ್ಯ ಕೃತಿಯ ಹಿಂದಿರುವ ಬದುಕಿನ ಗ್ರಹಿಕೆ ಎಂಥದ್ದು? ಪುರುಷರ ಸಂವೇದನೆಯದ್ದೋ ಅಥವಾ ಸ್ತ್ರೀ ಸಂವೇದನೆಯದ್ದೋ ಎಂದು ಪರಿಶೀಲಿಸುವುದು.
- ಪ್ರಧಾನವಾಹಿನಿಯ ಸಂಸ್ಕೃತಿಯ ಅಂದರೆ ಇಲ್ಲಿ ಪಿತೃಪ್ರಧಾನ ಸಂಸ್ಕೃತಿಗೆ ಸಡ್ಡು ಹೊಡೆಯುವ ಸ್ತ್ರೀಪರ ಸಂಸ್ಕೃತಿಗಳ ಇರುವಿಕೆಯನ್ನು ಗುರುತಿಸುವುದು.
- ಪ್ರಧಾನವಾಹಿನಿಯ ವಿಮರ್ಶೆಯ ಶ್ರೇಷ್ಠತೆಯ ಮಾನದಂಡಗಳನ್ನು ಲೆಕ್ಕಿಸದೆ, ಶ್ರೇಷ್ಠ ಕನಿಷ್ಠಗಳ ಗೀಳನ್ನು ಬಿಟ್ಟು ಸ್ತ್ರೀ ಅನುಭವದ ಸಾಂದ್ರ ಚಿತ್ರಣಕ್ಕಾಗಿ ಸಾಹಿತ್ಯ ಕೃತಿಯನ್ನು ಶೋಧಿಸುವುದು.
- ಪಿತೃವ್ಯವಸ್ಥೆಗೆ ಸಾಹಿತ್ಯ ಕೃತಿಗಳು ಪ್ರತಿಕ್ರಿಯಿಸುವ ರೀತಿ (ಕೋಪ, ಅಸಹನೆ, ಅನುಮೋದನೆ, ಪ್ರಶ್ನಿಸುವಿಕೆ...)ಯನ್ನು ಗುರುತಿಸುವುದು.

- ಸಾಹಿತ್ಯ ಕೃತಿಯಲ್ಲಿರಬಹುದಾದ ಪರ್ಯಾಯ ಮೌಲ್ಯಗಳ ಹುಡುಕಾಟ ಅಂದರೆ ಪಿತೃಪ್ರಧಾನ ವ್ಯವಸ್ಥೆಯ ಕ್ರೌರ್ಯಕ್ಕೆ ಸಾಹಿತ್ಯ ಕೃತಿಗಳು ಸೂಚಿಸುವ ಜೀವಪರ ಮೌಲ್ಯಗಳಾವುವು ಎಂಬುದರ ಶೋಧ.
- ಅಂತಿಮವಾಗಿ ಸ್ತ್ರೀವಾದಿ ವಿಮರ್ಶೆ ಅಂದರೆ ಸಾಹಿತ್ಯ ಕೃತಿಯಲ್ಲಿನ ಪುರುಷಾಧಿಕಾರದ ರಚನೆಗಳ ಅನಾವರಣ. ಪುರುಷಪ್ರಧಾನ ಸಮಾಜದಲ್ಲಿ ಗಂಡನ್ನು ಪ್ರಧಾನ ಸ್ಥಾನದಲ್ಲಿ ಮತ್ತು ಹೆಣ್ಣನ್ನು ಅಧೀನ ಸ್ಥಾನದಲ್ಲಿ ಇಡುವಂತಹ ರಚನೆಗಳಿರುತ್ತವಲ್ಲ, ಅವುಗಳನ್ನು 'ಅಧಿಕಾರ ರಚನೆಗಳು' ಎಂದು ಕರೆಯಬಹುದು. ಇವು ದೈನಂದಿನ ಜೀವನ, ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನ ಅಷ್ಟೇ ಅಲ್ಲದೆ ಕಲಾನಿರ್ಮಿತಿಯನ್ನು ಸಹ ಪ್ರಭಾವಿಸುತ್ತವೆ. ಕಲಾಕೃತಿಗಳ ಸೂಕ್ಷ್ಮ ಶೋಧದಿಂದ ಈ ಅಧಿಕಾರ ರಚನೆಗಳು ಅರ್ಥಾತ್ ಪುರುಷಾಧಿಕಾರದ ರಚನೆಗಳು ನಮಗೆ ದಕ್ಕುತ್ತವೆ. ಆ ಮೂಲಕ ನಾವು ನಮ್ಮ ಸಂಸ್ಕೃತಿಯ ವಿಶ್ಲೇಷಣೆಯನ್ನು ಮಾಡಬಹುದು ಎಂಬುದು ಈ ಪ್ರಬಂಧದಲ್ಲಿ ಮೂಲ ಸೂತ್ರವಾಗಿ ಹರಿದಿರುವ ತಾತ್ವಿಕ ಪ್ರಮೇಯವಾಗಿದೆ.
- ಸ್ತ್ರೀವಾದಿ ವಿಮರ್ಶೆ ಅಂದರೆ ಪ್ರಧಾನವಾಹಿನಿಗೆ ಒಂದು ಚಿಕಿತ್ಸೆ. ಅದರ ದೃಷ್ಟಿದೋಷವನ್ನು ನಿವಾರಿಸಿ ಅದಕ್ಕೆ ಸಮಗ್ರತೆಯನ್ನು ತರಲು ಈ ವಿಮರ್ಶೆ ದುಡಿಯುತ್ತದೆ. ಸ್ತ್ರೀವಾದಿ ವಿಮರ್ಶೆಯ ಚಿಕಿತ್ಸೆಯಾದಾಗ ಪ್ರಧಾನವಾಹಿನಿಯ ವಿಮರ್ಶೆ ಹೆಚ್ಚು ಆರೋಗ್ಯಕರವಾಗಿ, ಜೀವನ್ಮುಖಿಯಾಗಿ ಮೂಡಿಬರುತ್ತದೆ.

ಈಗ ಈ ಮಹಾಪ್ರಬಂಧದಲ್ಲಿ ಉಪಯೋಗಿಸಲ್ಪಟ್ಟಿರುವ ನಿರ್ದಿಷ್ಟ ವಿಮರ್ಶಾ ಪರಿಕರಗಳನ್ನು ನೋಡೋಣ. ಇಲ್ಲಿನ ಅಧ್ಯಯನಕ್ಕೆ ನಾಲ್ಕು ಪ್ರಮುಖ ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ.

೧. ಸಾಹಿತ್ಯ ಕೃತಿಯಲ್ಲಿ ಪಿತೃಪ್ರಧಾನ ಚೌಕಟ್ಟು ವರ್ಣಿತವಾಗಿರುವ ಕ್ರಮ ಯಾವುದು?
೨. ಕೃತಿಯಲ್ಲಿ ಹೆಣ್ಣನ್ನು ಯಾವ ದೃಷ್ಟಿಕೋನದಿಂದ ನೋಡಲಾಗಿದೆ?
೩. ಬಳಸಲಾಗಿರುವ ಭಾಷೆ ಅರ್ಥಾತ್ ನುಡಿಗಟ್ಟುಗಳು ಎಂಥವು? ಪಿತೃವ್ಯವಸ್ಥೆಯಿಂದ ತೆಗೆದುಕೊಂಡಂಥವೋ ಇಲ್ಲ ಪರ್ಯಾಯ ಸಂಸ್ಕೃತಿಗಳಿಂದ ಬಂದಂಥವೋ?
೪. ಕಥನ ಪ್ರಜ್ಞೆ ಎಂಥದು? ಅದು ಸ್ತ್ರೀಪರವಾಗಿದೆಯೋ ಇಲ್ಲವೋ?

ಈ ನಾಲ್ಕು ಒರೆಗಲ್ಲುಗಳಿಗೆ ಕೃತಿಯನ್ನು ಹಚ್ಚುವುದರಿಂದ ಅದರ ಧೋರಣೆಗಳು ಮತ್ತು ಅದರ ಹಿಂದೆ ಕೆಲಸ ಮಾಡಿರುವ ಅಧಿಕಾರ ರಚನೆಗಳು ನಮಗೆ ಲಭ್ಯವಾಗುತ್ತವೆ.

ಈ ದಾರಿಯಲ್ಲಿ ಹೋಗುವುದರಿಂದ, ಪಾತ್ರಗಳನ್ನು ಮಾತ್ರ ಗಮನಿಸಿ, ಆ ಪಾತ್ರ ಚಿತ್ರಣದ ಹಿಂದಿನ ಶಕ್ತಿಗಳನ್ನು ಅರಿಯದೆ ಹೋಗುವ ಅಪಾಯದಿಂದ ನಾವು ದೂರಾಗುತ್ತೇವೆ. ಸ್ತ್ರೀವಾದಿ ವಿಮರ್ಶೆಗೆ ಈ ಕ್ರಮದಿಂದಾಗಿ ಹೆಚ್ಚಿನ ಶಿಸ್ತು ಮತ್ತು ಕಸುಬುಗಾರಿಕೆ ಲಭ್ಯವಾಗುತ್ತದೆಂದು ಈ ಲೇಖಕಿಯ ನಂಬಿಕೆ. ಇದಿಷ್ಟು ಅಧ್ಯಯನ ವಿಧಾನದ ಚರ್ಚೆಯಾಯಿತು. ಈಗ ಅಧ್ಯಯನದ ವ್ಯಾಪ್ತಿಯನ್ನು ಗಮನಿಸೋಣ.

### ಅಧ್ಯಯನದ ವ್ಯಾಪ್ತಿ

ಆಧುನಿಕ ಕನ್ನಡ ಕಥನ ಸಾಹಿತ್ಯದ ವ್ಯಾಪ್ತಿ ಸಾಕಷ್ಟು ವಿಸ್ತೃತವೂ, ವೈವಿಧ್ಯಮಯವೂ ಆಗಿದೆ. ಇಪ್ಪತ್ತನೇ ಶತಮಾನದ ಆದಿಯಲ್ಲಿ ಕರ್ನಾಟಕದ ಮತ್ತು ಅಖಿಲ ಭಾರತದಲ್ಲಿ ನಡೆದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಚಳುವಳಿಗಳ ಉತ್ಪನ್ನವಾಗಿ ಕನ್ನಡ ಕಥನವೂ ಮೈದುಂಬಿಕೊಂಡು ಬೆಳೆಯಿತು. ನಂತರ ನಡೆದ ನಾನಾ ಸಾಹಿತ್ಯ ಚಳುವಳಿಗಳಲ್ಲಿನ ಸಾಂಸ್ಕೃತಿಕ ತುಯ್ತಗಳಿಗೆ ತಕ್ಕಂತೆ ಆಧುನಿಕ ಕನ್ನಡ ಕಥನವೂ ರೂಪ ರೀತಿಯಲ್ಲಿ ಬದಲಾಗುತ್ತಾ ಬಂತು. ಅಗಾಧವಾಗಿರುವ ಆಧುನಿಕ ಕನ್ನಡ ಕಥನ ಸಾಹಿತ್ಯದ ಸಂಪೂರ್ಣ ಸಮೀಕ್ಷೆಯು ಈ ಪ್ರಬಂಧದ ವ್ಯಾಪ್ತಿಯನ್ನು ಮೀರಿರುವುದರಿಂದ ಪ್ರಾತಿನಿಧಿಕವಾಗಿ ವೈದೇಹಿ ಅವರ ಸ್ತ್ರೀವಾದಿ ವಿಮರ್ಶೆಯನ್ನಷ್ಟೆ ಕೈಗೆತ್ತಿಕೊಳ್ಳಲಾಗಿದೆ.

### ಆಯ್ಕೆಯ ಹಿಂದಿನ ನೆಲೆಗಳು

- 'ಕಥನ' ಎಂಬ ಪದವನ್ನು ಇಲ್ಲಿ ಸಣ್ಣಕತೆ ಮತ್ತು ಕಾದಂಬರಿಗಳಿಗೆ ಮಾತ್ರ ಸೀಮಿತಗೊಳಿಸಲಾಗಿದೆ. (ವಸಾಹತೋತ್ತರ ಸಂದರ್ಭದಲ್ಲಿ 'ಕಥನ'ಕ್ಕೆ ಇನ್ನೂ ಹೆಚ್ಚಿನ ವ್ಯಾಪ್ತಿ ಇದೆ.)
- ಕಾದಂಬರಿ ಮತ್ತು ಕಥಾ ಸಾಹಿತ್ಯಕ್ಕೆ ಸಮಾನ ಪ್ರಾತಿನಿಧ್ಯ ಕೊಡುವ ಪ್ರಯತ್ನ ಮಾಡಲಾಗಿದೆ.
- ಸ್ತ್ರೀಸಂವೇದನೆ ಅನ್ನುವುದು ದೇಹಕ್ಕೆ ಸೀಮಿತವಾದುದಲ್ಲ. ಅದು ಮಾನವಪರ ಮೌಲ್ಯಗಳನ್ನು ಬೆಂಬಲಿಸುವ ಪ್ರಜ್ಞಾಪೂರ್ವಕ ನಿಲುವು. ಅದು ಪುರುಷರಲ್ಲೂ ಇರಬಹುದು. ಸ್ತ್ರೀಯರಲ್ಲಿ ಇಲ್ಲದೆಯೂ ಇರಬಹುದು. ಆಯ್ಕೆಯ ಮತ್ತು ವಿಮರ್ಶೆಯ ಹಿಂದೆ ಈ ಎಚ್ಚರ ಕೆಲಸ ಮಾಡಿದೆ. ಹಾಗೆ ನೋಡಿದರೆ ಸ್ತ್ರೀ ಸಂವೇದನೆಯ ಗೈರು ಹಾಜರಿಯ ಅಧ್ಯಯನ ಕೂಡಾ ಸ್ತ್ರೀವಾದಿ ವಿಮರ್ಶೆಯ ಪ್ರಮುಖ ಉದ್ದೇಶಗಳಲ್ಲಿ ಒಂದು.
- ಯಾವ ಚಳುವಳಿಗೂ ಸೇರದೆ ಬರೆಯುವ ಚದುರಂಗ, ಎಸ್.ಎಲ್. ಭೈರಪ್ಪ, ಜಯಂತ ಕಾಯ್ಕಿಣಿ, ವಿವೇಕ್ ಶ್ಯಾನುಭಾಗ್...ಮುಂತಾದವರನ್ನು ಪ್ರಬಂಧದ ಪರಿಮಿತಿಯ ದೃಷ್ಟಿಯಿಂದ ಅನಿವಾರ್ಯವಾಗಿ ಕೈಬಿಡಲಾಗಿದೆ. ಹೀಗೆ ಕೈ ಬಿಟ್ಟಿರುವುದರ ಅರ್ಥ ಆ ಲೇಖಕರ ಶ್ರೇಷ್ಠತೆಯನ್ನು ಕಡೆಗಣಿಸುವುದಿಲ್ಲ. ಆಯ್ಕೆಯ ಹಿಂದಿನ ಇಂತಹ ಮಿತಿಗಳ ಅರಿವು ಲೇಖಕಿಗೆ ಇದೆ.
- ನವೋದಯದ ಪ್ರಾರಂಭ ಕಾಲದ ಕತೆ, ಕಾದಂಬರಿಗಳನ್ನು ಪ್ರಬಂಧದ ದೀರ್ಘತೆಯ ಭಯದಿಂದಾಗಿ ಸೇರಿಸಿಕೊಳ್ಳಲಾಗಿಲ್ಲ. ಇದು ಕೂಡಾ ಪ್ರಬಂಧವು ವಿಧಿಸಿಕೊಂಡಿರುವ ಒಂದು ಮಿತಿ.

### ಅಧ್ಯಯನದ ಗುರಿ

೧. ಕನ್ನಡದಲ್ಲಿನ ಸ್ತ್ರೀಸಂವೇದನೆಯ ಅರ್ಥೈಸುವಿಕೆ ಮತ್ತು ಸ್ತ್ರೀವಾದಿ ಅಧ್ಯಯನಕ್ಕೆ ಸ್ಪಷ್ಟ ಸೂತ್ರವೊಂದನ್ನು ಹಾಕಿಕೊಡುವ ಪ್ರಯತ್ನ.

೨. ಕನ್ನಡದ ಸ್ತ್ರೀವಾದಿ ವಿಮರ್ಶೆಯ ವ್ಯಾಪ್ತಿಯನ್ನು ವಿಸ್ತರಿಸುವುದು.
೩. ಸ್ತ್ರೀವಾದನ್ನು ಸಂಸ್ಕೃತಿ ಚಿಂತನೆಯ ಶಾಖೆಯನ್ನಾಗಿ ಬೆಳೆಸುವ ದಿಸೆಯಲ್ಲಿ ಪ್ರಯತ್ನಿಸುವುದು.
೪. ಕನ್ನಡದ ಪ್ರಧಾನವಾಹಿನಿಯ ವಿಮರ್ಶೆಗೆ ಪೂರಕವಾದ ಬಲಿಷ್ಠ ಸ್ತ್ರೀವಾದಿ ವಾಹಿನಿಯೊಂದನ್ನು ನಿರ್ಮಿಸುವುದು.

## ಭಾಗ-೧

### ವೈದೇಹಿ ಅವರ ಕಥನ : 'ಅಡುಗೆ ಮನೆ ಹುಡುಗಿ'ಯ ಅಂತರಂಗದ ಪ್ರಶ್ನೆಗಳು

ಈಚೆಗೆ ಉತ್ತಮ ಕಥೆಗಾರ್ತಿಯೆಂದು ಹೆಸರುಗಳಿಸಿರುವ ವೈದೇಹಿ ಅವರ ಕಥಾಸಂಕಲನಗಳು ಒಟ್ಟು ನಾಲ್ಕು, ಮರಗಿಡಬಳ್ಳಿ (೧೯೭೯), ಅಂತರಂಗದ ಪುಟಗಳು (೧೯೮೪), ಗೋಲ (೧೯೮೬)[1] ಮತ್ತು ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ (೧೯೯೧). ಇವುಗಳಲ್ಲಿ ಇಲ್ಲಿಅಧ್ಯಯನಕ್ಕೆ ಆಯ್ದುಕೊಂಡಿರುವ ಕಥೆಗಳೆಂದರೆ :

| | | |
|---|---|---|
| ಮರಗಿಡ ಬಳ್ಳಿ | - | |
| ಬೀಳು-ಬೇರು | - | 'ಮರಗಿಡಬಳ್ಳಿ' ಸಂಕಲನ |
| ವರ್ತುಲ | - | |
| ಚಿಪ್ಪು | - | |
| ಅಂತರಂಗದ ಪುಟಗಳು | - | |
| ಗೂಡಿನೊಳಗೆ ಒಂದು ಹಕ್ಕಿ | - | 'ಅಂತರಂಗದ ಪುಟಗಳು' ಸಂಕಲನ |
| ಚಂದಲೆ | - | |
| ಅಕ್ಕು | - | |
| ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು | - | |
| ಸೌಗಂಧಿಯ ಸ್ವಗತಗಳು | - | 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಕಲನ |

ವೈದೇಹಿಯವರ ಕತೆಗಳು ಸಂಖ್ಯೆಯಲ್ಲಿ ಸಾಕಷ್ಟಿವೆ. ಈ ಪ್ರಬಂಧದ ಅಧ್ಯಯನಕ್ಕೆ ಹೊಂದುವ ದೃಷ್ಟಿಯಿಂದ ಮೇಲಿನ ಕತೆಗಳನ್ನು ಆಯ್ಕೆ ಮಾಡಲಾಗಿದೆ.

ಎಂದಿನಂತೆಯೇ, ವೈದೇಹಿ ಅವರ ಕಥನವನ್ನೂ ಸಹ ಇಲ್ಲಿ ನಾಲ್ಕು ಆಯಾಮಗಳಲ್ಲಿ ಪರಿಶೀಲಿಸಲಾಗಿದೆ. ಅವೆಂದರೆ,

೧. ಪಿತೃಪ್ರಧಾನ ಚೌಕಟ್ಟು ವರ್ಣಿತವಾಗಿರುವ ಕ್ರಮ
೨. ಸ್ತ್ರೀಯನ್ನು ಕುರಿತ ದೃಷ್ಟಿಕೋನ
೩. ಭಾಷೆಯ ಬಳಕೆ ಮತ್ತು ನುಡಿಗಟ್ಟುಗಳ ಪರಿಶೀಲನೆ
೪. ಕಥನ ಪ್ರಜ್ಞೆಯ ಅಧ್ಯಯನ

ಒಂದೊಂದಾಗಿ ಇವುಗಳನ್ನು ಗಮನಿಸೋಣ.

## ೧. ವೈದೇಹಿ ಅವರಲ್ಲಿ ಪಿತೃಪ್ರಧಾನ ಚೌಕಟ್ಟು ವರ್ಣಿತವಾಗಿರುವ ಕ್ರಮ

ವೈದೇಹಿ ಅವರ ಕಥೆಗಳಲ್ಲಿ ಪಿತೃವ್ಯವಸ್ಥೆ ಮೂಡಿಬಂದಿರುವ ಕ್ರಮವಿದೆಯಲ್ಲ, ಅದು ತುಂಬ ಕುತೂಹಲ ತರುವಂಥದ್ದು ಮತ್ತು ಗಮನಾರ್ಹವಾದದ್ದು. ಈ ವ್ಯವಸ್ಥೆಯು ಹೆಂಗಸಿನ ಮೇಲೆ ಹೇರುವ ಒತ್ತಡಗಳನ್ನು ಮತ್ತು ಅದರ ಕ್ರೌರ್ಯದ ಸ್ಥೂಲ ಮತ್ತು ಸೂಕ್ಷ್ಮ ಅವತಾರಗಳನ್ನು ವೈದೇಹಿ ಅತ್ಯಂತ ಧ್ವನಿಪೂರ್ಣವಾಗಿ ವರ್ಣಿಸಿದ್ದಾರೆ. ಪಿತೃವ್ಯವಸ್ಥೆಯಲ್ಲಿ ಅಧಿಕಾರ ಸ್ಥಾನದಲ್ಲಿರುವ ಗಂಡಸರು ಮತ್ತು ಹೆಂಗಸರು ಈ ಕ್ರೌರ್ಯದ ಮುಂದುವರಿಕೆಗೆ ಕಾರಣರಾಗುತ್ತಾರೆ. ಆದರೆ ಈ ಕ್ರೌರ್ಯದ ಬಲಿಪಶುಗಳಾಗುವವರಲ್ಲಿ ಹೆಂಗಸರೇ ಹೆಚ್ಚು.

ಪುರುಷಾನುಕೂಲಿಯಾದ ವ್ಯವಸ್ಥೆಯು ಅಧೀನ ಸ್ತ್ರೀಯರ ಮೇಲೆ ಎಸಗುವ ಕ್ರೌರ್ಯವು ಇವರ ಕತೆಗಳಲ್ಲಿ ಅವಾಕ್ಕಾಗುವಂತೆ ಚಿತ್ರಿತವಾಗಿದೆ. ಸ್ತ್ರೀವಾದಿ ವಿಮರ್ಶೆಗೆ ಇದನ್ನು ಗುರುತಿಸುವುದು ಕಷ್ಟವೇನಲ್ಲ. ಉದಾಹರಣೆಗೆ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು'[೩] ಕತೆಯಲ್ಲಿ "ಮೂರು ಮಾವಿನ ಮಿಡಿಯಷ್ಟಿದ್ದ" ಪುಟ್ಟಮ್ಮತ್ತೆಯ ಅಬ್ಬೆಯನ್ನು ಅವಳ ಗಂಡ ಕ್ಷುಲ್ಲಕ ಕಾರಣಕ್ಕಾಗಿ ಬಾವಿಗೆ ಎತ್ತಿಹಾಕುತ್ತಾನೆ. "ಪುಟ್ಟಮ್ಮತ್ತೆಯ ಅಬ್ಬೆ ಒಂದೇ ಮುಳುಕಿಗೆ ಕಣ್ಣು ಮುಚ್ಚಿತ್ತು".[೪] ಒಂದು ಮಾತು ಎದುರುತ್ತ ಕೊಟ್ಟದ್ದಕ್ಕೆ ಸಿಕ್ಕಿದ ಶಿಕ್ಷೆ ಇದು.

ಅಸಹಾಯಕತೆ, ಪರಾಧೀನತೆಗಳೊಂದಿಗೆ ಬಡತನವೂ ಸೇರಿಬಿಟ್ಟರೆ ಹೆಣ್ಣಿನ ಕಷ್ಟ ಇದ್ದದ್ದೂ ಹೆಚ್ಚು. ಹದಿಹರೆಯಲ್ಲಿ ಪುಟ್ಟಮ್ಮ ತನ್ನ ಮೈಮೇಲೆ ಬೀಳುವ ಗಂಡಸರಿಂದ ತಪ್ಪಿಸಿಕೊಳ್ಳಲು ಹೆಣಗಿದರೆ, ಅವಳು ವಿಧವೆಯಾದಾಗ ಸಮಸ್ಯೆಗಳು ಇನ್ನೂ ಹೆಚ್ಚುತ್ತವೆ. ಉದ್ದಕ್ಕೂ ಅವಮಾನ, ಮೂದಲಿಕೆ, ಕೊಳಕು ಮಾತು ಮತ್ತು ಮೈತುಂಬ ದುಡಿಮೆಗಳ ಗಾಣಕ್ಕೆ ಸಿಕ್ಕಿ ನವೆಯಬೇಕಾಗುತ್ತದೆ. ಬಡತನದ ಹಿನ್ನೆಲೆಯಿಂದಾಗಿ ಅವಳ ಮೊಮ್ಮಗಳಿಗೂ ಕಷ್ಟಗಳು ತಪ್ಪುವುದಿಲ್ಲ.

'ಅಕ್ಕು' ಕತೆಯಲ್ಲಿ ಈ ಕ್ರೌರ್ಯ ತನ್ನ ಪರಮಾವಧಿಯನ್ನು ಮುಟ್ಟುತ್ತದೆ. ಬಾಯಿಗೆ ಬಂದಂತೆ ಮಾತಾಡುತ್ತಾಳೆ ಎಂಬ ಕಾರಣಕ್ಕಾಗಿ ಮನೆ ಹಿರಿಯರಲ್ಲಿ ಒಬ್ಬನಾದ ವಾಸು ಚಿಕ್ಕಪ್ಪಯ್ಯ ಅವಳನ್ನು ದನ ಬಡಿದಂತೆ ಬಡಿಯುತ್ತಾನೆ. ಆಗ ಸುತ್ತಲಿದ್ದ ಜನ

"ಹಾಕ್ನಾಕ್, ಇನ್ನೂ ಹಾಕು, ಸತ್ರೆ ಸತ್ತ್‌ತ್ ಮರ್‍ಕುವಮ್ಮ ಯಾರಿಲ್ಲ"[೫]

ಎನ್ನುತ್ತಾರೆಯೇ ಹೊರತು ಯಾರೂ ಬಿಡಿಸಿಕೊಳ್ಳಲು ಬರುವುದಿಲ್ಲ. ಹೊಡೆತವನ್ನು ತಡೆಯುವುದಿಲ್ಲ. ಮೇಲೆ ಉಂಟಾಗುವ ಕ್ರೌರ್ಯ ಬಡತನದಿಂದ, ಗಂಡನಿಲ್ಲದಿರುವ ಸ್ಥಿತಿಯಿಂದ ಉಂಟಾಗುವಂಥದ್ದು. ಇದು ಹೆಚ್ಚು ಮೂರ್ತ. ಆದರೆ ಇದಕ್ಕಿಂತ ಸೂಕ್ಷ್ಮವಾದ, ಮೇಲ್ನೋಟಕ್ಕೆ ಕಾಣದ ಕ್ರೌರ್ಯದ ಚಿತ್ರ ವೈದೇಹಿಯವರಲ್ಲಿ ಬರುತ್ತದೆ. 'ಬೀಳು-ಬೇರು'[೬] ಕತೆಯಲ್ಲಿ ಎಮ್ಮೆಯ ಕೊಳ್ಳುವಿಕೆ ಕನ್ಯಾನ್ವೇಷಣೆ - ಈ ಎರಡು ಪ್ರಕ್ರಿಯೆಗಳು ಹೇಗೆ ವರ್ಣಿತವಾಗಿವೆ ಅಂದರೆ ಎರಡೂ ಹೆಚ್ಚು ಕಡಿಮೆ ಒಂದೇ ಅನ್ನುವಂತೆ! ಇಲ್ಲಿನ ಸೂಕ್ಷ್ಮ ಹಿಂಸೆ ಮನಸ್ಸನ್ನು ಮುಟ್ಟುತ್ತದೆ.

ಈ ಕ್ರೌರ್ಯದ ಇನ್ನೊಂದು ವರಸೆ "ಸೌಗಂಧಿಯ ಸ್ವಗತಗಳು"[೭] ಕತೆಯಲ್ಲಿ ವರ್ಣಿಸಲ್ಪಟ್ಟಿದೆ. ಸೌಗಂಧಿ, ಓದಿ ಉದ್ಯೋಗಸ್ಥಳಾಗಿರುವ ಹೆಣ್ಣಾದರೂ ಅವಳ ವ್ಯಕ್ತಿತ್ವಕ್ಕೆ, ಸ್ವಾತಂತ್ರ್ಯಕ್ಕೆ ಬೆಲೆ ಕೊಡದ ಅವಳ ತಂದೆ ತಾಯಿ ಮತ್ತು ಸುತ್ತಮುತ್ತಲಿನವರು ಅವಳ ಬದುಕನ್ನು ನರಕವಾಗಿಸಿದ್ದಾರೆ. ಅವಳು ಮುಂದೆ ವಾಸ್ತವ್ಯ ಹೂಡಲಿರುವ ಬಾಡಿಗೆ ಮನೆಯ ಒಡತಿಗೆ ಗಂಡನಿಲ್ಲ ಎಂಬ ಅಂಶ ತಮ್ಮ ಮಗಳ ಸುರಕ್ಷೆಗೆ ಸಹಾಯ ಮಾಡುತ್ತದೆ ಎಂಬ ಅಭಿಪ್ರಾಯ ಅವಳ ತಂದೆಯದು! ಸೌಗಂಧಿ ಯೋಚಿಸುತ್ತಾಳೆ.

> "....ಅವಳಿಗೆ ಗಂಡನಿಲ್ಲದಿರುವುದು, ಒಬ್ಬಂಟಿ ಮಗಳು ಅವರ ಮನೆಯಲ್ಲಿ ಇರಬೇಕಾದ ಸಂದರ್ಭದಲ್ಲಿ ಒಂದು ಒಳ್ಳೆಯ ಅಂಶವೆಂತವೇ! ಸೌಗಂಧಿ ಕಕ್ಕಾಬಿಕ್ಕಿಯಾಗಿ ತಂದೆಯನ್ನು ನೋಡಿದಳು. ಕ್ರೌರ್ಯದ ಸ್ವರೂಪ ಕೋರೆದಾಡೆ ಉರುಟುಗಣ್ಣು ಅಂತೆಲ್ಲ ಎಣಿಸಿಕೊಂಡಿದ್ದಳು ಸೌಗಂಧಿ, ಆದರೆ, ತಂದೆ ನೋಡಲು[೮] ಎಷ್ಟು ಸಾಧುವಿದ್ದರು!...."

ತನ್ನ ತಂದೆ, ತಾಯಿ, ಮನೆಯೊಡತಿ ಎಲ್ಲರೂ ತಮ್ಮ ಅತಿ ಜಾಗರೂಕತೆ, ಕಠಿಣ ನೈತಿಕ ನಿಯಮಗಳಿಂದ ತನ್ನ ಸ್ವಾತಂತ್ರ್ಯವನ್ನು ಕದಿಯುತ್ತಿದ್ದಾರೆ. ಇದು ಸೌಗಂಧಿಗೆ 'ಬ್ರಿಟಿಷರ' ನೆನಪು ತರುತ್ತದೆ. ಇದೂ ಒಂದು ರೀತಿಯ ವಸಾಹತೀಕರಣವೇ. ಪ್ರಜ್ಞೆಯ ವಸಾಹತೀಕರಣ.

'ಚಿಪ್ಪು' ಕತೆಯಲ್ಲೂ ಅಷ್ಟೆ. ತಾನೇ ಅಂತರಂಗೀಕರಿಸಿಕೊಂಡಿರುವ ಪಿತೃಮೌಲ್ಯಗಳಿಂದಾಗಿ, ತನ್ನೊಳಗಿನ ಮಾತುಗಳನ್ನು ಹೇಳುವ ಸ್ಥೈರ್ಯವನ್ನೇ ಕಳೆದುಕೊಂಡ ಯಶೋಧೆ, ಅಕಡಕತ್ತರಿಗೆ ಸಿಕ್ಕಿಹಾಕಿಕೊಂಡಂತೆ ನರಳುತ್ತಾಳೆ. ಹಳೆಯ ಪಾಠಗಳು ಮತ್ತು ಹೊಸ ಆಲೋಚನೆಗಳ ಮಧ್ಯೆ ಸಿಕ್ಕಿಹಾಕಿಕೊಂಡು, ಕೊನೆಗೂ "ಹಳೆಯ ವಾಸನೆಗಳ ಅಮಲಿ"ಗೆ ಸಿಕ್ಕಿ ಅತ್ಯಂತ ಗೊಂದಲ ಅನುಭವಿಸುತ್ತಾಳೆ. ಈ ಹಿಂಸೆಯ ಅನುಭವದಿಂದ ಅವಳ ಕಣ್ಣಲ್ಲಿ ನೀರು ಹರಿಯುತ್ತದೆ. ವ್ಯವಸ್ಥೆಯು ಸ್ತ್ರೀ ಪ್ರಜ್ಞೆಯನ್ನು ಹೀಗೆ ವಶಕ್ಕೆ ತೆಗೆದುಕೊಳ್ಳುವುದು, ಮೂರ್ತ ಕ್ರೌರ್ಯಕ್ಕಿಂತಲೂ ಹಿಂಸ್ರಕವಾದ ಸಂಗತಿ. ಇದನ್ನು ವೈದೇಹಿ ಅತ್ಯಂತ ಮಾರ್ಮಿಕವಾಗಿ ತೋರಿಸಿಕೊಟ್ಟಿದ್ದಾರೆ. ಸ್ತ್ರೀವಾದದ ಯಾವ ವಾಚ್ಯ ಹೇಳಿಕೆಗಳ ಸಹಾಯವೂ ಇಲ್ಲದೆ, ತೀವ್ರವಾದ ಸ್ತ್ರೀಸಂವೇದನೆಯಿಂದಲೇ ವೈದೇಹಿ ನಮ್ಮ ಪ್ರಜ್ಞೆಯನ್ನು ವಿಸ್ತರಿಸುತ್ತಾರೆ.

## ೨. ವೈದೇಹಿಯವರ ಕಥನದಲ್ಲಿ ಸ್ತ್ರೀಯನ್ನು ನೋಡಲಾಗಿರುವ ಕ್ರಮ

ವೈದೇಹಿಯವರ ಅನೇಕ ಕತೆಗಳಿಗೆ ಸ್ತ್ರೀಯ ಒಳಜಗತ್ತು ಕೇಂದ್ರಬಿಂದುವಾಗಿದೆ. ಹದಿಹರೆಯದ ಬಾಲೆ ಬೀನ (ಚಂದಲೆ)[೯]ಳಿಂದ ಹಿಡಿದು ಮುದುಕಿ ಮಂದಕ್ಕಳ್[೧೦] ತನಕ ವಿವಿಧ ವಯಸ್ಸಿನ ಸ್ತ್ರೀಯರು ಇವರ ಕತೆಗಳಲ್ಲಿ ಬರುತ್ತಾರೆ. ಬಡತನ, ಶ್ರೀಮಂತಿಕೆ, ವಿವಾಹಿತ ಸ್ಥಿತಿ, ಅವಿವಾಹಿತ ಸ್ಥಿತಿ, ವೈಧವ್ಯ....ಈ ಎಲ್ಲ ಸ್ಥಿತಿಗಳನ್ನೂ ಮೀರಿ ಹರಿಯುವ ಸ್ತ್ರೀ ಸಮಸ್ಯೆಗಳು ವೈದೇಹಿಯವರ ಅವಗಾಹನೆಗೆ ಒಳಗಾಗಿವೆ. ಯಾಂತ್ರಿಕವಾಗಿ ಬದುಕಲು ಒಪ್ಪದೆ, ಬದುಕಿನ ಸಾರ್ಥಕತೆಯ ಕುರಿತ ಪ್ರಶ್ನೆಗಳನ್ನು ಕೇಳುವ ಇವರ ಪ್ರಜ್ಞೆ, ಸ್ತ್ರೀಯರ ಬಾಳನ್ನು ರಸಹೀನವಾಗುವಂತೆ ಮಾಡುವುದು ಯಾವುದು ಎಂಬ ಪ್ರಶ್ನೆಯನ್ನು ಕೇಳಿಕೊಳ್ಳುತ್ತದೆ.

ಈ ವಿಷಯವನ್ನು ಅಂದರೆ ಸ್ತ್ರೀಯನ್ನು ನೋಡುವ ಕ್ರಮವನ್ನು ನಾವು ಮೂರು ನೆಲೆಗಳಲ್ಲಿ ಚರ್ಚಿಸಬಹುದು.

೧. ಸ್ತ್ರೀಪಾತ್ರಗಳು ತೋರುವ ಪ್ರಶ್ನಾ ಮನೋಭಾವ

೨. ಪಿತೃಮೌಲ್ಯಗಳ ಅಂತರಂಗೀಕರಣ

೩. ವಿದ್ರೋಹದ ನೆಲೆ

೧. ಸ್ತ್ರೀಪಾತ್ರಗಳು ತೋರುವ ಪ್ರಶ್ನಾ ಮನೋಭಾವ

ಬದುಕಿನ ಸಾರ್ಥಕತೆಯ ಪ್ರಶ್ನೆಗಳನ್ನು ಕುರಿತು ಪ್ರಸ್ತಾಪಿಸಿದೆನಲ್ಲ, ನಿಜವಾಗಿ ನೋಡಿದರೆ ಈ ಪ್ರಶ್ನೆಗಳೇ ವೈದೇಹಿ ಅವರ ಕತೆಗಳ ಜೀವಮೂಲ. ಪ್ರತಿಯೊಂದನ್ನು ತನ್ನ ಜೀವನಾನುಭವದ ಓಸ್ನೆಲೆಯಲ್ಲಿ ಪರೀಕ್ಷಿಸುವ ಪ್ರಜ್ಞೆ ಇದು. ಅವರ ಕಥಾನಾಯಕಿಯರು ಎತ್ತರದ ವೇದಿಕೆಯಲ್ಲಿ ನಿಂತು, ಕಿರುಚಾಡಿ, ಘೋಷಣೆ ಕೂಗುವ ಮೂಲಕ ಪ್ರಶ್ನೆ ಕೇಳದಿರಬಹುದು. ಆದರೆ ತಾವು ಬದುಕುವ ಸ್ಥಿತಿಯ ಕುರಿತು ತಮ್ಮನ್ನು ತಾವೇ ಆಳವಾಗಿ ಪ್ರಶ್ನಿಸಿಕೊಳ್ಳುವ ಈ ನಾಯಕಿಯರು, ಓದುಗರನ್ನೂ ತಮ್ಮ ಹುಡುಕಾಟದ ಹಂದರಕ್ಕೆ ಸೇರಿಸಿಕೊಳ್ಳುತ್ತಾರೆ. ಹಾಗೆಂದೇ ವೈದೇಹಿ ಅವರ ಅನೇಕ ಕತೆಗಳಿಗೆ ಸ್ವಗತದ ಶೈಲಿಯಿದೆ.

ಈ ಕಥೆಗಳಲ್ಲಿನ ಸ್ತ್ರೀಯರಿಂದ ಮತ್ತೆ ಮತ್ತೆ ಪ್ರಶ್ನಿಸಲ್ಪಡುವ ಅಂದರೆ ಮದುವೆಯ ಸಾರ್ಥಕತೆ. 'ಅಂತರಂಗದ ಪುಟಗಳು' ಕತೆಯ ನಾಯಕಿ ಅಚಲಳ ಪ್ರಕಾರ

> "ಮದುವೆಯಾದರೆ ಎಂತಹವನನ್ನು ಗೊತ್ತುಂಟ? ಅವನನ್ನು ಒರಗಿದರೆ
> ಸಾಕು, ಆಹ ಎನಿಸುವಂತಿರಬೇಕು"[೧೧]

ಅದಕ್ಕೇ, "ಬಿಟ್ಟರೆ ಸಿಗುವುದಿಲ್ಲ" ಎಂದು ಅವಸರವಸರವಾಗಿ ಮದುವೆಯಾಗಲು ಹೊರಟ ಗೆಳತಿಗೆ

> 'ಸರಿತಾ, ನೀನು ವ್ಯಾಪಾರಕ್ಕೆ ಹೊರಟಿದ್ದಿ. ಅಗ್ಗಕ್ಕೆ ಮಾಲು ಸಿಕ್ಕಾಗ ಗಪ್ಪಂತ
> ಹಿಡಿದುಕೊಳ್ಳುವವರಂತೆ'[೧೨] ಚಪ್ಪರ, ವಾದ್ಯ ಉಡುಪು, ಶೃಂಗಾರ, ಆಭರಣ,
> ಅಂತಸ್ತು, ಆಶೀರ್ವಾದದ ಅಕ್ಷತೆಕಾಳುಗಳಿಗಾಗಿ ಮದುವೆಯಾಗುವುದು ಹೇಗೆ?[೧೩]

'ಚಿಪ್ಪು' ಕತೆಯ ನಾಯಕಿಯೂ ಅಷ್ಟೆ. ಮದುವೆಯ ಉರುಳಿಗೆ ಸಿಕ್ಕಿಹಾಕಿಕೊಳ್ಳಬೇಕಾದಾಗ ಅಸ್ತಿತ್ವವನ್ನೇ ಬೆಂಕಿ ಮಾಡಿಕೊಂಡು ಆಲೋಚಿಸುತ್ತಾಳೆ.

> ಮದುವೆ, ಆರತಕ್ಷತೆ, ಮದುವೆ, ಅರತಕ್ಷತೆ.....ಇಸ್ಸಿ, ಆ ಶಬ್ದವೇ
> ಅಸಹ್ಯವೆನ್ನಿಸುತ್ತದೆ. ಇಷ್ಟಕ್ಕೂ ಮದುವೆ ನಿಜಕ್ಕೂ ತನಗೆ ಬೇಕೆ[೧೪]

'ಬೀಳು-ಬೇರು' ಕತೆಯ ಇಂದಿ, ಗಂಡು ಬಂದ ತನ್ನನ್ನು ನೋಡಿ ಹೋದ ಮೇಲೆ

> "ಇಸ್ಸಿ, ನಾನು ಇನ್ನು ಮೇಲೆ ಹಾಗೆ ಕೂಡುವುದಿಲ್ಲ. ನಾನೇನು ವಸ್ತುವಲ್ಲ,
> ಪ್ರಾಣಿಯಲ್ಲ-ಎಂತ ಜೀವ ಹೋದವರಂತೆ ಅತ್ತಿದ್ದಳು"[೧೫]

ಮದುವೆಯನ್ನಷ್ಟೆ ಅಲ್ಲ, ಪಿತೃವ್ಯವಸ್ಥೆಯು ತುಂಬ ವೈಭವೀಕರಿಸುವ ತಾಯ್ತನ ಮತ್ತು ತಾಯಿ-ಮಕ್ಕಳ ಸಂಬಂಧವನ್ನೂ ಕೂಡ ಇಲ್ಲಿನ ನಾಯಕಿಯರು ಪ್ರಶ್ನಿಸುತ್ತಾರೆ.

'ಮರಗಿಡಬಳ್ಳಿ' ಕಥೆಯ ಮಂದಕ್ಕ ಸಾವಿನ ಹಾಸಿಗೆಯಲ್ಲಿ, ಬಾಯಿ ಕಳೆದುಕೊಂಡು ಬಿದ್ದಾಗ ಅವಳಲ್ಲಿ ಮೂಡುವ ಪ್ರಶ್ನೆಗಳು ನಿಜಕ್ಕೂ ಮನ ಕಲಕುತ್ತವೆ.

ಪರಾವಲಂಬಿಯಾಗಿರುವ, ಸಾಯುತ್ತಿರುವ ತನ್ನನ್ನು ಮಕ್ಕಳು ಪರೋಕ್ಷವಾಗಿ ತಿರಸ್ಕರಿಸುತ್ತಿರುವುದನ್ನು ಮತ್ತು ತಾನು ಬೇಗ ಸಾಯಲಿ ಎಂದು ಸುತ್ತು ಬಳಸಿ ಹಾರೈಸುವುದನ್ನು ನೋಡಿದಾಗ ಮಂದಕ್ಕನ ಎದೆ ಒಡೆಯುತ್ತದೆ.

> "ನಾನು ಸತ್ತರೆ ಯಾರೂ ಅಳುವಂತಿಲ್ಲ. ದುಃಖಿಸುವಂತಿಲ್ಲ, ನನ್ನ ಮರಣ
> ದುಃಖಿಸಲಾರದ, ದುಃಖಿಸಬಾರದ ಸಾವಿನ ಸಾಲಿಗೆ ಸೇರಿದೆ"[೧೬]

ಹೀಗೆಂದುಕೊಳ್ಳಬೇಕಾದರೆ ಆ ವೃದ್ಧ ಹೃದಯ ಎಷ್ಟು ನೊಂದಿರಬೇಕು!? ತಾನಿರುವ ಪರಿಸ್ಥಿತಿಯನ್ನು ನೋಡುವಾಗ ಮಂದಕ್ಕನಿಗೆ

> "ಇಷ್ಟರವರೆಗೆ ಸತ್ಯವೆಂದೇ ಗಟ್ಟಿಯಾಗಿ ನಂಬಿದವುಗಳೆಲ್ಲ ಮಿಥ್ಯೆಯಲ್ಲಿ
> ಮಿಥ್ಯೆ"[೧೭]

ಅನ್ನಿಸುತ್ತದೆ. ಮಕ್ಕಳ ಮೇಲಿನ ಮಮಕಾರ, ಹೆಮ್ಮೆ ಎಲ್ಲ ಖಾಲಿ ಖಾಲಿ ಅನ್ನಿಸತೊಡಗುತ್ತದೆ. ಮುದಿ ಹಸುಗಳನ್ನು ತಮ್ಮ ಮನೆಯಿಂದ ಹೊರತಳ್ಳಿದ್ದು ನೆನಪಾಗುತ್ತದೆ. ನರಳಿ ಸತ್ತ ತನ್ನ ಅಮ್ಮ ಎದ್ದು ಬಂದು ನಕ್ಕಂತಾಗುತ್ತದೆ. ಆ ತಾಯಿಜೀವ ತನ್ನನ್ನು ತಾನೇ ಅನೇಕ ಸಂಕಟಕರ ಪ್ರಶ್ನೆಗಳನ್ನು ಕೇಳಿಕೊಳ್ಳಲಾರಂಭಿಸುತ್ತದೆ.

ಬದುಕಿನ ವಿಪರ್ಯಾಸ ನೋಡಿ. ತಾಯಿ ಸಾಯುತ್ತಾ ಬಿದ್ದಿದ್ದರೂ, ಮಂದಕ್ಕನ ಮಗಳು ಶಾರದೆಗೆ ತಾಯಿಗಿಂತ ತನ್ನ ಮಕ್ಕಳ ಮೇಲಿನ ಆಕರ್ಷಣೆ, ಅಕ್ಕರೆ ಹೆಚ್ಚು. ಅವಳು ತನ್ನ ಮಕ್ಕಳ ಬಳಿ ಹೋಗಲು ಇನ್ನಿಲ್ಲದ ಆತುರ ತೋರುವಾಗ ಮಂದಕ್ಕ ಮೌನವಾಗಿ ಹೇಳಿಕೊಳ್ಳುತ್ತಾಳೆ.

> "ಓಡು, ಓಡು, ಲೌಡಿ ಮಗಳೇ. ಈಗ ನಿನ್ನ ಸರದಿ...."[೧೮]

ಈ ಒಂದೇ ಮಾತಿನಲ್ಲಿ ತಾಯ್ತನದ ಕುರಿತ ದುರಂತ ಅಡಗಿದಂತಿದೆ* ಈ ದುರಂತದ ಅನಾವರಣವನ್ನು ಮಂದಕ್ಕನ ಈ ವಿಚಾರದಲ್ಲೇ ಕಾಣಬಹುದು.

> "ನಾನು ಗುಣಾಕಾರ, ಭಾಗಾಕಾರ, ಹಾಕುತ್ತಲೇ ಇದ್ದೇನೆ. ಎಷ್ಟು ಎಣಿಸಿದರೂ
> ಶೂನ್ಯವೇ ಬರುತ್ತಿದೆ. ಲೆಕ್ಕ ತಪ್ಪಿತೆಂದು ಮತ್ತೆ ಗುಣಿಸುತ್ತೇನೆ."[೧೯]

ಹೀಗೆ ತಲತಲಾಂತರದಿಂದ ನಾವು ನಂಬಿಕೊಂಡು ಬಂದ ಸಂಗತಿಗಳನ್ನು ಅಲ್ಲಾಡಿಸಿ, ಈ ನಾಯಕಿಯರು ನಮ್ಮಲ್ಲೂ ಸಂಕಟಕಾರಿ ಪ್ರಶ್ನೆಗಳನ್ನು ಹುಟ್ಟಿಸುತ್ತಾರೆ.

**೨. ಪಿತೃಮೌಲ್ಯಗಳ ಅಂತರಂಗೀಕರಣ**

ವೈದೇಹಿಯವರ ಸ್ತ್ರೀಪಾತ್ರಗಳನ್ನು ಗಮನಿಸುವಾಗ ನಮ್ಮ ಅರಿವಿಗೆ ಬರುವ ಇನ್ನೊಂದು ಸಂಗತಿ ಅಂದರೆ, ಹೇಗೆ ಮನಸ್ಸುಗಳೂ ಸಹ ನಿಧಾನವಾಗಿ ಪಿತೃಮೌಲ್ಯಗಳಿಗೆ ಸರಿಯಾಗಿ ಪಳಗಿಸಲ್ಪಡುತ್ತವೆ ಎಂಬುದನ್ನು ಗುರುತಿಸುವ ಕ್ರಮ.

ತನ್ನ ಹದಿಹರೆಯಲ್ಲಿ ಚೆಲುವಾಗಿ, ಚುರುಕಾಗಿ ಓಡಾಡುತ್ತಾ

> "ಆಂಟಿ, ನನ್ನ ನಿಜವಾದ ಇಷ್ಟ ಕೇಳುತ್ತೀರಾ ಸೂಳೆಯಂತಿರಬೇಕು, ಅಂಟಿ
> ಏನು ಮಜ ಅಲ್ಲ ಆಗ"[೨೦]

ಎಂದು ತುಂಟವಾಗಿ ರಮಿಯನ್ನು ಕೇಳುವ ಬೀನ, ಮುಂದೆ ಹೇಗೆ ಪಳಗುತ್ತಾಳೆಂದು ನೋಡಿದರೆ ಆಶ್ಚರ್ಯವಾಗುತ್ತದೆ. ಯೌವನದ ಪ್ರವಾಹಕ್ಕೆ ಸಿಕ್ಕಿ, ಮದುವೆಗಿಂತ ಮುಂಚೆ ಬಸಿರಾದ ಬೀನಾಳ ಗರ್ಭ ತೆಗೆಸುವ ಪರಿಸ್ಥಿತಿ ಬರುತ್ತದೆ. ನಂತರ ಶಾಸ್ತ್ರೋಕ್ತ ಮದುವೆಯಾಗಿ, ಮಗು ಹೆತ್ತು ಮಲಗಿದ ಬೀನಾಳನ್ನು 'ರಮಿ ಆಂಟಿ' ನೋಡಲು ಬಂದಾಗ

> "ಆಂಟಿ, ಹೇಗಿದೆ ಮಗು? ಪೂರ ಅವಳ ಅಪ್ಪನಂತೆಯೇ ಅಲ್ಲ"[೨೧]

ಅಂದಾಗ, ಲೇಖಕಿ ಹೇಳುತ್ತಾರೆ "ಚೊಚ್ಚಲು ಹೆತ್ತು ಮಲಗಿದ ಎಲ್ಲ ಹುಡುಗಿಯರ ಸ್ವರ ಒಂದಾಗಿ ಕೇಳಿದಂತೆ....ರಮಿ ಅವಳನ್ನೇ ನೋಡಿದಳು. ಇದು ಬೀನ ಅಲ್ಲ."[೨೨] 'ಚಿಪ್ಪು' ಕತೆಯ ನಾಯಕಿ ಯಶು, ತನ್ನ ಮನೆಯವರಿಂದ ಒಳ್ಳೆಯ ಹುಡುಗಿ (ಅರ್ಥಾತ್ ಯಾರನ್ನು ಬೇಕಾದರೂ ಮದುವೆಯಾಗುವವಳು) ಎಂದು ಹೊಗಳಲ್ಪಟ್ಟಾಗ ಯಶು

> ಈ ಹೊಗಳಿಕೆ ಬೇಡ, ಅದು ತನ್ನದಲ್ಲ. ಯಾಕೆ ಹೀಗೆ ಹೊಗಳಿ ನನ್ನ
> ನಾಲಗೆಯ ಬಲವನ್ನೇ ಕಳೆಯಿಸುತ್ತಿ....ಎನ್ನಲು ಪ್ರಯತ್ನಿಸಿದಳು ಆದರೆ
> ಉಸಿರಿರುವುದಿಲ್ಲ. [೨೩]

ದ್ವಂದ್ವಗಳ ನಡುವೆ ಸಿಕ್ಕಿ ಉಬ್ಬೆಗೆ ಹಾಕಿದಂತಾದ ಯಶು ಯೋಚಿಸುತ್ತಾಳೆ.

> ಅಜ್ಜಿ, ಅಮ್ಮ, ಅಪ್ಪ ನೆರೆಹೊರೆಯವರು ತಾನು ಹುಟ್ಟುವ ಮುಂಚೆಯೇ
> ಸೃಷ್ಟಿಸಿ ಇಟ್ಟ ಆ ಹಳೆಯ, ನಾರುವ ಬೋಳುಬೇಲಿಯ ಒಳಗೆ ತನ್ನ ನಾಲಿಗೆ
> ಬಂಧಿತವಾಗಬೇಕೇ[೨೪]

ಆ ಕತೆಯಲ್ಲಿ ಬರುವ ರಂಗಜ್ಜಿ, ಯಶುವಿಗೆ ಇಡೀ ಸನಾತನ ಪರಂಪರೆಯ ಪ್ರತೀಕವಾಗಿ ಕಾಣಿಸುತ್ತಾಳೆ. ಆ ಅಜ್ಜಿ ಸತ್ತಾದರೂ ಹೋಗಬಾರದೆ ಎಂದು ಯಶು ಚಡಪಡಿಸುತ್ತಾಳೆ.

ತನ್ನತನ ಸೋರಿಹೋಗುವುದನ್ನು ನಿಸ್ಸಹಾಯಕರಾಗಿ ನೋಡುತ್ತಾ ನಿಲ್ಲುವ ಹೆಣ್ಣು ಮಕ್ಕಳ ಚಿತ್ರ ಇಲ್ಲಿ ತುಂಬ ಹೃದಯ ಸ್ಪರ್ಶಿಯಾಗಿ ಚಿತ್ರಿತವಾಗಿದೆ.

### ೩. ವಿದ್ರೋಹದ ನೆಲೆ

ಸ್ತ್ರೀಸಂವೇದನೆಗೆ ತುಂಬ ವಿಶಿಷ್ಟವಾದ ನೆಲೆಯೆಂದರೆ ವಿದ್ರೋಹದ್ದು. ಜಡಗೊಂಡ, ರೂಢಿ ಲಯದ ಬದುಕಿನ ವಿರುದ್ಧವಾಗಿ ಸ್ತ್ರೀಪ್ರಜ್ಞೆ ಹೂಡುವ ಶೀತಲಸಮರ ಇದು. ಇದು ಮಂಜುಗತ್ತಿಯಂತೆ. ಕೊಯ್ದದ್ದೇ ಗೊತ್ತಾಗುವುದಿಲ್ಲ. ತಣ್ಣಗೆ ಕತ್ತರಿಸಿ ಮಾಯವಾಗುವ ಮುಸುಕಿನೊಳಗಿನ ಆಯುಧ ಇದು.

ನಾವು ಬದುಕುತ್ತಿರುವ ವ್ಯವಸ್ಥೆ ತನ್ನೊಳಗೆ ಎಲ್ಲವೂ ಸ್ವಸ್ಥ ಎಂದು ಎಷ್ಟೇ ತೋರಿಸಿ ಕೊಂಡರೂ, ಅದು ಮುಚ್ಚಿಡುವ ಅಸಹ್ಯ ಸಂಗತಿಗಳು ಕಪಾಟಿನಿಂದ ಆಗೀಗ ಆಚೆ ಬೀಳುತ್ತಲೇ ಇರುತ್ತವೆ.

'ಅಂತರಂಗದ ಪುಟಗಳು' ಕತೆಯಲ್ಲಿ ಗಂಡನಿಂದ ತೃಪ್ತಿ ಸಿಗದ ಮಂಜು (ನಾಯಕಿ ಅಚಲಳ ಗೆಳತಿ) ಬೇರೆಯವನೊಂದಿಗೆ ಮಲಗಿ ತೃಪ್ತಿ ಪಡುತ್ತಾಳೆ. ಅವಳ ಪ್ರಕಾರ

> "ಗಂಡನೊಟ್ಟಿಗೆ ಸೂಳೆಗಾರಿಕೆ ಮಾಡುತ್ತಿದ್ದೆ. ಇವನೊಟ್ಟಿಗೆ ಮಲಗಿದ್ದಾಗ
> ಬದುಕುತ್ತಿದ್ದೇನೆ ಅನ್ನಿಸಿದೆ"[೨೫]

ಈ ಘಟನೆ ನಡೆದ ಮೇಲೆ, "ಮದುಮೆಯಾದರೆ ಹಲವು ಬಿಗಿತಗಳು ಸಡಿಲವಾಗುತ್ತವೆ"[೨೬] ಎಂದು ಅವಳೆಂದಿದ್ದರ ಅರ್ಥ ಅಚಲೆಗೆ ಆಗುತ್ತದೆ. ಕೊನೆಗೂ ಅಚಲೆಯ ನೆನಪಿನಲ್ಲಿ ಉಳಿಯುವ ವ್ಯಕ್ತಿಯೆಂದರೆ ಮಂಜು, ಗಂಡನನ್ನು ಧಿಕ್ಕರಿಸಿ ಮಲಗಲು ಆರಿಸಿಕೊಂಡ ಆ ವ್ಯಕ್ತಿ!

ಗೂಡಿನೊಳಗೆ ಒಂದು ಹಕ್ಕಿ[೨೭] ಕತೆಯ ಮಾಲತಿ 'ಯಾವಾಗಲೂ ಒಂದೇ ತರಹ ಇದ್ದು ಬೇಜಾರು' ಎಂದು ಹೊರಗಿನಿಂದ ಬೀಗ ಹಾಕಿಸಿಕೊಂಡು 'ಅನಿರ್ಬಂಧತೆ'ಯಲ್ಲಿ ಎಂಥ ಖುಷಿ ಸಿಗುತ್ತದೆ ಎಂದು ನೋಡಬಯಸುತ್ತಾಳೆ. ಹೇಗಾದರೂ ಸರಿ, ರೂಢಿಲಯವನ್ನು ಮೀರುವ ಆಸೆ ಅವಳಿಗೆ.

'ಅಕ್ಕು' ಕತೆಯಲ್ಲಂತೂ ಈ ವಿದ್ರೋಹದ ಪ್ರಜ್ಞೆ ಢಾಳಾಗಿ ಕಾಣುತ್ತದೆ. ಎಷ್ಟು ಹೊಡೆದರೂ, ಅರೆಹುಚ್ಚಿ ಅಕ್ಕುವಿನ ಸತ್ಯ ಹೇಳುವ ಬಾಯಿ ಸುಮ್ಮನಾಗಿಯೇ ಇಲ್ಲ. ಸಂಭಾವಿತರಂತೆ ಪಾರ್ಟು ಹಾಕುವ ಮರ್ಯಾದಸ್ಥರ ಒಳಗಿನ ಕೊಳಕನ್ನು ತೋರಿಸಿಯೇ ಬಿಡುತ್ತದೆ. ತನ್ನನ್ನು ಆಡಿಕೊಂಡ ತಮ್ಮಣ್ಣಯ್ಯನಿಗೆ ಅಕ್ಕು ಇದಿರೇಟು ಕೊಡುತ್ತಾಳೆ.

> "ಏ, ತಮ್ಮಣ್ಣಯ್ಯ ಬಾಲ ಮಡ್ಜ್‌ಕೊಂಡ್ ಆಚೆಗ್ ಹೋಗು. ನಿನ್ ಕೆಲ್ಸ
> ಕಾಣ್. ನನ್ ಸುದ್ದಿಗೆ ಬತ್ಯಾ ನಿನ್ ಹೆಂಡ್ತಿ ಮೊನ್ನೆ ಯಾರೊಟ್ಟಿಗ
> ಚಾಚ್ಕಂಡ್ ಮನ್ಕಂಡಿದ್ಲ್ ಅಂತೆಳಿ ಹೇಳುದಾ ಈಗ"[೨೮]

"ಭಾರತೀಯ ಸ್ತ್ರೀವಾದ"ದಲ್ಲಿ ಮನುಚಕ್ರವರ್ತಿ ಕೂಡಾ ಈ ವಿದ್ರೋಹದ ನೆಲೆಯನ್ನು ಗುರುತಿಸಿದ್ದಾರೆ.[೨೯]

ಸೌಗಂಧಿಯ ಸ್ವಗತಗಳು" ಕತೆಯ ನಾಯಕಿಗೆ ರೂಢಿ ಬದುಕು ಮತ್ತು ಒಳ್ಳೆ ಹುಡುಗಿ ಯಂತೆ ಪೋಸು ಕೊಡಬೇಕಾದ ಬಲವಂತ ಎಷ್ಟು ರೋಸಿಹೋಗಿವೆ ಎಂದರೆ ಬದುಕು ಹೇಗಾದರೂ ಬದಲಾಗಬಾರದೇ ಎಂದು ಹಪಹಪಿಸುವಷ್ಟು. ಅವಳ ಯೋಚನೆಗಳು ಯಾವ ತುದಿಯನ್ನು ಮುಟ್ಟುತ್ತವೆ ಅಂದರೆ, ತಾನೊಬ್ಬಳೇ ಒಂಟಿಯಾಗಿ ಮನೆಯಲ್ಲಿರುವಾಗ

> "ಯಾರಾದರೂ ತನ್ನನ್ನು ಬಲಾತ್ಕರಿಸಲಿ, ಹುಲಿಯಂತೆ ಬಂದೆರಗಲಿ, ಅತ್ತಿತ್ತ
> ಅಲ್ಲಾಡದಂತೆ ಕಟ್ಟಿಹಾಕಿ...."[೩೦]

ಎಂದೆಲ್ಲ ಯೋಚಿಸುತ್ತಾಳೆ.

ನಾವು ಗಮನಿಸಬೇಕಾದ ಸಂಗತಿಯೆಂದರೆ, ಇಲ್ಲಿ ನೀತಿ, ಅನೀತಿಯ ಪ್ರಶ್ನೆಗಿಂತ ಜೀವಂತ ವಾಗಿ ಬದುಕುವುದೇ ಮುಖ್ಯವಾಗುತ್ತದೆ. ಈ ಹೆಂಗಸರು ಕುಲಟೆಯರಲ್ಲ. ಆದರೆ ದೈನಂದಿನ ಲಯ, ಬಂಧಿತ ಅಸ್ತಿತ್ವಗಳಿಂದ ರೋಸಿಹೋಗಿ ಹೀಗೆ ಯೋಚನೆ ಮಾಡಲು

ಪ್ರೇರೇಪಿತರಾದವರು. ಕೊನೆಗೂ ಜೀವಂತವಾಗಿ ಬದುಕುವುದೇ ನೀತಿ ಎಂಬ ಕಾವ್ಯಸತ್ಯ ಇಲ್ಲಿ ಮರು ಒತ್ತು ಪಡೆಯುತ್ತದೆ. ಸ್ತ್ರೀಸಂವೇದನೆಯ ಉಜ್ವಲ ಉದಾಹರಣೆಗಳಿವು.

### ೩. ವೈದೇಹಿಯವರ ಭಾಷೆ ಮತ್ತು ನುಡಿಗಟ್ಟುಗಳು

ಈ ತನಕ ವಿವರಿಸಲ್ಪಟ್ಟಿರುವ ಇಷ್ಟೂ ಪರಿಣಾಮಗಳು ಸಾಧ್ಯವಾಗಿರುವುದು ವೈದೇಹಿಯವರ ತೀವ್ರವಾದ ಧ್ವನಿಪೂರ್ಣ ಭಾಷೆಯಿಂದ.[೩೧] ಭಾಷೆಯ ಬಳಕೆ ಅನ್ನುವುದು ವೈದೇಹಿಯವರ ಮಟ್ಟಿಗೆ ಕೇವಲ ನಿರೂಪಣೆಯ ಕ್ರಿಯೆಯಲ್ಲ. ಅದು ತನ್ನೊಳಗನ್ನು ಶೋಧಿಸುವ ನಿಕಷ, ಅಗ್ನಿದಿವ್ಯ, ಅಭಿವ್ಯಕ್ತಿ ಇಲ್ಲಿ ಜೀವನ್ಮರಣದ ಪ್ರಶ್ನೆಯೇನೋ ಎಂಬಷ್ಟು ತೀವ್ರವಾಗಿರುತ್ತದೆ. ಸ್ವಗತ, ಪ್ರಕಾಶನಗಳನ್ನು ಅವರು ದುಡಿಸಿಕೊಳ್ಳುವ ರೀತಿ, ಕುಂದಾಪುರ ಕಡೆಯ ಬ್ರಾಹ್ಮಣರು ಆಡುವ ಪ್ರಾದೇಶಿಕ ಆಡುಮಾತುಗಳಿಂದ ಉಂಟಾಗಿಸುವ ಸತ್ವ, ಭಾಷೆಯ ಧ್ವನಿಶಕ್ತಿಯನ್ನು ಅವರು ದುಡಿಸಿಕೊಂಡಿರುವ ರೀತಿ - ಇವುಗಳು ಸಣ್ಣಕತೆಯ ಮಾಧ್ಯಮದ ಮೇಲೆ ಅವರಿಗಿರುವ ಹಿಡಿತವನ್ನು ತೋರಿಸುತ್ತವೆ. ಅವರ ಉಪಮೆ, ರೂಪಕಗಳು ಹೆಚ್ಚಾಗಿ ಬಂದಿರುವುದು ಅಡಿಗೆ ಮನೆ ಮತ್ತು ಹೂದೋಟಗಳಿಂದ ಹಾಗೂ ಆಡುಮಾತುಗಳಿಂದ. ಅವರ ಉಪಮೆಗಳು ಪದಾರ್ಥಗಳಿಗೆ ಜೀವಗುಣವನ್ನು, ಮನಸ್ಸಿಗೆ ಪದಾರ್ಥಗುಣವನ್ನು ಆವಾಹಿಸುವ ಸಾಮರ್ಥ್ಯ ಪಡೆದಿವೆ. ಭಾಷೆ ಅನ್ನುವುದು ನಿಸ್ಸಂದೇಹವಾಗಿ ವೈದೇಹಿ ಅವರ ಕಥನದ ಶಕ್ತಿಮೂಲವಾಗಿದೆ.

### ೪. ವೈದೇಹಿಯವರ ಕಥನ ಪ್ರಜ್ಞೆ

ಸ್ತ್ರೀ ಅನುಭವನಿಷ್ಠ ಕಥನ ಅಂತ ಯಾವುದಾದರೂ ಇದ್ದರೆ ಅದು ಖಂಡಿತ ವೈದೇಹಿಯವರ ಕಥನ. ಪ್ರಧಾನ ತತ್ವ ಏನು ಹೇಳುತ್ತದೆ, ಪ್ರಧಾನ ಸಾಹಿತ್ಯ ವಾಹಿನಿ ಏನನ್ನು ಮೆಚ್ಚುತ್ತದೆ ಎಂಬುದರ ಕುರಿತು ಹೆಚ್ಚು ತಲೆ ಕೆಡಿಸಿಕೊಳ್ಳದೆ ತಮ್ಮ ಅನುಭವಕ್ಕೆ ಸಿಕ್ಕ ಬದುಕನ್ನು ಈ ಕಥನ ಪ್ರಜ್ಞೆ ನಿರೂಪಿಸುತ್ತಾ ಹೋಗುತ್ತದೆ. ಒಂದು ಉದಾಹರಣೆ ಕೊಡುವುದಾದರೆ, 'ಮರಗಿಡಬಳ್ಳಿ' ಕತೆಯಲ್ಲಿ, ಬೆಳೆದು ಸ್ವತಂತ್ರನಾದ ಮಗ ರೋಗಗ್ರಸ್ತ ತಾಯಿಯನ್ನು ನೋಡಲು ಬರುವಾಗ, 'ಉಡುಗೊರೆ ತರುವುದು ಭಾವುಕತೆಯ ಪ್ರದರ್ಶನ' ಎಂದು ಹೇಳಿದಾಗ ತಾಯಿ ಅಂದುಕೊಳ್ಳುತ್ತಾಳೆ.

> "ಭಾವುಕತೆಯಿಂತೆ! ಅದು ನನ್ನಲ್ಲಿಯೂ ಇಲ್ಲದಿದ್ದರೆ ನೀನು ಇವತ್ತಿಗೆ
> ಹೀಗಿರುತ್ತಿದ್ದೆಯಾ!....ಕೊಟ್ಟರೂ ಕೊಡದಿದ್ದರೂ ಅಮ್ಮ ಅಮ್ಮನೆ ಎಂಬ
> ವಾದ ಮಾತ್ರ ಆಗ (ಚಿಕ್ಕವನಿದ್ದಾಗ) ಖಂಡಿತ ಒಡ್ಡುತ್ತಿಲ್ಲ, ನೀನು."[೩೨]

ಅಂದರೆ ಸ್ತ್ರೀಸಂವೇದನೆ ಎಷ್ಟು ಬೇರೆ ರೀತಿ ಯೋಚಿಸುತ್ತದೆ ಎಂಬುದಕ್ಕೆ ಇದು ಉತ್ತಮ ಉದಾಹರಣೆ. ಸ್ತ್ರೀಯ ಜಗತ್ತನ್ನು ಪುರುಷ ನೋಟವು, ಕ್ಷುಲ್ಲಕ, ಭಾವುಕ, ತರ್ಕಹೀನ ಎಂದು ನೋಡಿದರೂ, ವೈದೇಹಿಯವರು ಈ ನೋಟದ ಯಜಮಾನ್ಯಕ್ಕೆ ಸಿಕ್ಕಲು ಒಪ್ಪದೆ, ಜಗತ್ತನ್ನು ಸ್ತ್ರೀಯ ಕಣ್ಣಿನಿಂದಲೇ ನೋಡುತ್ತಾರೆ. ಹಾಗೆಂದೇ ಅವರಿಗೆ ಪುರುಷಕಣ್ಣಿಗೆ ಕಾಣಲಾರದ ಸಂಗತಿಗಳು ಕಾಣುತ್ತವೆ; ಕೆಲವು ಕಟುಸತ್ಯಗಳು ದಕ್ಕುತ್ತವೆ. ಹೀಗಿಲ್ಲದಿದ್ದರೆ

ಮಂದಕ್ಕ ಸೃಷ್ಟಿಯಾಗುತ್ತಿರಲಿಲ್ಲ, 'ಮರ್ಯಾದಸ್ಥ' ಸುಗಂಧಿ ಹಾಗೆ ಮಾತಾಡುತ್ತಿರಲಿಲ್ಲ, 'ಅಕ್ಕು' ಹುಟ್ಟುತ್ತಿರಲಿಲ್ಲ.

'ಬರವಣಿಗೆಯ ನಾಭಿಯಿಂದ ಹೊರಡುವ ಸ್ವರ'ವನ್ನು[೧೮] ಕೇಳಿಸಲು ವೈದೇಹಿಯವರು ಕಾತುರರಾಗಿರುವುದರಿಂದ, ತಮ್ಮ ಅನುಭವ ಜನ್ಯ ಸತ್ಯವನ್ನು ಬಿಟ್ಟು ಅವರು ಇನ್ನೇನನ್ನೂ ಹೇಳುವುದಿಲ್ಲ. ಇದರಿಂದಾಗಿಯೇ ಪುರುಷ ನಿರ್ಮಿತ ಜಗತ್ತಿನಲ್ಲಿ ಬದುಕುವ ಸ್ತ್ರೀಯ ಸಂವೇದನೆಗಳು ಅವರಿಗೆ ಸ್ಪಷ್ಟವಾಗಿ ಅರಿವಾಗಿವೆ.

ಹೀಗೆ, ವೈದೇಹಿ ಅವರ ಕಥನವು ಅಡುಗೆ ಮನೆಯಿಂದಲೇ ಹೊರಟು, ಸ್ತ್ರೀಯ ಜಗತ್ತಿನಲ್ಲೆಲ್ಲ ಸುತ್ತಾಡಿ ಅವಳ ಅಂತರಂಗದ ಪ್ರಶ್ನೆಗಳಲ್ಲಿ ಕೆಲವನ್ನು ನಮ್ಮ ತನಕ ತಲುಪಿಸುತ್ತದೆ.

**ಟಿಪ್ಪಣಿಗಳು**

೧. ಗೋಲ ಸಂಕಲನದ 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಕತೆ ಸ್ತ್ರೀಸಂವೇದನೆಯ ದೃಷ್ಟಿಯಿಂದ ತುಂಬ ಮುಖ್ಯವಾದದ್ದು. ಪ್ರಬಂಧವು ವಿಧಿಸಿಕೊಂಡಿರುವ ಗಾತ್ರದ ಮಿತಿಯಿಂದಾಗಿ ಅದನ್ನು ಇಲ್ಲಿ ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸುವುದು ಸಾಧ್ಯವಾಗಿಲ್ಲ. ಶಕುಂತಲೆಯನ್ನು ಪುರಾಣ ಪ್ರಭಾವಳಿಯಿಂದ ಆಚೆ ಎಳೆದು, ಸಾಮಾನ್ಯ ಮನುಷ್ಯಳಂತೆ ಕಾಣುವ ಪ್ರಯತ್ನ ಇಲ್ಲಿದೆ.
೨. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಕಲನ.
೩. ಪುಟ್ಟ ಮತ್ತೆ ಮತ್ತು ಮೊಮ್ಮಗಳು. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಪು. ೫.
೪. ವಿಧವೆಯ ಕಷ್ಟ ಕನ್ನಡ ಕಥಾ ಪರಂಪರೆಯಲ್ಲಿ ಮತ್ತೆ ಮತ್ತೆ ಎತ್ತಿಕೊಳ್ಳಲ್ಪಡುವ ವಸ್ತುವಾಗಿದೆ.
೫. ಅಕ್ಕು, ಅಂತರಂಗದ ಪುಟಗಳು, ಪು. ೮.
೬. 'ಮರಗಿಡಬಳ್ಳಿ' ಸಂಕಲನ.
೭. 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ' ಸಂಕಲನ.
೮. 'ಸೌಗಂಧಿಯ ಸ್ವಗತಗಳು', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ', ಪು. ೬೧.
೯. ಚಂದಲೆ, 'ಅಂತರಂಗದ ಪುಟಗಳು' ಸಂಕಲನ.
೧೦. ಮರಗಿಡಬಳ್ಳಿ 'ಮರಗಿಡಬಳ್ಳಿ' ಸಂಕಲನ.
೧೧. ಅಂತರಂಗದ ಪುಟಗಳು, ಅಂತರಂಗದ ಪುಟಗಳು ಸಂಕಲನ, ಪು. ೧೩೨.
೧೨. ಅಂತರಂಗದ ಪುಟಗಳು, ಅಂತರಂಗದ ಪುಟಗಳು ಸಂಕಲನ, ಪು. ೧೩೨.
೧೩. ಅದೇ ಪು. ೧೩೩.
೧೪. ಚಿಪ್ಪು, ಮರಗಿಡಬಳ್ಳಿ, ಪು. ೧೦೦.
೧೫. ಬೀಳು, ಬೇರು, ಮರಗಿಡಬಳ್ಳಿ, ಪು. ೧೩೫.
೧೬. ಮರಗಿಡಬಳ್ಳಿ, ಮರಗಿಡಬಳ್ಳಿ, ಪು. ೧೨೮.
೧೭. ಮರಗಿಡಬಳ್ಳಿ, ಮರಗಿಡಬಳ್ಳಿ, ಪು. ೧೨೯.
೧೮. ಮರಗಿಡಬಳ್ಳಿ, ಮರಗಿಡಬಳ್ಳಿ, ಪು. ೧೨೯.

* ಈ ಮಾತು ಕೇಳುವಾಗ ಪಂಪಭಾರತದಲ್ಲಿ ಬರುವ "ಸೂಳ್ ಬಪ್ಪುದು ಕಾಣಾ ಮಹಾಜಿರಂಗದೊಳ್" ಎಂಬ ಮಾತು ಫಕ್ಕನೆ ನೆನಪಾಗುತ್ತದೆ.

೧೯. ಮರಗಿಡಬಳ್ಳಿ, 'ಮರಗಿಡಬಳ್ಳಿ' ಪು. ೧೨೭.

೨೦. ಚಂದಲೆ, ಅಂತರಂಗದ ಪುಟಗಳು, ಪು. ೬೬.

೨೧. ಅದೇ -"- ಪು. ೭೪.

೨೨. ಅದೇ -"- ಪು. ೭೪.

೨೩. ಚಿಪ್ಪು, ಮರಗಿಡಬಳ್ಳಿ, ಪು. ೧೦೦.

೨೪. ಚಿಪ್ಪು, ಮರಗಿಡಬಳ್ಳಿ, ಅಂತರಂಗದ ಪುಟಗಳು, ಪು. ೧೩೭.

೨೫. ಅಂತರಂಗದ ಪುಟಗಳು, ಅಂತರಂಗದ ಪುಟಗಳು, ಪು. ೨೩೭.

೨೬. ಅದೇ ಪು. -"- ೧೩೭.

೨೭. ಅಂತರಂಗದ ಪುಟಗಳು, ಸಂಕಲನದಲ್ಲಿದೆ.

೨೮. ಅಕ್ಕ, ಅಂತರಂಗದ ಪುಟಗಳು, ಪು. ೫೦.

೨೯. ನೋಡಿ, ಮನುಚಕ್ರವರ್ತಿ, ಭಾರತೀಯ ಸ್ತ್ರೀವಾದ.

೩೦. ಸೌಗಂಧಿಯ ಸ್ವಗತಗಳು, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ಪು. ೬೪.

೩೧. ಇವರ ಭಾಷೆ ಧ್ವನಿಪೂರ್ಣ ಎಂಬುದನ್ನು ಅನೇಕ ವಿಮರ್ಶಕರು ಗುರುತಿಸಿದ್ದಾರೆ. ನೋಡಿ, ಡಾ. ಶಾಲಿನ ರಘುನಾಥ್ ಅವರ ಲೇಖನ, 'ಸಮನ್ವಿತ' ಪು. ೯೧ ಮತ್ತು ಅನುಪಮಾ ನಿರಂಜನ ಅವರು 'ಗೋಲ' ಕಥಾ ಸಂಕಲನಕ್ಕೆ ಬರೆದಿರುವ ಹಿನ್ನುಡಿ.

೩೨. ಮರಗಿಡಬಳ್ಳಿ, 'ಮರಗಿಡಬಳ್ಳಿ', ಪು. ೧೨೬.

೩೩. 'ಸಮಾಜಶಾಸ್ತ್ರ ಪ್ರಜ್ಞೆಯ ಟಿಪ್ಪಣಿ'ಗೆ ಪುಸ್ತಕಕ್ಕೆ ಬರೆದ ಮುನ್ನುಡಿಯಲ್ಲಿ ವೈದೇಹಿಯವರ ಹೇಳಿರುವ ಮಾತು ಇದು.

# ಚರಿತ್ರೆ, ಜನಪದ ಮತ್ತು ಲಿಂಗವಿವಕ್ಷೆ-ಸಂಶೋಧನೆ

ವಸು

I

**ಹೆಜ್ಜೆಗಳು**

ಚರಿತ್ರೆ ಒಂದು ಅಧ್ಯಯನ ಶಿಸ್ತಾಗಿ ತನ್ನದೇ ಆದ ಸಂಶೋಧನಾ ಮಾದರಿಯನ್ನು ಬೆಳೆಸಿಕೊಂಡು ಬಂದಿದೆ. ಚರಿತ್ರೆಯ ಬರವಣಿಗೆಗೆ ಆಕರಗಳ ಪ್ರಾಮುಖ್ಯತೆಯನ್ನು ಯಾರೂ ನಿರಾಕರಿಸುವುದಿಲ್ಲ. ಆದರೆ ಆಕರಗಳ ಪ್ರಕಾರಕ್ಕೆ ಬಂದಾಗ ವಿದ್ವಾಂಸರಲ್ಲಿ ಭಿನ್ನತೆ ಕಂಡು ಬರುತ್ತದೆ. ಲಿಖಿತ ಆಕರಗಳಿಗೆ ಸಿಗುವ ಮನ್ನಣೆ ಮೌಖಿಕ ಆಕರಗಳಿಗೆ ಸಿಗುವುದಿಲ್ಲ. ಶಿಷ್ಟ ಪರಂಪರೆಗೆ ಕೊಡುವ ಆದ್ಯತೆಯನ್ನು ಜನಪದ ಆಕರಗಳಿಗೆ ನೀಡುವುದಿಲ್ಲ.

೧. ಚರಿತ್ರೆ ಬರವಣಿಗೆ ಜನಸಮುದಾಯದತ್ತ ಸಾಗಿದಂತೆ ಆಕರಗಳೂ ಭಿನ್ನವಾಗುತ್ತಿವೆ.

೨. ಜನಪದ ಅಧ್ಯಯನ ಬೆಳೆದಂತೆ ಅದರ ಜ್ಞಾನ ಮತ್ತು ಒಳನೋಟಗಳು ಇತರ ಶಿಸ್ತುಗಳ ಮೇಲೆ ಪ್ರಭಾವವನ್ನು ಬೀರುತ್ತಿರುವ ಈ ಅಂಶವನ್ನು ಕಡೆಗಣಿಸಲಾಗುವುದಿಲ್ಲ. ಜನಪದ ವಿದ್ವಾಂಸರು ಜನಪದ ಸಾಹಿತ್ಯವನ್ನು ಸಂಗ್ರಹಿಸತೊಡಗಿದಂತೆ ಅದರ ಕಡೆ ಉಳಿದ ವಿದ್ವಾಂಸರು ಗಮನಹರಿಸಲೇ ಬೇಕಾದ ಅನಿವಾರ್ಯತೆ ಒದಗಿಬಂದಿದೆ.

೩. ಇದರ ಜೊತೆ ಜೊತೆಯಲ್ಲಿ ಬಂದ ಹೊಸ ಸಿದ್ಧಾಂತಗಳು ವಿಭಿನ್ನ ನೋಟಗಳಿಗೆ ಅವಕಾಶ ಕಲ್ಪಿಸಿದೆ. ಎಡಪಂಥೀಯ ಚಿಂತನೆ, ಕೆಳಸ್ತರದ ಅಧ್ಯಯನ ಸಾಮಾಜಿಕ ಚಳವಳಿಗಳು ಈ ಎಲ್ಲದರ ಕಾರಣದಿಂದ ಚರಿತ್ರೆಯಲ್ಲಿ ಜನಸಾಮಾನ್ಯರ ಅಧ್ಯಯನಕ್ಕೆ ಅವಕಾಶ ದೊರೆತಂತಾಗಿದೆ. ಇವೆಲ್ಲದರ ಜೊತೆಗೆ ಹಿಂದುಳಿದ, ದಲಿತ ವರ್ಗಗಳು ವಿದ್ವತ್ ಪ್ರಪಂಚಕ್ಕೆ ಪ್ರವೇಶ ಪಡೆದುದೂ ಚರಿತ್ರೆಯ ಹರವನ್ನು ವಿಸ್ತರಿಸಿತು ಮತ್ತು ಜನಪದ ಸಾಹಿತ್ಯ ಚರಿತ್ರೆಯ ಆಕರವಾಗಿ ಗುರುತಿಸಿಕೊಳ್ಳತೊಡಗಿದೆ. ಒಟ್ಟಿನಲ್ಲಿ ಚರಿತ್ರೆಯ ಬರವಣಿಗೆಗೆ ಜನಪದ ಆಕರಗಳನ್ನು ಬಳಸುವ ಹಿನ್ನೆಲೆಯಲ್ಲೂ ಸಾಮಾಜಿಕ ಸ್ಥಿತ್ಯಂತರ ಕಾರಣವಾಗಿದೆ ಎಂದರೆ ತಪ್ಪಾಗಲಾರದು.

ಮೇಲೆ ಚರ್ಚಿಸಿದ ಐದು ಅಂಶಗಳನ್ನು ಮತ್ತಷ್ಟು ವಿಸ್ತರಿಸುವುದಾದರೆ,

೧. ಚರಿತ್ರೆ ಬರವಣಿಗೆಯಲ್ಲಿ ಜನಸಾಮಾನ್ಯರನ್ನು ಕುರಿತು ಅಧ್ಯಯನ ಮಾಡುವುದು. ಇಪ್ಪತ್ತನೆಯ ಶತಮಾನದ ಕೊನೆಯ ದಶಕಗಳಲ್ಲಿ ಕಂಡ ಬೆಳವಣಿಗೆ. ರಾಜಮಹಾರಾಜರನ್ನು

ಬಿಟ್ಟು ಜನಸಾಮಾನ್ಯರ ಕಡೆ ಹೊಗಳಲು ದೀರ್ಘ ಕಾಲವನ್ನೇ ತೆಗೆದುಕೊಂಡಿತು. ಶಾಸನಗಳು, ಸ್ಮಾರಕಗಳು ಅಷ್ಟಾಗಿ ಜನಸಾಮಾನ್ಯರ ಬದುಕಿನ ಮೇಲೆ ಬೆಳಕು ಚೆಲ್ಲುವುದಿಲ್ಲ. ಆದ್ದರಿಂದ ಆಕರಗಳೂ ಭಿನ್ನವಾಗಲೇಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಮೊದಲ ತಲೆಮಾರಿನ ವಿದ್ವಾಂಸರು ಸಂಸ್ಕೃತ ಸಾಹಿತ್ಯವನ್ನು ಬಲ್ಲವರಾಗಿದ್ದರು. ಹಾಗಾಗಿ ಸಂಸ್ಕೃತ ಸಾಹಿತ್ಯ ಇತಿಹಾಸದ ಕಟ್ಟುವಿಕೆಯಲ್ಲಿ ಸಾಕಷ್ಟು ಬಳಕೆಯಾಯಿತು.

೨. ಜನಪದ ಸಾಹಿತ್ಯ ಅಧ್ಯಯನ ಒಂದು ಶಿಸ್ತಾಗಿ ೧೯೭೦ರ ದಶಕದಿಂದ ಕಾಣಬಂದರೂ, ಆರಂಭದಲ್ಲಿ ಮೌಖಿಕ ಸಂಪ್ರದಾಯಗಳ ಸಂಗ್ರಹ ಕಾರ್ಯ ನಡೆದು ಅಲ್ಲಲ್ಲಿ ಅವರ ವಿಶ್ಲೇಷಣೆಯ ಪ್ರಯತ್ನವೂ ಬೆಳೆದು ಬಂತು. ಈ ಹಂತದಲ್ಲಿ ತೊಡಗಿಕೊಂಡವರು ಒಂದು ರೀತಿಯಲ್ಲಿ ಭಾರತದಲ್ಲಿ ಶಿಕ್ಷಣವನ್ನು ಪಡೆದ ಎರಡನೇ ಪೀಳಿಗೆ ಹಾಗೂ ಗ್ರಾಮೀಣ ಹಿನ್ನೆಲೆಯಿಂದ ಬಂದ ವರ್ಗವಾಗಿತ್ತು. ಜನಪದ ಹಾಡುಗಳು, ಲಾವಣಿಗಳು, ಗಾದೆಗಳು, ನಂಬಿಕೆಗಳು, ಆಚರಣೆಗಳು ಇತ್ಯಾದಿಗಳನ್ನು ಸಂಗ್ರಹಿಸಿದರು. ಮಾನವಶಾಸ್ತ್ರೀಯ ಅಧ್ಯಯನ ನೋಟ ಈ ಕಾಲದ ಕೆಲಸದಲ್ಲಿ ಕಾಣಬರುತ್ತದೆ. ಇದರ ಪ್ರಭಾವದಿಂದ ಇಂದು ಚರಿತ್ರೆಕಾರರು ತಮ್ಮ ಮಡಿವಂತಿಕೆಯನ್ನು ಬಿಡಬೇಕಾದ ಸಂದರ್ಭ ಸೃಷ್ಟಿಯಾಗಿದೆ. ಜನರ ಬಾಯಿಂದ ಅಳಿಸಿ ಹೋಗುತ್ತಿರುವ ಮೌಖಿಕ ಪಂರಪರೆ ಲಿಖಿತ ರೂಪದಲ್ಲಿ ದಾಖಲಾಗಿ ಚರಿತ್ರೆಯ ಆಕರವಾಗಿ ಸ್ಥಾನವನ್ನು ಪಡೆದುಕೊಳ್ಳುತ್ತಿದೆ. ಮೌಖಿಕ ಆಕರಗಳನ್ನು ವಿಜಯನಗರೋತ್ತರ ಕಾಲದ ರಚನೆಗೆ ಕರ್ನಾಟಕದಲ್ಲಿ ಬಳಕೆ ಮಾಡಲಾಗಿದೆ. ಅದರಲ್ಲೂ ಲಾವಣಿಗಳು ಹಾಗೂ ಸಾಂಗತ್ಯಗಳನ್ನು ಆಧರಿಸಿರುವುದು ಕಾಣಬರುತ್ತದೆ. ಆದರೂ ಜನಪದರ ಬದುಕನ್ನು ಕಟ್ಟುವುದಕ್ಕಿಂತ ಪಾಳೇಗಾರರ ಚರಿತ್ರೆಗೊಂದಷ್ಟು ಮಾಹಿತಿಯಾಗಿ ನೋಡಲಾಗಿದೆ. ಟಿಪ್ಪು ಚರಿತ್ರೆಗೆ ಲಾವಣಿಗಳ ವಿಶ್ಲೇಷಣೆ ಆಗದಿದ್ದರೂ ಕಿತ್ತೂರು ಚನ್ನಮ್ಮ, ಸಂಗೊಳ್ಳಿ ರಾಯಣ್ಣ, ಮುಂತಾದವರ ಚರಿತ್ರೆಗೆ ಲಾವಣಿಗಳು ಬಳಕೆಯಾಗಿವೆ. ಜನಸಾಮಾನ್ಯರ ಬದುಕನ್ನು ಕಟ್ಟುವಾಗ ಹಲಗಲಿ ಬೇಡರ ಹೋರಾಟದ ಲಾವಣಿಗಳು ಮುಖ್ಯವಾಗುತ್ತದೆ. ಜನಪದ ಕಾವ್ಯಗಳೆಂದು ಸಂಗ್ರಹಗೊಂದು ಪ್ರಕಟವಾದಾಗ ಜುಂಜಪ್ಪ, ಮಂಟೇಸ್ವಾಮಿ, ಮಲೆಮಾದೇಶ್ವರ, ಸಿರಿಪಾಡ್ಡನ, ಹಾಲುಮತ ಪುರಾಣ ಇಂತಹ ಜನಪದ ಕಾವ್ಯಗಳು ಕರ್ನಾಟಕ ದಲ್ಲಿಂದು ಚರ್ಚೆಗೆ ಒಳಗಾಗುತ್ತಿರುವುದು ಈ ನಿಟ್ಟಿನಲ್ಲಿ ಒಂದು ಹೊಸ ಪ್ರಯತ್ನವೆಂದೇ ಹೇಳಬೇಕು.

೩. ಹೊಸ ಸೈದ್ಧಾಂತಿಕಗಳು ಚರಿತ್ರೆಯ ಬರವಣಿಗೆಯನ್ನು ಮಾತ್ರವಲ್ಲ ಎಲ್ಲಾ ಕ್ಷೇತ್ರಗಳಲ್ಲೂ ಬದಲಾವಣೆಯನ್ನು ತರಬಲ್ಲವು. ಮಾರ್ಕ್ಸ್‌ವಾದ ಎಲ್ಲಾ ಕ್ಷೇತ್ರದಲ್ಲೂ ಹೊಸ ಚಿಂತನೆಗೆ ಅವಕಾಶ ಕಲ್ಪಿಸಿತು. ರಾಜಮಹಾರಾಜರ ಆಚೆಗೆ ದುಡಿಯುವ ವರ್ಗದ ಕಡೆ ಗಮನಹರಿಸಿತು. ಮಾರ್ಕ್ಸ್‌ವಾದದ ಚಿಂತನೆಯ ಪ್ರಭಾವದಿಂದಲೇ ಬಂದ ಮತ್ತೊಂದು ವಾದ Subation Studies ಕೆಳಸ್ತರದ ಅಧ್ಯಯನ ಜ್ಞಾನಶಾಖೆಯನ್ನು ವಿಸ್ತರಿಸಿತು. ಸಾಹಿತ್ಯ, ಚರಿತ್ರೆ, ಸಮಾಜಶಾಸ್ತ್ರ, ಅರ್ಥಶಾಸ್ತ್ರದಲ್ಲೂ ಜ್ಞಾನ ದಿಗಂತ ವಿಸ್ತರಿಸಿತು. ಇದನ್ನು

Paradigm Shift ಎಂದೂ ಕರೆಯಬೇಕಾಗುತ್ತದೆ. ಯಾವುದನ್ನು ಸಾಹಿತ್ಯ ಅಥವಾ ಚರಿತ್ರೆಯೆಂದು ಭಾವಿಸಲಾಗಿತ್ತೊ ಹೊಸ ಸಿದ್ಧಾಂತಗಳು ಆ ಚೌಕಟ್ಟನ್ನು ಬದಲಿಸಿತು. ಕೆಳವರ್ಗಗಳ ಜೊತೆಗೆ ಮಹಿಳೆಯ ವಿಚಾರಗಳೂ ಅಲ್ಲಲ್ಲಿ ಪ್ರವೇಶ ಮಾಡತೊಡಗಿತು. ಸಾಹಿತ್ಯದ ಬರವಣಿಗೆಯಲ್ಲಿ ಪ್ರಗತಿಶೀಲ, ಬಂಡಾಯ ಚಳವಳಿಗಳು ಆರಂಭವಾದಾಗ ಅವು ಸೈದ್ಧಾಂತಿಕ ತಳಹದಿಯೊಂದಿಗೆ ಸಾಹಿತ್ಯವನ್ನು ಪ್ರವೇಶಿಸಿದವು. ಪ್ರಗತಿಶೀಲ ಸಾಹಿತ್ಯ ಚಳವಳಿ ಮಾರ್ಕ್ಸ್ ನೆಲೆಯಲ್ಲಿ ಸಮಾಜದ ವರ್ಗ ಶೋಷಣೆಯನ್ನು ವಿರೋಧಿಸಿದರೆ, ಬಂಡಾಯ ಸಾಹಿತ್ಯ ಚಳುವಳಿ ಜಾತಿ ಆಧಾರಿತ ಸಮಾಜದ ಊಳಿಗಮಾನ್ಯ ವ್ಯವಸ್ಥೆಯನ್ನು ಪ್ರಶ್ನಿಸಿತು. ಇವು ಕೇವಲ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ಭಾರತದ ಇತರ ಭಾಷೆ ಗಳಲ್ಲಂತಹ ಬೆಳವಣಿಗೆಗಳನ್ನು ಕಾಣಬಹುದು. ಕೆಲವು ಪ್ರದೇಶಗಳಲ್ಲಿ ನಕ್ಸಲ್ ವಾದದ ಹಿನ್ನೆಲೆಯಲ್ಲಿ ಸಾಹಿತ್ಯ ರಚಿತವಾಯಿತು. ಇಷ್ಟೇ ತೀವ್ರವಾಗಿ ಚರಿತ್ರೆ ಬರವಣಿಗೆ ಬೆಳೆದು ಬಾರದಿದ್ದರೂ ಬಂದ ಬರವಣಿಗೆಗಳಲ್ಲಿ ಇಂತಹ ಧೋರಣೆಗಳನ್ನು ಕಾಣಬಹುದು.

ಹಿಂದುಳಿದ ಹಾಗೂ ದಲಿತ ಚಳವಳಿಗಳು ಭಾರತದ ಸಾಮಾಜಿಕ ಸ್ಥಿತ್ಯಂತರಕ್ಕೆ ಕಾರಣವಾಯಿತು. ಹಿಂದುಳಿದ ವರ್ಗಗಳು ಹಾಗೂ ದಲಿತ ಹೋರಾಟಗಳು ವೈಚಾರಿಕ ಚಿಂತನೆಗೆ ಸಮಾಜವನ್ನು ಹಚ್ಚಿತು. ಈ ಎರಡು ಚಳವಳಿಗಳು ವಿಸ್ತಾರವಾದ ಜನಸ್ತೋಮವನ್ನು ಶಿಕ್ಷಿತರನ್ನಾಗಿಸಿತು. ಜನರಲ್ಲಿ ಐಡೆಂಟಿಟಿಯ ಪ್ರಜ್ಞೆಯನ್ನು ಹುಟ್ಟು ಹಾಕಿತು. ಹೀಗೆ ಬಂದ ವರ್ಗ ತನ್ನ ಹಿನ್ನೆಲೆಯ ಸಾಹಿತ್ಯವನ್ನು ಸೃಷ್ಟಿಸಿತು. ತಮ್ಮ ಹಿನ್ನೆಲೆಯ ಸಮಾಜದ ದಾಖಲಾಗದ ವಿಚಾರಗಳನ್ನು ಹುಡುಕತೊಡಗಿದರು. ಇದರ ಪರಿಣಾಮವಾಗಿ ಜನಾಂಗ ಅಧ್ಯಯನಗಳು, ಬುಡಕಟ್ಟು ಸಮಾಜಗಳ ಅಧ್ಯಯನ, ಜನಪದ ಆಕರಗಳ ಸಂಗ್ರಹ, ಗ್ರಾಮದೇವತೆಗಳ ಅಧ್ಯಯನ - ಹೀಗೆ ಹೊಸ ಕ್ಷೇತ್ರಗಳಲ್ಲಿ ಜನ ಕೆಲಸ ಮಾಡತೊಡಗಿದರು. ದೇಸೀ, ಸ್ಥಳೀಯ, ನೆಲದ ಸಂಸ್ಕೃತಿ, ಗ್ರಾಮೀಣ, ಕಡೆಗಣಿತ. ಹೀಗೆ ಹತ್ತು ಹಲವು ಹೆಸರುಗಳಲ್ಲಿ ವಿಚಾರಗಳು ದಾಖಲಾಗತೊಡಗಿದವು ಮತ್ತು ಪ್ರಕಟಗೊಂಡವು. ಚಳವಳಿಗಳಿಂದ ಸಿದ್ಧಾಂತ, ಸಿದ್ಧಾಂತ ಗಳಿಂದ ಚಳವಳಿ ಒಂದಕ್ಕೊಂದು ಹೆಣೆದುಕೊಂಡು ಮುಂದುವರೆಯುತ್ತಾ ಜ್ಞಾನಶಾಖೆಯ ವಿಸ್ತರಣೆಗೆ ಕಾರಣವಾಗಿದೆ. ಜಾತಿ, ಪ್ರಾದೇಶಿಕತೆ, ಬಡವ, ಶ್ರೀಮಂತರ ತಾರತಮ್ಯ ಚರಿತ್ರೆ ಯಲ್ಲಿ ಗುರುತಿಸಲ್ಪಟ್ಟಿತು. ಈ ಎಲ್ಲದರ ಹಿನ್ನೆಲೆಯಲ್ಲಿ ವಿಚಾರಗಳನ್ನು ಚರ್ಚಿಸುವ ಕ್ರಮ ಬೆಳೆದುಬಂದಿದೆ. ಆ ಚರ್ಚೆಗೆ ಆಕರಗಳೂ ಹೊಸದಾಗಬೇಕಾಯಿತು. ದಾಖಲೆಯಲ್ಲಿ ಇಲ್ಲದ, ಬರವಣಿಗೆಯ ರೂಪಕ್ಕೆ ಬಾರದ ವಿಚಾರದಲ್ಲಿ ಆಕರಗಳನ್ನು ಹುಡುಕುತ್ತಾ ಮೌಖಿಕ ಪರಂಪರೆಗೆ ಬಂದು ಸಲ್ಲಬೇಕಾಗಿದೆ. ಮೌಖಿಕ ಆಕರಗಳನ್ನು ಚರಿತ್ರೆಗೆ ತರುವ ಕಾರ್ಯಕ್ಕೆ ಪ್ರವೇಶ ಪಡೆಯುವಾಗ ಕೆಲವು ಸಿದ್ಧತೆಗಳ ಅಗತ್ಯವೂ ಇದೆ.

ಸ್ತ್ರೀವಾದ ಚಳವಳಿ ಹಾಗೂ ಮಹಿಳಾಪರ ಧೋರಣೆಗಳು ಮೇಲೆ ಚರ್ಚಿಸಿದ ವಿಚಾರಗಳಾಚೆಗೆ ಮತ್ತೊಂದು ದೃಷ್ಟಿಕೋನವನ್ನು ನೀಡಿತು. ಅದು ಮಹಿಳೆಯ ಹಿನ್ನೆಲೆಯಿಂದ ವಿಚಾರಗಳ ವಿಶ್ಲೇಷಣೆಗೆ ತೊಡಗಿಕೊಳ್ಳುವುದು. 'ಫೆಮಿನಿಸಂ' ಒಂದು ಚಳವಳಿಯಾಗಿ

ಆರಂಭಗೊಂಡಾಗ ಪುರುಷಪ್ರಧಾನ ವ್ಯವಸ್ಥೆಯ ವಿರೋಧ ಅದರ ಮುಖ್ಯ ಗುರಿಯಾಗಿತ್ತು. ಆರಂಭದ ಆವೇಶದಲ್ಲಿ ಪುರುಷ ದ್ವೇಷವನ್ನು ಅನುಭವಿಸಿದ ಮಹಿಳೆಯರಿದ್ದಾರೆ. ಸ್ತ್ರೀಪುರುಷರನ್ನು ಮುಖಾಮುಖಿಯಾಗಿಸಿ ಸಮಾನತೆಯನ್ನು ಸ್ಥಾಪಿಸುವ ಬರಹಗಳು, ಮಾತುಗಳು ನಿರಂತರವಾಗಿ ಕಾಣಬರುತ್ತದೆ. ಸ್ತ್ರೀವಾದ ಹೊರಳಿ ಜಂಡರ್‌ದ ಚರ್ಚೆ ಆರಂಭವಾದುದು ವಿಸ್ತರಿಸಿದ ಸಾಮಾಜಿಕ ಅಸಮತೋಲನಗಳನ್ನು ಗುರುತಿಸಲು ಸಾಧ್ಯವಾಯಿತು. ಸ್ತ್ರೀ ಪುರುಷರ ಸಮಾನತೆಯ ಹೋರಾಟಕ್ಕೂ ಸೌಹರ್ದ ನೆಲೆಗೂ ಅಂತರದ ಅರಿವಿನ ಪ್ರಯತ್ನ ನಡೆದಿದೆ. ಸ್ತ್ರೀವಾದಿ ವಿಮರ್ಶೆಯನ್ನು ಬಂದ ಬರಹಗಳನ್ನು ಮತ್ತೊಮ್ಮೆ ಲಿಂಗ ತಾರತಮ್ಯದ ನೆಲೆಯಲ್ಲಿ ಪುನರ್ ವಿಮರ್ಶೆಗೆ ಅವಕಾಶ ಮಾಡಿಕೊಟ್ಟಿದೆ.

ಚರಿತ್ರೆಯಲ್ಲಿ ಮಹಿಳೆಯನ್ನು ಹುಡುಕುವ ಯತ್ನ ಸ್ತ್ರೀವಾದಿ ಹೋರಾಟ ಕಲ್ಪಿಸಿತು. ಪಾಶ್ಚಿಮಾತ್ಯ ಚಿಂತನೆ ಭಾರತವನ್ನು ಹೊಕ್ಕು, ಅದು ಕನ್ನಡದ ಮಣ್ಣಿಗಿಳಿಯುವಾಗ ಮತ್ತೊಮ್ಮೆ ಕನ್ನಡದ ಸಾಮಾಜಿಕ ಪರಿಸ್ಥಿತಿಗೆ ಅನುಗುಣವಾಗಿ ಪ್ರವೇಶ ಪಡೆಯುತ್ತದೆ. ಚರಿತ್ರೆಯಲ್ಲಿ ಕಡೆಗಣಿತ ಸಮುದಾಯಗಳಲ್ಲಿ ಹೆಣ್ಣೂ ಒಬ್ಬಳು. ಹಾಗೆಯೇ ಅವಳ ಚರಿತ್ರೆಯನ್ನು ಕಟ್ಟಲು ಹೋದರೆ ಸಿಗುವ ಆಕರಗಳಲ್ಲೂ ಎಲ್ಲಾ ವರ್ಗವನ್ನು ಮುಟ್ಟಲಾರವು. ಆದ್ದರಿಂದ ಮಹಿಳಾ ಪ್ರಪಂಚದ ಚರಿತ್ರೆಗೆ ಸಿಗುವ ಮೌಖಿಕ ಆಕರಗಳನ್ನು ಬಳಸಲೇ ಬೇಕಾಗುತ್ತದೆ. ಈ ಪ್ರಬಂಧದಲ್ಲಿ ಚರಿತ್ರೆಯನ್ನು ಒಂದು ಶಿಸ್ತಾಗಿ ಜನಪದವನ್ನು ಆಕರವಾಗಿ ಜೆಂಡರ್(ಲಿಂಗ ತಾರತಮ್ಯ)ವನ್ನು ದೃಷ್ಟಿಕೋನವಾಗಿಟ್ಟು ನೋಡುವ ಪ್ರಯತ್ನ ಮಾಡಲಾಗಿದೆ.

II

**ವೈಧಾನಿಕತೆ**

ಸಂಶೋಧನೆಯಲ್ಲಿ 'ಮಾದರಿ'ಗಳನ್ನು ಕುರಿತು ಪ್ರಶ್ನಿಸಲಾಗುತ್ತದೆ. ಸಂಶೋಧನೆಗೆ ಒಂದು ಸಿದ್ಧ ಮಾದರಿ ಇರಲು ಸಾಧ್ಯವೇ ಎಂಬ ಪ್ರಶ್ನೆಯೊಂದಿಗೆ ಆರಂಭಿಸುವುದಾದರೆ; ಒಬ್ಬರು ವಿದ್ವಾಂಸರು ಕಂಡುಕೊಂಡ ಜಾಡಿನಲ್ಲಿ ಮುಂದುವರೆಯುವುದನ್ನೇ ಮಾದರಿಯೆಂದು ಕೊಳ್ಳಲಾಗುತ್ತಿದೆ. ಇರುವ ಮಾದರಿಯನ್ನು ಅಳವಡಿಸಿಕೊಂಡು ಮುಂದೆ ಹೋಗುವುದು ಸಂಶೋಧನೆಯ ಆರಂಭದ ದಿಸೆಯಲ್ಲಿ ಸಹಾಯವಾಗುತ್ತದೆ. ಇಲ್ಲದಿದ್ದರೆ ಇರುವ ಮಾದರಿಗೆ ನಮ್ಮ ಬಳಿಯಿರುವ ಸರಕನ್ನು ಸುರಿದು ತೆಗೆಯುವ ಅಚ್ಚು ಅದಾಗುತ್ತದೆ. ಬಳಸುವ ಉಪಕರಣಗಳು ಒಂದೇ ಆದರೂ ಬಳಸುವ ಕ್ರಮ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುತ್ತದೆ.

ಮಾನವಶಾಸ್ತ್ರೀ ಅಧ್ಯಯನದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ಪ್ರಶ್ನಾವಳಿಗಳನ್ನು ಸಿದ್ಧಪಡಿಸಿಕೊಳ್ಳಲಾಗುತ್ತದೆ. ಮಾಹಿತಿ ಸಂಗ್ರಹಣೆಗೆ ಅದು ಒಂದು ಮಾದರಿಯಾಗುತ್ತದೆ. ಪ್ರಶ್ನಾವಳಿಯ ಮಾದರಿ ಭಾರತದಂತಹ ದೇಶದಲ್ಲಿ ಅಷ್ಟೇನು ಪರಿಣಾಮಕಾರಿಯಾಗಲಾರದು. ಬಹುಸಂಸ್ಕೃತಿಯ ಭಾರತದಲ್ಲಿ ಸಮಗ್ರ ಸಮಾಜದ ಕಲ್ಪನೆ ಪಡೆಯಲು ಹೆಚ್ಚು ಮಂದಿಯಿಂದ ಉತ್ತರ ಪಡೆಯಬೇಕಾಗುತ್ತದೆ. ಕೊರತೆಯಿರುವ ಈ ದೇಶದಲ್ಲಿ ಪೇಪರ್‌ನಲ್ಲಿ ಕೊಟ್ಟ ಉತ್ತರದ ಮೇಲೆ ನಿರ್ಣಯಗಳಿಗೆ ಬರೆಯ ಮೊದಲು ಅದರ ಪರಿಮಿತಿಯನ್ನು

ಸ್ಪಷ್ಟಪಡಿಸಿಕೊಳ್ಳಬೇಕು. ಅದರಲ್ಲೂ ಸಾಮಾಜಿಕ ಬದ್ಧತೆಯ ಅಗತ್ಯವಿರುವ ಜಂಡರ್‌ನಂತಹ ವಿಚಾರಗಳನ್ನು ಒಂದು ಹಂತದವರೆಗೆ ಮಾತ್ರವೇ ಪ್ರಶ್ನಾವಳಿಯ ಮೂಲಕ ಅರಿಯಲು ಸಾಧ್ಯ. ಉದಾಹರಣೆಗೆ ವೈವಾಹಿಕ ಬದುಕಿನ ಬಗೆಗೆ ಮಾಹಿತಿ ಸಂಗ್ರಹಿಸಿದರೆ ಮದುವೆ ಆಗಿರುವ ವಿಷಯ, ಮಕ್ಕಳು, ವಯಸ್ಸು, ಇಂತಹ ಪ್ರಶ್ನೆಗಳಿಗೆ ಉತ್ತರ ದೊರೆಯಬಹುದು. ಆದರೆ ವೈವಾಹಿಕ ಬದುಕು ಸುಖವಾಗಿದೆಯೇ ಎಂಬ ಪ್ರಶ್ನೆಗೆ ಪ್ರಾಮಾಣಿಕ ಉತ್ತರ ಸಿಗಲಾರದು ಅಥವಾ ಅದಕ್ಕೆ ಒಂದು ಉತ್ತರ ಇಲ್ಲದಿರಬಹುದು. ಆದ್ದರಿಂದ ಸಾಮಾಜಿಕ ವಿಚಾರಗಳನ್ನು ಅಧ್ಯಯನ ಮಾಡಬಯಸುವ ಸಂಶೋಧಕರು ಸಮಾಜವನ್ನು ಹತ್ತಿರದಿಂದ ಗಮನಿಸ ಬೇಕಾಗುತ್ತದೆ. ಸಂಖ್ಯಾ ಮಾಹಿತಿಯೊಂದಿಗೆ ಅದರ ಜೈವಿಕ ಅಂಶಗಳನ್ನು ಪರಿಗಣಿಸಬೇಕಾ ಗುತ್ತದೆ.

ಪ್ರತಿ ಸಂಶೋಧನೆಯೂ ಸಂಶೋಧಕನನ್ನು ಕಾಡುವ ಪ್ರಶ್ನೆಯೊಂದಿಗೆ ಆರಂಭವಾಗುತ್ತದೆ. ಪ್ರತಿ ಪ್ರಶ್ನೆ ಸಂಶೋಧಕನ ಅನುಭವಕ್ಕೆ ದಕ್ಕಿದ ಪ್ರಶ್ನೆಯಾಗುತ್ತದೆ. ಪ್ರಶ್ನೆ ಸಂಕೀರ್ಣವಾಗ ಬೇಕೆಂದೇನೂ ಅರ್ಥವಲ್ಲ. ಜಗತ್ತಿನ ಅತಿ ದೊಡ್ಡ ಸಂಶೋಧನೆಯಾದ ಭೂಮಿಯ ಗುರುತ್ವಾಕರ್ಷಣ ಶಕ್ತಿಯನ್ನು ನ್ಯೂಟನ್ ಕಂಡು ಹಿಡಿದಾಗ ಅವನಲ್ಲಿ ಎದ್ದ ಪ್ರಶ್ನೆ 'ಸೇಬು ಮರದಿಂದ ಕೆಳಕ್ಕೆ ಏಕೆ ಬಿತ್ತು? ಬುದ್ಧ ದೊಡ್ಡ ದರ್ಶನವನ್ನು ಕೊಟ್ಟಾಗ ಅವನನ್ನು ಕಾಡಿದ್ದು "ಜನರ ದುಃಖಕ್ಕೆ ಕಾರಣ ಏನು?" ಇಷ್ಟೇ ಸರಳ ಪ್ರಶ್ನೆಗೆ ಉತ್ತರ ಹುಡುಕಿದವರು ಏಸು, ಮಾರ್ಕ್ಸ್‌ರಂತಹ ಮಹಾನ್ ದಾರ್ಶನಿಕರು. ಉದಾಹರಣೆಗಳು ಅಕಾಡೆಮಿಕ್ ಸಂಶೋಧನೆಯಿಂದ ಬಹುದೂರ ಹೋದಂತೆ ಕಾಣಬಹುದು. ಆದರೆ ಒಂದು ಪ್ರಶ್ನೆಗೆ ಕಂಡುಕೊಳ್ಳುವ ಉತ್ತರ ಮಾತ್ರ ವೈಯಕ್ತಿಕ ಬದ್ಧತೆಗೆ ತಕ್ಕದಾಗಿರುತ್ತದೆ. ಜಂಡರ್‌ನಂತಹ ವಿಷಯಗಳಲ್ಲಿ ತೊಡಗಿಕೊಳ್ಳುವವರಲ್ಲಿ ಸಾಮಾಜಿಕ ಕಳಕಳಿಯಿಂದ ದೂರವಾಗಿ ಕೇವಲ ವ್ಯಾಕರಣಕಾರರಾಗುವುದರಲ್ಲಿ ಅರ್ಥವಿಲ್ಲವೆಂದೇ ಭಾವಿಸುತ್ತೇನೆ.

'ಸತಿ' ಪದ್ಧತಿಯಂತಹ ವಿಷಯವನ್ನು ಕುರಿತು ಬರೆಯುವಾಗ 'ಸತಿ' ಪದ್ಧತಿಯ ಆಚರಣೆಗಳನ್ನು ದಾಖಲಿಸುವುದು ಮಾತ್ರವೇ ಆದರೆ ಅಂತಹ ಅಧ್ಯಯನ ವ್ಯರ್ಥವೆಂದೇ ಭಾವಿಸಬೇಕಾಗುತ್ತದೆ. ಅದು ಆ ಕಾಲದ ಒಂದು ಮೌಲ್ಯವೆಂದು ವೈಭವೀಕರಿಸುವುದಾದರೆ ಅದು ಮತ್ತು ಅಪಾಯಕಾರಿಯೇ ಆಗುತ್ತದೆ. "ಅಂದಿನ ಅವರ ತ್ಯಾಗ ಬಲಿದಾನಗಳನ್ನು ನಾವು ಗೌರವಿಸಲೇಬೇಕಾಗುತ್ತದೆಂಬ ಆನಂದ ಕುಮಾರ ಸ್ವಾಮಿಯವರ ಮಾತನ್ನು ಚಿದಾನಂದಮೂರ್ತಿಯವರು ಅನುಮೋದಿಸುತ್ತಾರೆ.

'ಸತಿ' ಪದ್ಧತಿಯ ಅಧ್ಯಯನದ ಅಗತ್ಯವಿರುವುದು ಜೀವ ವಿರೋಧಿಯಾದ ಪದ್ಧತಿ ಯೊಂದು ಭಾರತದಲ್ಲಿತ್ತೆಂದು ತಿಳಿಸುವುದಕ್ಕಾಗಿಯೇ ಹೊರತು ಜನಪ್ರಿಯವಾಗಿತ್ತೆಂದು ಸಾರುವುದಕ್ಕಾಗಿಯಲ್ಲ. ಆದ್ದರಿಂದ ಸಂಶೋಧನಾ ಮಾದರಿಗಳು ಸಾಮಾಜಿಕ ವಿಷಯಗಳಲ್ಲಿ ವಿಭಿನ್ನ ಅರ್ಥವನ್ನು ಪಡೆದುಕೊಳ್ಳುತ್ತವೆ. ಅದು ವಿಷಯವನ್ನು ಕುರಿತು ತೆಗೆದುಕೊಳ್ಳುವ ನಿಲುವಿಗೂ ಅನ್ವಯಿಸುತ್ತದೆ. ಹಾಗೆಂದು ಸಿದ್ಧ ಮಾದರಿಗಳನ್ನೆಲ್ಲಾ ಒಡೆದು ನೋಡ

ಬೇಕೆಂದೇನು ಅರ್ಥವಲ್ಲ. ಸಿದ್ಧ ಮಾದರಿಗಳು ಸಂಶೋಧನೆಯ ಪ್ರವೇಶಕ್ಕೆ ಅನುಕೂಲವಾಗಬಲ್ಲವು. ಆನಂತರ ಸಂಶೋಧಕನೇ ತನ್ನ ಮಾರ್ಗವನ್ನು ಕಂಡುಕೊಳ್ಳುತ್ತಾ ಹೋಗಬೇಕಾಗುತ್ತದೆ.

ಕ್ಷೇತ್ರಕಾರ್ಯ ಸಂಶೋಧನೆಯ ಅನಿವಾರ್ಯ ಭಾಗವಾಗಿ ಪರಿಗಣಿಸಲಾಗುತ್ತದೆ. ಹಳ್ಳಿಯೊಂದನ್ನು ಕ್ಷೇತ್ರಕಾರ್ಯಕ್ಕೆ ಆರಿಸಿಕೊಂಡಾಗ ಅಲ್ಲಿ ಮಾಡಬೇಕಾದ ಕೆಲಸಗಳನ್ನು ಸಂಶೋಧನಾ ಕ್ರಮವಾಗಿ ನೀಡಲಾಗುತ್ತದೆ. ಪ್ರದೇಶಕ್ಕೆ ನೀಡುವ ಭೇಟಿ, ಜನರ ಸಂದರ್ಶನ, ಇತ್ಯಾದಿ. ಇವೆಲ್ಲವೂ ಭೌತಿಕ ಅರ್ಥವನ್ನು ನೀಡಬಲ್ಲವು. ಅದೇ ಜನರ ಸಂಸ್ಕೃತಿಯ ಒಳತಿರುಳನ್ನು ಅರಿಯಬೇಕಾದರೆ ಸೂಕ್ಷ್ಮವಾಗಿ ಅವರ ಬದುಕನ್ನು ಗಮನಿಸಬೇಕಾಗುತ್ತದೆ. ಜನರ ಸಂದರ್ಶನ ಅದನ್ನು ದಾಖಲು ಮಾಡುವ ಕ್ರಮ, ಛಾಯಾಚಿತ್ರೀಕರಣ ಇತ್ಯಾದಿ ಎಲ್ಲವೂ ಪೂರಕ ಅಂಶಗಳಾಗುತ್ತವೆ. ಹಾಗೆಯೇ ಸಂಖ್ಯಾಶಾಸ್ತ್ರವನ್ನು ಬಳಸುವುದು ಸಂಶೋಧನಾ ಮಾದರಿಗಳಲ್ಲಿ ಮುಖ್ಯವಾದ ಒಂದು ವಿಧಾನ. ಸಂಖ್ಯಾಮಾಹಿತಿಯನ್ನು ಪಡೆಯುವಾಗ ಕೇವಲ ಪ್ರಕಟಿತ ಮಾಹಿತಿಯನ್ನು ಬಳಸಿಕೊಂಡರೆ ಸಂಗ್ರಹಿಸುವಾಗ ಮಾಡಿರಬಹುದಾದ ಎಲ್ಲಾ ದೋಷಗಳು ನಮ್ಮ ತೀರ್ಮಾನಗಳ ಒಳಗೂ ಸೇರಿ ಹೋಗುತ್ತವೆ. ಉದಾಹರಣೆಗೆ ಕನ್ನಡಿಗರು ಬೆಂಗಳೂರಿನ ಕಾರ್ಖಾನೆಗಳಲ್ಲಿ ಅದರಲ್ಲೂ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲೂ ಇರುವ ಪ್ರಮಾಣವನ್ನು ಅರಿಯುವ ಪ್ರಯತ್ನ ಮಾಡಿದಾಗ ದೊರೆತ ಮಾಹಿತಿ ೮೦ ಭಾಗ ಕನ್ನಡಿಗರೇ ಇದ್ದಾರೆ. ಇದು ಸ್ವತಃ ಕಂಪೆನಿಯ ದಾಖಲೆಗಳಿಂದ ಸಂಗ್ರಹಿಸಿದ ಮಾಹಿತಿ ವಾಸ್ತವದಲ್ಲಿ ಕೆಲವು ಕಂಪೆನಿಗಳಲ್ಲಿ ೨೦ ಭಾಗದಷ್ಟು ದುಡಿಮೆಗಾರರೂ ಕನ್ನಡಿಗರಿಲ್ಲ. ತಾಂತ್ರಿಕವಾಗಿ ನಮ್ಮ ಸಂಶೋಧನೆ ವೈಜ್ಞಾನಿಕವಾಗಿಯೇ ನಡೆದಿರುತ್ತದೆ. ಸಿಕ್ಕ ಸಂಖ್ಯಾ ಮಾಹಿತಿಯೊಂದಿಗೆ ಸುಂದರವಾದ ಗ್ರಾಫ್‌ಗಳನ್ನು ಹಾಕಿ ತೀರ್ಮಾನಗಳಿಗೆ ಬರಲಾಗುತ್ತದೆ. ಇದರಿಂದ ನಮ್ಮ ಸಂಶೋಧನೆಗೆ ಸಂಪೂರ್ಣವಾಗಿ ತಲಕೆಳಗಾಗುತ್ತದೆ. ಅಂಕಿಸಂಖ್ಯೆಗಳು ಸೃಷ್ಟಿಯಾದ ಉದ್ದೇಶವನ್ನು ಸ್ಪಷ್ಟಪಡಿಸಿಕೊಂಡರೆ ಬಹುಶಃ ಕೆಲಮಟ್ಟಿಗೆ ಸಮಸ್ಯೆ ಬಗೆಹರಿಯುತ್ತದೆ.

ಸಂಶೋಧನಾ ಮಾದರಿಗಳಿಂದಲೇ ಪಂಥಗಳು ಸೃಷ್ಟಿಯಾಗುವುದು ಕಂಡು ಬರುತ್ತದೆ. ರ್‍ಯಾಂಕೆ ಎಂಬ ಜನಾಂಗ ವಿದ್ವಾಂಸರು ಚರಿತ್ರೆಯ ಸಂಶೋಧನೆಗೆ ಬಿಗಿಯಾದ ಕ್ರಮಗಳನ್ನು ಅನುಸರಿಸತೊಡಗಿದರು. ಆಕರಗಳ ಅಧಿಕೃತತೆಯನ್ನು ಪ್ರಶ್ನಿಸುತ್ತಾ ಶಿಸ್ತಿನ ಚೌಕಟ್ಟನ್ನು ಹಾಕಿದರು. ಅದನ್ನು ಅನುಸರಿಸುವುದರಿಂದ ಸಂಶೋಧನೆಗಳನ್ನು ರ್‍ಯಾಂಕೆ ಮಾದರಿಯ ಸಂಶೋಧನೆ ಎಂದೇ ಗುರುತಿಸಿಕೊಂಡಿತು. ಹಾಗೆಯೇ ಅದು ಒಂದು ಪಂಥವು ಆಗಿ ಬೆಳೆಯಿತು. ವಿಚಾರಧಾರೆಗಳು, ದೃಷ್ಟಿಕೋನಗಳೂ ಸಂಶೋಧನಾ ಮಾದರಿಗಳಾಗುತ್ತವೆ. ಮಾರ್ಕ್ಸ್ ವಿಚಾರಧಾರೆ, ದೃಷ್ಟಿಕೋನವಾಗಿ ಸಂಶೋಧನಾ ಮಾದರಿಯಾಗಿ ಬೆಳೆಯುತ್ತಾ ಹೋಯಿತು. ಇಂದು ಜಂಡರ್‌ನ್ನು ದೃಷ್ಟಿಕೋನವಾಗಿ ಅಳವಡಿಸಿಕೊಂಡು ಸಂಶೋಧನೆಯನ್ನು ನಡೆಸುವುದು ಮತ್ತೊಂದು ಕ್ರಮವಾಗಿದೆ.

## ಮುರಿದು ಕಟ್ಟುವ ಮಾರ್ಗ

ಸ್ಥಾಪಿತ ಮಾದರಿಗಳನ್ನು ಮುರಿಯುವ ಮೂಲಕ ಹೊಸ ಮಾದರಿಗಳು ಹುಟ್ಟಿಕೊಂಡಿವೆ. ಈ ನಿಟ್ಟಿನಲ್ಲಿ ಬೆಳೆದ ಚಿಂತನೆ 'Deconstruction' ಎನಿಸಿಕೊಂಡಿತು. ಡೆರ್ರಿಡಾ ಈ ಪರಿಕಲ್ಪನೆಯೊಂದಿಗೆ ಹೊರಬಂದಾಗ ಆ ಪದವನ್ನು ಬಳಸುವುದೂ ಪಾಶ್ಚಾತ್ಯ ಬರವಣಿಗೆಗಳಲ್ಲಿ ಒಂದು ಫ್ಯಾಷನ್ ಆಯಿತು. ಪರಿಕಲ್ಪನೆ ಮಾತ್ರವಾಗದೆ ಅದು ಒಂದು ದರ್ಶನದ ಮಟ್ಟಕ್ಕೆ ಬೆಳೆದಾಗ ಅದನ್ನೊಂದು ಸಂಶೋಧನಾ ಮಾದರಿಯಾಗಿ ಮಾತ್ರ ಭಾವಿಸಿದ ಅಥವಾ ಪದವನ್ನು ಎಲ್ಲೆಂದರಲ್ಲಿ ಬಳಸುವವರೆಗೆ ಹೋದದ್ದನ್ನು ಕಾಣುತ್ತೇವೆ. ಇಲ್ಲಿ ಸಂಶೋಧನೆಯ ಹೆಸರಿನಲ್ಲಿ ಬರುವ ಕಾಟಾಚಾರದ ಕೃತಿಗಳನ್ನು ಬಿಟ್ಟು ವೈಧಾನಿಕತೆಯ ಬಗೆಗೆ ಮುಂದುವರೆಯುವುದು ಸೂಕ್ತ.

ಈ ಸಂದರ್ಭದಲ್ಲಿ ಹೇಳಬೇಕಾಗಿರುವ ವಿಷಯ ಇರುವ ವಾದವನ್ನು ಮುರಿಯುವುದು ಸಹ ಒಂದು ಹೊಸ ವಿಧಾನಕ್ಕೆ ಅವಕಾಶ ಕಲ್ಪಿಸುತ್ತದೆ. ವಾದಕ್ಕೆ ಬರುವ ಪ್ರತಿವಾದಗಳು ಕೆಲವು ಕಾಲ ಮಾದರಿಗಳಾಗಿ ನಿಲ್ಲುತ್ತವೆ. ಪ್ರತಿವಾದಗಳು ಸ್ಥಾಪಿತ ಮಾದರಿಗಳಾದಾಗ ಅಲ್ಲಿ ಮತ್ತೊಂದು ವಾದದ ಹುಟ್ಟಿಗೆ ಕಾರಣವಾಗುತ್ತದೆ. ಹೀಗೆ ಚಿಂತನೆಗಳು ಈವರೆಗೆ ಬೆಳೆಯುತ್ತಾ ಬಂದಿವೆ. ಬುದ್ಧ ಅಥವಾ ಶೂನ್ಯವಾದದ ಚಿಂತನೆಗಳು ಕ್ರಿ.ಪೂ. ೬ನೆಯ ಶತಮಾನದಲ್ಲಿ ಬೆಳೆದಾಗ ಅಸ್ತಿತ್ವದಲ್ಲಿದ್ದ ವೈದಿಕ ಚಿಂತನೆಗೆ ಪ್ರತಿವಾದವಾಗಿತ್ತು. ಕರ್ನಾಟಕದಲ್ಲಿ ನವ್ಯ ಸಾಹಿತ್ಯ ಬೆಳೆದಾಗ ನವೋದಯಕ್ಕೆ ಪ್ರತಿವಾದವಾಗಿತ್ತು.

ಸಾಹಿತ್ಯ ವ್ಯಕ್ತಿಯ ಅನುಭವದ ಅಭಿವ್ಯಕ್ತಿಯೆಂದು ಭಾವಿಸುವುದಾದರೆ, ಆ ಅಭಿವ್ಯಕ್ತಿಗೆ ಕಾವ್ಯ ಒಂದು ಮಾಧ್ಯಮವಾಗಿತ್ತು. ಹಾಗೆಯೇ ಕಾದಂಬರಿ, ಪ್ರಬಂಧ ಮುಂತಾದ ಪ್ರಕಾರಗಳು ಬೆಳೆದು ಬಂದಾಗ ಅವೆಲ್ಲವೂ ಮಾದರಿಗಳಾದವು. ವಚನ ಸಾಹಿತ್ಯ ರಚನೆ ೧೨ನೆಯ ಶತಮಾನದಲ್ಲಿ ಬರಹದ ಪ್ರಕಾರವಾದಾಗ ನೂರಾರು ಜನ ಅದನ್ನು ಮಾದರಿಯಾಗಿಟ್ಟುಕೊಂಡು ಬರಹದಲ್ಲಿ ತೊಡಗಿದರು. ಮುಂದೆ ಕಾದಂಬರಿ ಪ್ರಕಾರವನ್ನು ಕಂಡುಕೊಂಡಾಗ ಬಹಳಷ್ಟು ಸಾಹಿತಿಗಳಿಗೆ ಅದು ಬರವಣಿಗೆಯ ಮಾದರಿಯಾಯಿತು. ಅದರಲ್ಲೂ ಸೃಜನಶೀಲರಾದವರು ಹೊಸ ಪ್ರಕಾರಗಳನ್ನು ಹುಡುಕಿಕೊಂಡಿದ್ದಾರೆ. ಹಾಗೆಯೇ ಸಂಶೋಧನಾ ವಿಧಾನವೂ ಸಂಶೋಧನೆಗೆ ಎತ್ತಿಕೊಂಡ ವಿಷಯಕ್ಕೆ ತಕ್ಕುದಾಗಿರುತ್ತದೆ.

ಇಲ್ಲಿ ಸಂಶೋಧನಾ ವಿಧಾನವನ್ನು ನೇರವಾಗಿ ಚರ್ಚಿಸದೆ ವಾದಗಳು, ದರ್ಶನಗಳು, ಸಾಹಿತ್ಯ ಪ್ರಕಾರಗಳು, ಸಿದ್ಧಾಂತಗಳ ಕಡೆಗೆ ಹೊರಳಲು ಕಾರಣವೆಂದರೆ ಸಂಶೋಧನೆಗೆ ಸೃಜನಶೀಲವಾದದ್ದು ಎಂಬುದನ್ನು ಸ್ಪಷ್ಟಪಡಿಸಬೇಕಾಗಿತ್ತು. ಹೇಗೆ ಸಾಹಿತ್ಯ ಕೃತಿಯೊಂದನ್ನು ಸೃಜನಶೀಲ ಬರವಣಿಗೆ ಎಂದು ಭಾವಿಸುತ್ತೇವೆಯೋ ಹಾಗೆ ಸಂಶೋಧನೆಯೂ ಹೊಸ ವಿಚಾರವೊಂದರ ಸೃಷ್ಟಿಯಾಗಿರುತ್ತದೆ.

ಮಹಿಳಾ ಅಧ್ಯಯನದ ವೇದಿಕೆಯಲ್ಲಿ ಡಿಕನ್‌ಸ್ಟ್ರಕ್ಷನ್ ಬಗ್ಗೆ ಪ್ರಸ್ತಾಪಿಸದೇ ಇರಲಾಗುವುದಿಲ್ಲ. ಏಕೆಂದರೆ ಸ್ತ್ರೀವಾದ ರಾಜಕೀಯ ಹೋರಾಟದಿಂದ ಸಾಹಿತ್ಯ ಹಾಗೂ ಸಾಮಾಜಿಕ

ಅಧ್ಯಯನಗಳ ದೃಷ್ಟಿಕೋನವಾಗಿಯೂ ಬೆಳೆದಾಗ ಅದು ಅಸ್ತಿತ್ವದಲ್ಲಿದ್ದ ಸಾಂಪ್ರದಾಯಿಕ ಧೋರಣೆಯನ್ನು ಮುರಿದು ಕಟ್ಟಲು ಹೊರಟಿತ್ತು. ಸ್ತ್ರೀವಾದಕ್ಕೆ ಡಿಕನ್‌ಸ್ಟ್ರಕ್ಷನ್ ಪೂರಕ ದೃಷ್ಟಿಕೋನವಾಯಿತು. ಸ್ತ್ರೀವಾದ ಅಬ್ಬರಿ ೧೯೮೦ರ ದಶಕದಲ್ಲಿ ಪುರುಷಪ್ರಧಾನ ವ್ಯವಸ್ಥೆ ಯನ್ನು ಮುರಿಯುವುದಾಗಿತ್ತು. ಅದನ್ನು ಇನ್ನೂ ಒರಟಾಗಿ "ಪುರುಷತ್ವ"ವನ್ನು ಒಡೆಯು ವುದಾಗಿತ್ತೆಂದು ಡೆರ್ರಿಡಾ ಹೇಳುತ್ತಾನೆ.

Feminism : it is the operation through which a women desires to be like a man, like a dogmatic philosopher, demanding truth, science, objectivity; that is to say, with all maserline illusions, with the effiect of castration which is attached to them. Feminism desires castration - also that of woman. Lost the style.

ಸ್ತ್ರೀವಾದವೆಂದರೆ ಡಿಕನ್‌ಸ್ಟ್ರಕ್ಷನ್ ಎನ್ನುವಂತಾದಾಗ ತನ್ನ ಸಿದ್ಧಾಂತವನ್ನು ಮತ್ತೊಮ್ಮೆ ಸ್ಪಷ್ಟಪಡಿಸುವ ಪ್ರಯತ್ನವನ್ನು ಡೆರ್ರಿಡಾ ಮಾಡಬೇಕಾಗುತ್ತದೆ.

So I would say that deconstrution is a deconstruction of feminism, from the start, in so far as feminism is a form no doubt a necessary form at a cortain moment but a form of phallogo centrism among many Others.

ಡಿಕನ್‌ಸ್ಟ್ರಕ್ಷನ್ ಎಂದರೆ ಸ್ತ್ರೀವಾದದ ಡಿಕನ್‌ಸ್ಟ್ರಕ್ಷನ್, ಆರಂಭದಲ್ಲಿ ಅದು ಒಂದು ಪ್ರಕಾರ - ಒಂದು ಹಂತದವರೆಗೆ ಅಗತ್ಯವಾಗಿದ್ದ ಪ್ರಕಾರ - ಆದರೆ ಉಳಿದ ಪ್ರಕಾರಗಳಲ್ಲಿ ಇದು ಪುರುಷಕೇಂದ್ರಿತವಾದುದು. ಈ ಮೇಲಿನ ಹೇಳಿಕೆಯಲ್ಲಿ ಎರಡು ಅಂಶ ಮುಖ್ಯ ವಾಗುತ್ತದೆ.

೧. ಸ್ತ್ರೀವಾದದ ಡಿಕನ್‌ಸ್ಟ್ರಕ್ಷನ್‌ನನ್ನು ಬಯಸುವ ಹಂತಕ್ಕೆ ೧೯೮೫ಕ್ಕೆ ಹೋಗುತ್ತಾನೆ ಹಾಗೂ ಸ್ತ್ರೀವಾದವನ್ನು ಪುರುಷಕೇಂದ್ರಿತವೆಂದು ಹೇಳುವುದು.

೨. ಸ್ತ್ರೀವಾದದ ಹಿನ್ನೆಲೆಯಲ್ಲಿ ರಾಜಕೀಯ ಶಕ್ತಿಯಿತ್ತು. ಆದರೆ ಡಿಕನ್‌ಸ್ಟ್ರಕ್ಷನ್ ಅಕಾಡೆಮಿಕ್ ಆಗಿ ಬೆಳೆದ ವಾದವಾಗಿತ್ತು. ಈ ಎಲ್ಲದರ ಪರಿಣಾಮವಾಗಿ ಸಾಮಾಜಿಕವಾಗಿ ಮಹಿಳೆಯ ಸ್ಥಾನ ಭಿನ್ನವಾಗುತ್ತಾ ನಡೆದುದರಲ್ಲಿ ಯಾವ ಅನುಮಾನವೂ ಇಲ್ಲ. ಸಂಶೋಧನಾ ವಿಧಾನಕ್ಕೆ ಬಂದಾಗ ಸ್ತ್ರೀವಾದವೇ ಒಂದು ದೃಷ್ಟಿಕೋನವಾಗಿ ಬೆಳೆಯಿತು. ಅದು ಸಾಹಿತ್ಯ ಹಾಗೂ ಸಾಹಿತ್ಯ ವಿಮರ್ಶೆಗಳಲ್ಲಿ ಕಾಣಿಸಿಕೊಂಡಿತು. ಸ್ತ್ರೀವಾದದ ಒಳಗೆ ಡಿಕನ್‌ಸ್ಟ್ರಕ್ಷನ್ ಸಹ ಒಂದು ನೋಟ ಅಥವಾ ಸಾಧನವಾಗಿ ಬಳಕೆಯಾಯಿತು. ಸ್ತ್ರೀವಾದದಿಂದ ಮಹಿಳಾ ಅಧ್ಯಯನವಾದಾಗ ನೋಟದಲ್ಲಿ ಪ್ರತಿವಾದದ ಧೋರಣೆಗಿಂತ ಭಿನ್ನವಾಗಬೇಕಾಯಿತು. ಮಹಿಳಾ ಅಧ್ಯಯನವೂ ಜಂಡರ್ ವಿಶ್ಲೇಷಣೆಗೆ ತೊಡಗಿಕೊಳ್ಳುವಾಗ ಕೇವಲ ಮಹಿಳೆಯ ಜವಾಬ್ದಾರಿಯನ್ನು ಹೊರದೆ ಸಾಮಾಜಿಕ ಜವಾಬ್ದಾರಿಯ ಕಡೆಗೆ ಹೊರಳುತ್ತಿರುವುದು ಕಾಣುತ್ತದೆ. ಸೆಕ್ಸ್ ಮತ್ತು ಜಂಡರ್‌ನ ಅಂತರವನ್ನು ಕಂಡುಕೊಳ್ಳುವ ಪ್ರಯತ್ನ ಇಂದಿನ

ಸಂಶೋಧನೆಗಳಲ್ಲಿ ಕಾಣಬರುತ್ತಿದೆ. ಇನ್ನು ಜನಪದ ಆಕರಗಳನ್ನು ಚರಿತ್ರೆಯ ಬರವಣಿಗೆಗೆ ಆಕರಗಳಾಗಿ ಬಳಸಲು ಮಾರ್ಗಗಳನ್ನು ಕಂಡುಕೊಳ್ಳುತ್ತಾ ಹೋಗಬೇಕಾಗಿದೆ. ಹತ್ತು ಹಲವು ಉದ್ದೇಶಗಳಿಂದ ಜನಪದ ಸಾಹಿತ್ಯವನ್ನು ಚರ್ಚೆಗೆ ಒಳಪಡಿಸಬಹುದು. ಈ ಲೇಖನದ ಉದ್ದೇಶ ಜನಪದ ಆಕರಗಳನ್ನು ಲಿಂಗ ವಿವಕ್ಷೆಗೆ ಒಳಪಡಿಸುವುದು ಹೇಗೆ, ಯಾವ ಆಕರವು ತನಗೆ ತಾನೆ ಮಾಹಿತಿಯನ್ನು ತೆರೆದಿಡುವುದಿಲ್ಲ. ಆಕರಗಳ ಪರವಾಗಿ ಸಂಶೋಧಕ ಮಾತನಾಡುತ್ತಾನೆ. ಒಂದು ಆಕರವನ್ನು ಹತ್ತು ಮಗ್ಗಲುಗಳಿಂದ ನೋಡಬಹುದು. ಸಂಶೋಧಕ ಯಾವ ಮಗ್ಗುಲಿಗೆ ನಿಲ್ಲುತ್ತಾನೆಂಬುದು ಅವನ ನೆಲೆಯಾಗುತ್ತದೆ. ಸಂಶೋಧನೆಯಲ್ಲಿ ಜಂಡರ್ ಒಂದು ದೃಷ್ಟಿಕೋನವಾಗಿ ಸಾಧನವಾಗಿ ಕೆಲಸ ಮಾಡುತ್ತದೆಂದು ಈ ಹಿಂದೆ ನೋಡಿದ್ದೇವೆ. ಅದನ್ನು ಪ್ರಾಯೋಗಿಕವಾಗಿ ಉದಾಹರಿಸುವುದಾದರೆ....

**ಪ್ರಾಯೋಗಿಕ**

ಕೆರೆಗೆ ಹಾರ ಕನ್ನಡ ನಾಡಿನ ಸುಪರಿಚಿತ ಜನಪದ ಕಥನ ಕವನ ಕಥಾ ಪ್ರಸಂಗ ಹಲವು ವಿದ್ವಾಂಸರ ಓದಿಗೆ ಒಳಗಾಗಿದೆ. ತೀ.ನಂ.ಶ್ರೀ ಅವರಿಂದ ಆರಂಭಗೊಂಡು ಅದರ ಅಧ್ಯಯನ ಇನ್ನೂ ಮುಂದುವರಿದಿದೆ. ಆರಂಭದ ವಿದ್ವಾಂಸರು ಅದನ್ನೊಂದು 'ಕಾಲದ ಮೌಲ್ಯ'ವಾಗಿ ನೋಡುತ್ತಾ ಬಂದರು. ಅದರ ಭಾವನೆಗಳಿಗೆ ಗೌರವ ಸಲ್ಲಿಸುತ್ತಾ ಆ ಮೂಲಕ ಅವಳ ಬಲಿದಾನಕ್ಕೆ ಮಿಡಿಯುತ್ತಾರೆ. ಎರಡನೇ ಹಂತದಲ್ಲಿ ವರ್ಗದ ಹಿನ್ನೆಲೆ, ಪುರೋಹಿತಶಾಹಿ, ಜೋತಿಷ್ಯದಲ್ಲಿ ತಪ್ಪನ್ನು ಹೊರಿಸುತ್ತಾ ಮತ್ತೊಂದು ಮಗ್ಗುಲಿನಿಂದ ನೋಡುವ ಪ್ರಯತ್ನ ಮಾಡುತ್ತಾರೆ. ಮೂರನೇ ಹಂತದಲ್ಲಿ ಸ್ತ್ರೀವಾದಿ ನೆಲೆಯಿಂದ ವಿಮರ್ಶಿಸುತ್ತಾ ಪುರುಷ ಪ್ರಧಾನ ವ್ಯವಸ್ಥೆಯ ಒಳಗಿನ ಕ್ರೌರ್ಯವನ್ನು ಗಾಯತ್ರಿ ನಾವಡ ಅವರು ಕಂಡುಕೊಳ್ಳುತ್ತಾರೆ. ಈ ಅಧ್ಯಯನಗಳಲ್ಲಿ ಚಾರಿತ್ರಿಕ ಪ್ರಶ್ನೆಗಳು ವ್ಯಕ್ತವಾಗುವುದಿಲ್ಲ. ಅಂತಹ ಪ್ರಯತ್ನ ಭಾನುಮತಿಯವರ ಬೇಲೂರು ಬಿಷ್ಟಮ್ಮನ ಕೆರೆಯ ಸಂಶೋಧನೆಯಲ್ಲಿ ಕಾಣಬರುತ್ತದೆ. ಜನಪದ ಗೀತೆಗೆ ಪೂರಕವಾಗಿ ಇತರ ಆಕರಗಳನ್ನು ಬಳಸಿಕೊಂಡು ಚಾರಿತ್ರಿಕ ಅಧ್ಯಯನ ಕಂಡು ಬರುತ್ತದೆ. ಈ ಕಥನ ಕವನದಲ್ಲಿ ಜನಪದ ಆಶಯವೆಲ್ಲಿಗೆ ನಿಲ್ಲುತ್ತದೆ, ಅದನ್ನು ಶಾಸನವಾಗಿಸುವಾಗ ಆಳುವ ವರ್ಗದ ಪಾತ್ರವೇನೆಂಬುದನ್ನು ಅವರು ಸ್ಪಷ್ಟಪಡಿಸುತ್ತಾರೆ.

'ಕೆರೆಗೆ ಹಾರ' ಈ ಜನಪದ ಆಕರವನ್ನು ಚರಿತ್ರೆ ಬರವಣಿಗೆಗೆ ಆಕರವಾಗಿ ನೋಡುವಾಗ ಹಲವು ಪ್ರಶ್ನೆಗಳು ಏಳುತ್ತವೆ. ಕಾಲ ನಿರ್ಧಾರ ಮೊದಲ ಸವಾಲಾಗಿ ಏಳುತ್ತದೆ. ಕೆರೆಗೆ ಹಾರ-ಕೆರೆಯನ್ನು ಕಟ್ಟಿಸುವಾಗ, ಅದರ ಏರಿ ನಿಲ್ಲದೆ ಅಥವಾ ನೀರು ಬಾರದಿದ್ದಾಗ ಕಟ್ಟಿಸಿದ ಗೌಡ ತನ್ನ ಸೊಸೆಯನು ಕೆರೆಗೆ ಬಲಿಯಾಗಿ ನೀಡಿದು ಇವೆಲ್ಲದರ ಸಾರಾಂಶ. ಬಿಷ್ಟಮ್ಮನ ಕೆರೆಯ ಹಿನ್ನೆಲೆಯಲ್ಲಿ ಸಿಗುವ ವಿಷ್ಣುವರ್ಧನನ ಶಾಸನ ಇವುಗಳಿಂದಾಗಿ ಅಲ್ಲಿಯ ಘಟನೆಯನ್ನು ಹನ್ನೆರಡನೆಯ ಶತಮಾನಕ್ಕೆ ಅಥವಾ ಅನಂತರವೆಂದು ನಿರ್ಧರಿಸಿ ಕೊಳ್ಳಬಹುದು. ಬಹುತೇಕ ಕನ್ನಡ ನಾಡಿನಾದ್ಯಂತ ಇಂತಹ ಕಥೆಗಳು ಪ್ರಚಲಿತವಾಗಿವೆ. ಬೇಲೂರ ಕೆರೆ, ಮದಗದ ಕೆರೆ, ಕಿಕ್ಕೇರಿಕೆರೆ, ಸೂಳೆಕೆರೆ, ಹುಳಿಯಾರದ ಕೆರೆ - ಹೀಗೆ ಇದರ ಪಟ್ಟಿ ಬೆಳೆಯುತ್ತಾ

ಹೋಗುತ್ತದೆ. ಅವರೆ ಹೆಣ್ಣನ್ನು ಬಲಿಯಾಗಿಸುವ ರೂಢಿ ಕೆರೆಗೆ ಮಾತ್ರವಲ್ಲದೆ ಕೋಟೆಗೂ ಇತ್ತೆಂಬುದು ಬೆಂಗಳೂರು ಕೆಂಪೇಗೌಡನ ಸೊಸೆಯನ್ನು ಬಲಿಕೊಟ್ಟ ಕಥೆ ಮತ್ತು ಅವಳಿಗಾಗಿ ಕಟ್ಟಿದ ದೇವಸ್ಥಾನ ಸಾಕ್ಷಿಯಾಗಿದೆ.

ಕೆರೆಯನ್ನು ಕಟ್ಟಿಸುವ ಮೂಲಕ ಸಮಾಜ ಸೇವೆ ಮಾಡುವ ಸಂಸ್ಕೃತಿ ಹನ್ನೆರಡನೆಯ ಶತಮಾನದ ನಂತರ ವಿಶೇಷವಾಗಿ ಬೆಳೆದು ಬಂದಿದೆ. "ಕೆರೆಯಂ ಕಟ್ಟಿಸು, ಬಾವಿಯಂ ಸವೆಸು' ಎಂಬ ಶಾಸನದ ಉಲ್ಲೇಖ ಇದಕ್ಕೆ ಸಮರ್ಥನೆಯನ್ನು ನೀಡುತ್ತದೆ. ಕೆರೆಯನ್ನು ಕಟ್ಟಿಸುವ ಹಿನ್ನೆಲೆಯಲ್ಲಿ ಕೃಷಿ ವಿಸ್ತರಣೆ, ಹಳ್ಳಿಗಳ ವಿಸ್ತರಣೆಯ ಪ್ರಕ್ರಿಯೆ ಕಂಡು ಬರುತ್ತದೆ. ಈ ಎಲ್ಲಾ ಹಾಡುಗಳಲ್ಲಿ ಮಾವನ ಹೆಸರು ಮಲ್ಲನಗೌಡ, ಕಲ್ಲನಗೌಡ ಎಂಬಿತ್ಯಾದಿಯಾಗಿ ಇದ್ದರೂ 'ಗೌಡ' ಇಲ್ಲಿನ ಜಾತಿ ಸೂಚಕ ಪದವಾಗಿರದೆ ಹಳ್ಳಿಯ ಮುಖಂಡ ಅಥವಾ ಕೃಷಿ ಹಿನ್ನೆಲೆಯ ಸಮಾಜವನ್ನು ಸೂಚಿಸುತ್ತದೆ. ಏಕೆಂದರೆ ಗೌಡ ಪದ ಹಲವು ಜಾತಿಗಳಿಗೆ ಪ್ರಯೋಗವಾಗುತ್ತದೆ. ಕೆರೆಗೆ ಬಲಿ ಕೊಡುವ ಈ ಸಮಾಜ ಗ್ರಾಮೀಣ, ಕೃಷಿ ಹಿನ್ನೆಲೆಯ ಅದರಲ್ಲೂ ಕೆರೆ ಕಟ್ಟಿಸುವಷ್ಟು ಸಾಮರ್ಥ್ಯ ಹೊಂದಿರುವ ಸಮಾಜವಾಗಿದೆ. ಗೊತ್ತಿಲ್ಲದ, ಎಲ್ಲಿಂದಲೋ ಅಪಹರಿಸಿದ ಅಥವಾ ಮನೆಯ ಆಳಿನ, ನಿಷ್ಠಾವಂತ ಸೇವಕರ ಬಲಿ ನೀಡದೆ ತಮ್ಮದೇ ಮನೆಯಿಂದ ಬಲಿ ಕೊಡುವುದನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ಆಳುವ ವರ್ಗದಲ್ಲಿ ಜೀತ ನಿಷ್ಠಾವಂತ ಬಾಬರನ್ನು ಬಲಿಕೊಡುವ ಉಲ್ಲೇಖಗಳು ಸಿಗುತ್ತವೆ. ಅದರಲ್ಲೂ ಹೊಯ್ಸಳರ ಕಾಲಕ್ಕೆ ಲೆಂಕವ್ಯಾಳಿ, ಜೋಳ ವ್ಯಾಳಿ ಪ್ರಬಲ ಪದ್ಧತಿಯಾಗಿತ್ತು. ರಾಜ ಸತ್ತಾಗ ಆತನಿಗಾಗಿ ಸಾಯುವ - ಗರುಡರ ಪಡೆಯೇ ನಮಗೆ ದೊರೆಯುತ್ತದೆ. ಕೆರೆಗೆ ಹಾರದ ಬಲಿ ಅಸಹಾಯಕ ವರ್ಗದ ಬಲಿಯಾಗಿರದೆ ಸಮಾಜ ಸೇವೆಯ ಹಿನ್ನೆಲೆಯಲ್ಲಿ ಪ್ರತಿಷ್ಠೆಯೂ ಅಡಗಿದೆ. ಅಂದರೆ ಶೋಷಣೆಗೆ ಒಳಗಾಗದ ಸಮುದಾಯವಾಗದೆ ಕೆರೆಕಟ್ಟಿಸುವ ಶಕ್ತಿಯನ್ನು ಹೊಂದಿದ್ದಾರೆ. ಏರಿ ನಿಲ್ಲದಿದ್ದಾಗ ಕೋಳಿ, ಕುರಿ ಮುಂತಾದ ಪ್ರಾಣಿಬಲಿಯನ್ನು ಸೂಚಿಸದೆ ನರಬಲಿಯನ್ನು ಕೇಳಹೊರಟಿದ್ದು ಏಕೆಂಬ ಪ್ರಶ್ನೆಗೆ ಮಾನವಶಾಸ್ತ್ರೀಯ ಅಧ್ಯಯನದ ಮೊರೆಹೋಗಬೇಕಾಗುತ್ತದೆ. ನರಬಲಿಯ ಹಿಂದೆ ಹುಟ್ಟಿಕೊಳ್ಳುವ ಬಲವಾದ ನಂಬಿಕೆಯ ಬೇರುಗಳು ಆಳವಲ್ಲಿರುತ್ತವೆ. ಅದು ಒಬ್ಬ ವ್ಯಕ್ತಿಯಲ್ಲಿ ಬಂದು ಹೋಗುವ ವಿಚಾರವಾಗದೆ ಸಮುದಾಯ, ಸಮೂಹ ಪೂರಕವಾಗಿ, ಪ್ರೇರಕವಾಗಿ ನಡೆದುಕೊಳ್ಳುತ್ತದೆ. ಇಲ್ಲವೆ ಒಬ್ಬ ವ್ಯಕ್ತಿಯಲ್ಲಿ ಬಂದ ವಿಚಾರವನ್ನು ಸಮೂಹದ ಅಭಿಪ್ರಾಯವಾಗಿ ಬೆಳೆಸುತ್ತಾ ಹೋಗುತ್ತಾನೆ. ಅದರ ಸಮರ್ಥನೆಗೆ, ಜ್ಯೋತಿಷ್ಯ, ಶಾಸ್ತ್ರ, ಪುರಾಣ, ಕನಸುಗಳು ನೆರವಾಗುತ್ತವೆ.

ಇಷ್ಟಲ್ಲದೆ ಹೆಣ್ಣಿನ ಬಲಿಯನ್ನು ಈ ವ್ಯವಸ್ಥೆ ಒಪ್ಪಿಕೊಳ್ಳುವಾಗ ಅದರಲ್ಲಿ ಪುರುಷ ಪ್ರಧಾನ ಧ್ವನಿ ಕೆಲಸ ಮಾಡಿದೆ ಎಂಬ ತೀರ್ಮಾನಕ್ಕೆ ಬರಬಹುದೇ 'ಸತಿ' ಪದ್ಧತಿಯಲ್ಲಿ ಕೊಟ್ಟ ಬಲಿದಾನಕ್ಕೂ ಕೆರೆಗೆ ಹಾರ ಹಿನ್ನೆಲೆಗೂ ಸಾಕಷ್ಟು ವ್ಯತ್ಯಾಸವಿದೆ. ಸತಿಪದ್ಧತಿಯಲ್ಲಿ ವಿವಾಹದ ಸುತ್ತಲ ಹಿಡುಗಾದರೆ ಇಲ್ಲಿನ ಬಲಿದಾನದ ಒಳಧ್ವನಿ ಏನು ಎಂಬುದನ್ನು

ತಿಳಿಯಬೇಕಾಗುತ್ತದೆ. ಹೆಣ್ಣಿನ ಬಲಿದಾನವನ್ನು ಒಪ್ಪಿದ ಮೇಲೆ ಅಷ್ಟೇ ಆಗದೆ ಅದರಲ್ಲಿನ ಆಯ್ಕೆ ಅಬಲೆಯಾದ ಸೊಸೆಯಾಗಿದ್ದಾಳೆ. ಇತರ ಸಂದರ್ಭಗಳಲ್ಲೂ ಹೆಣ್ಣಿನ ಬಲಿ ಅವಳು ಕನ್ಯೆಯಾಗಿರುತ್ತಾಳೆ ಇಲ್ಲವೆ ಎಳೆಯ ವಯಸ್ಸಿನ ವಿವಾಹಿತ ಹೆಣ್ಣೇ ಆಗಿರುತ್ತಾಳೆ. ಕನ್ಯೆಯನ್ನು ಬಲಿಕೊಟ್ಟ, ತುಮಕೂರು ಜಿಲ್ಲೆಯ ಕನ್ನೇರಮ್ಮ (ಕನ್ಯೆ ಈರಮ್ಮ) ಹಾಸನ ಜಿಲ್ಲೆಯ ಕ್ಯಾಲಮ್ಮ (ಕನ್ಯೆ ಅಮ್ಮ) ಮುಂತಾದ ಉದಾಹರಣೆಗಳು ದೊರೆಯುತ್ತವೆ. ಇಲ್ಲಿ ಫಲವತ್ತತೆಯ ನಿರೀಕ್ಷೆಗಳು ಅಥವಾ ಸಂಕೇತಗಳನ್ನು ಗುರುತಿಸಬಹುದು. ಅವಳ ಹೆಣ್ತನ ಅವಳ ಬದುಕಿನ ಸೂಕ್ಷ್ಮತೆಯೂ ಆಗಿದೆ. ದೈಹಿಕವಾಗಿ ಹೆಚ್ಚು ಸಮರ್ಥಳಾಗಿದ್ದರೂ (ವಯಸ್ಸಿನಲ್ಲಿ) ಕೌಟುಂಬಿಕ ಹಾಗೂ ಸಾಮಾಜಿಕ ಚೌಕಟ್ಟಿನಲ್ಲಿ ಅಬಲೆಯಾಗುತ್ತಾಳೆ.

ಸ್ತ್ರೀವಾದಿ ನೆಲೆಯಲ್ಲಿ 'ಪುರುಷ ಪ್ರಧಾನ' ವ್ಯವಸ್ಥೆಯಲ್ಲಿ ಸ್ತ್ರೀ ಶೋಷಣೆಯ ಹುಡುಕಾಟ ನಡೆದಿರುತ್ತಿತ್ತು. ಮಹಿಳೆ ಮತ್ತು ಪುರುಷನನ್ನು ಮುಖಾಮುಖಿಯಾಗಿಟ್ಟು ನೋಡುವ ಕ್ರಮ ಸಾಧಾರಣವಾಗಿರುತ್ತಿತ್ತು. ಹಾಗೆ ನೋಡುವಾಗ ಮಾವ ಶೋಷಕನಾಗಿಯೂ ಭಾಗೀರಥಿ ಅಥವಾ ಹೊನ್ನಮ್ಮ ಶೋಷಿತ ಮಹಿಳೆ ಅಥವಾ ಬಲಿದಾನಕ್ಕೆ ಒಳಗಾದ ವ್ಯಕ್ತಿಯಾಗಿ ಕಾಣಿಸುತ್ತಾಳೆ. ಈ ವಿಮರ್ಶೆಯನ್ನಾಗಲಿ ಅಥವಾ ಅವಳ ತ್ಯಾಗ ಎಂದು ನೋಡಿದ ಭಾವುಕ ನೆಲೆಯ ವಿಮರ್ಶೆಗಳು ಸರಿ ಅಥವಾ ತಪ್ಪು ಎನ್ನುವ ಲೇಖಕರು ಆಯಾ ಕಾಲಘಟ್ಟದ ಹಿನ್ನೆಲೆ ಮತ್ತು ದೃಷ್ಟಿ ಕೋನದಿಂದ ನೋಡುತ್ತಾ ಬಂದಿದ್ದಾರೆ. ಮಾವನನ್ನು ಪುರುಷಪ್ರಧಾನ ವ್ಯವಸ್ಥೆಯ ಪ್ರತಿನಿಧಿಯಾಗಿ, ಭಾಗೀರಥಿಯನ್ನು 'ಹೆಣ್ಣಿನ ಬಲಿದಾನದ' ಸಂಕೇತವಾಗಿ ನಿಲ್ಲಿಸಿ ನೋಡುವುದಕ್ಕಿಂತ ಒಂದು ನಂಬಿಕೆ ಅಥವಾ ವ್ಯವಸ್ಥೆಯನ್ನು ಒಪ್ಪಿಕೊಂಡ ಸಮುದಾಯವೇ ಶೋಷಣೆಗೆ ಒಳಗಾಗುವುದನ್ನು ಗುರುತಿಸಬೇಕಾಗುತ್ತದೆ. ಸತಿಯಾಗಿ ಚಿತೆಗೇರಿದ ಮಹಿಳೆಯರನ್ನು ಬಲವಂತವಾಗಿ ತಂದು ಕಟ್ಟಿದ ಸಂದರ್ಭಗಳೂ ಇವೆ, ಇಲ್ಲವೆ ತಾವೇ ಸ್ವಯಂ ಸ್ಫೂರ್ತಿಯಿಂದ ಹೋದವರೂ ಇದ್ದಾರೆ. ಚಿತೆಗೇರಿದ ಹೆಣ್ಣು ಶೋಷಿತಳು, ಉಳಿದವರೆಲ್ಲರೂ ಅಪರಾಧಿಗಳೆಂದು ಭಾವಿಸದೆ, ಸತಿಪದ್ಧತಿಯನ್ನು ಒಪ್ಪಿಕೊಂಡ ಸಮಾಜದಲ್ಲಿ ಎಲ್ಲರೂ ಆ ಪದ್ಧತಿಗೆ ಪೂರಕವಾಗಿ ನಡೆದುಕೊಳ್ಳುತ್ತಾರೆ. ತಮ್ಮ ಮನೆಯ ಹೆಣ್ಣುಮಗಳೊಬ್ಬನ್ನು ಚಿತೆಗೇರಿಸಿ ಉಳಿದವರು ಸಂಭ್ರಮಪಡುತ್ತಾರೆಂದು ಭಾವಿಸಲಾದೀತೆ? ಉಳಿದವರು ಮೂಕವೇದನೆಯನ್ನು ಅನುಭವಿಸುತ್ತಾರೆ. ಈ ಪದ್ಧತಿಗಳು ಹುಟ್ಟುವಾಗ ಯಾರದೋ ಒಬ್ಬರ ಹಿತಾಸಕ್ತಿಯೋ, ಕ್ರೌರ್ಯವೋ, ಸ್ತ್ರೀ-ಪುರುಷ ದರ್ಪವೋ, ಮೇಲುಕೀಳಿನ ಭಾವನೆಗಳೋ ಕಾರಣವಾಗಿದ್ದರೂ ಅದನ್ನು ಬೆಳೆಸಿಕೊಂಡು ಬರುವಾಗ ಇಡೀ ಸಮುದಾಯ ಪಾಲುದಾರನೂ, ಶೋಷಿತನೂ ಆಗುತ್ತಾನೆ.

ಕೆರೆಗೆ ಹಾರದಂತಹ ಆಕರವೊಂದು ಭಾರತದ ಚರಿತ್ರೆಯಲ್ಲಿ ಸಾಮಾಜಿಕ ಬಿಕ್ಕಟ್ಟುಗಳು ಎಷ್ಟು ಗಾಢವಾಗಿದ್ದವು ಎನ್ನುವುದರ ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ಇವು ಹಾಡಿನ ಮೂಲಕ, ಆಚರಣೆಗಳ ಮೂಲಕ ಇಲ್ಲವೆ ಸ್ಮಾರಕಗಳ ಮೂಲಕ ಉಳಿದುಕೊಂಡು ಚರಿತ್ರೆಯಲ್ಲಿ ಹೆಣ್ಣಿನ ಬದುಕಿನ ಒಂದು ವೇದನೆಯ ಮುಖದ ಮೂಕ ಕನ್ನಡಿಗಳಾಗಿ ಕಾಣಬರುತ್ತವೆ.

## ಟಿಪ್ಪಣಿಗಳು

Diane Elam, 1994, Feminism and Deconstruction, Rontledge, London.

ಈ ಕೃತಿ ಸ್ತ್ರೀವಾದವನ್ನು ಮುರಿದುಕಟ್ಟುವ ವಾದವನ್ನು ಮಂಡಿಸಿದ ಪ್ರಮುಖ ಕೃತಿಯಾಗಿದೆ. ಐರಿಷಾ ಅವರ ಉದ್ಧೃತ ಭಾಗಗಳನ್ನು ಈ ಕೃತಿಯಿಂದ ಆರಿಸಿಕೊಳ್ಳಲಾಗಿದೆ.

ಗಾಯತ್ರೀ ನಾವಡ, ೧೯೯೯, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಗೋವಿಂದ ಪೈ ಈ ಕೃತಿಯ ಪುಟ ೭೯, ಜನಪದ ಕಥನ ಕವನಗಳು ಸಂಶೋಧನಾ ಕೇಂದ್ರ, ಉಡುಪಿ ಇಲ್ಲಿ ಬಂದಿರುವ ಕೆರೆಗೆ ಹಾರದ ಪಾಠ ನೋಡಿ. ಕೆರೆಗೆ ಹಾರದ ಬಗೆಗಿನ ಹಲವರ ಅಭಿಪ್ರಾಯಗಳು ಒಂದು ಕಡೆ ಉತ್ತಮವಾಗಿ ಕಲೆ ಹಾಕಿದ್ದಾರೆ ಮತ್ತು ಸ್ತ್ರೀವಾದಿ ನೆಲೆಯ ಚೌಕಟ್ಟಿನ ಸ್ವರೂಪವನ್ನು ಇದರಲ್ಲಿ ನೋಡಬಹುದು.

ವೈ.ಸಿ. ಭಾನುಮತಿ, ೧೯೯೯, ಜಾನಪದ ಭಿತ್ತಿ, ಸಂವಹನ, ಮೈಸೂರು.

ಈ ಕೃತಿಯ ಬೇಲೂರು ಬಿಷ್ಟಮ್ಮನ ಕೆರೆ ಲೇಖನ ನೋಡಿ. ಜನಪದ ಕಥನ ಕವನಕ್ಕೆ ಶಾಸನ ಮತ್ತು ಸಾಹಿತ್ಯದ ಆಕರಗಳನ್ನು ಹೋಲಿಸಿ ಅದರಲ್ಲೂ ಕಾಣಬರುವ ಲಿಂಗತಾರತಮ್ಯವನ್ನು ಗುರುತಿಸುತ್ತಾರೆ. ಈ ಲೇಖನ ಹೊಯ್ಸಳ ಸಂಪದ ಕೃತಿಯಲ್ಲಿ ಪ್ರಕಟವಾಗಿದೆ.

ಎಂ. ಚಿದಾನಂದ ಮೂರ್ತಿ, ಕರ್ನಾಟಕ ಶಾಸನ ಸಂಸ್ಕೃತಿ. ನರಬಲಿಯನ್ನು ಕುರಿತ ಶಾಸನಗಳ ಉಲ್ಲೇಖ ದೊರೆಯುತ್ತದೆ. ಗಮನಿಸಿ.

ವಸು ಎಂ.ಎ. ೨೦೦೪. ಮೌಖಿಕ ಇತಿಹಾಸ, ಅಂಕಿತ ಪ್ರಕಾಶ, ಬೆಂಗಳೂರು.

ಮೌಖಿಕ ಇತಿಹಾಸವನ್ನು ಚರಿತ್ರೆಯ ಬರವಣಿಗೆಗೆ ಆಕರವಾಗಿ ಹೇಗೆ ಬಳಸಬಹುದೆಂದ ಕುರಿತ ಚರ್ಚೆಯನ್ನು ಕಡೆಯ ಎರಡು ಅಧ್ಯಾಯಗಳಲ್ಲಿ ಗಮನಿಸಿ.

Uma Chakravarthi, 2003, Gendering Caste : Through a Feminist lens, stree.

Romila Thapar, 2004, Cultural Pasts, oup

ಈ ಕೃತಿಯಲ್ಲಿ of Heroes and History cl\lg Genealogles and Originmyths as Historical sourees ಈ ಎರಡು ಭಾಗದ ಲೇಖನಗಳು ಚರಿತ್ರೆ, ಜನಪದಗಳ ಅಧ್ಯಯನಕ್ಕೆ ಹೆಚ್ಚು ಸಹಕಾರಿಯಾಗಿದೆ.

ಸಮಾಜ

# ಮಹಿಳಾ ಸಬಲೀಕರಣ ಮತ್ತು ಭಾರತ ಸಂವಿಧಾನ

ಎಸ್. ಅನಂತ್

ಮಹಿಳಾ ಸಬಲೀಕರಣ ಮತ್ತು ಭಾರತ ಸಂವಿಧಾನ ಎಂಬ ಶೀರ್ಷಿಕೆಯಡಿಯಲ್ಲಿನ ಲೇಖನದಲ್ಲಿ ಪ್ರಮುಖವಾಗಿ ೩ ಹಂತಗಳಲ್ಲಿ ಮಹಿಳಾ ಸಬಲೀಕರಣ ಪ್ರಕ್ರಿಯೆಯನ್ನು ಚರ್ಚಿಸುವ ಇಂಗಿತವನ್ನು ಪ್ರಸ್ತಾಪಿಸಲಾಗಿದೆ. ಮೊದಲನೆಯದಾಗಿ ಮಹಿಳಾ ಸಬಲೀಕರಣ ಯಾವ ರೀತಿಯ ಸೈದ್ಧಾಂತಿಕ ಆಯಾಮಗಳನ್ನು ಹೊಂದಿದೆ. ಎರಡನೆಯದಾಗಿ ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯಾನಂತರದಲ್ಲಿ ಕೈಗೊಂಡಿರುವ ಸಂವಿಧಾನಾತ್ಮಕ ಕ್ರಮಗಳು ಹಾಗೂ ಅದರ ಚೌಕಟ್ಟಿನಲ್ಲಿ ರಚಿಸಲ್ಪಟ್ಟಿರುವ ಮಹಿಳಾ ಹಿತರಕ್ಷಣಾ ಕಾನೂನುಗಳು, ಆ ಕಾನೂನುಗಳನ್ವಯ ಕೈಗೊಂಡಿರುವ ಮಹಿಳಾ ಅಭಿವೃದ್ಧಿ ಯೋಜನೆಗಳು ಯಾವುವು ಎಂಬುದನ್ನು ಚರ್ಚಿಸಲಾಗಿದೆ. ಮೂರನೆಯದಾಗಿ ಲಭ್ಯವಿರುವ ಕಾನೂನಾತ್ಮಕ ಅವಕಾಶಗಳನ್ನು ಬಳಸಿಕೊಂಡರೂ ಸಹ ಮಹಿಳಾ ಸಬಲೀಕರಣ ಪ್ರಕ್ರಿಯೆ ಕ್ರಿಯಾಶೀಲವಾಗಿ ಸಾಗದಿರಲು ಕಾರಣವೇನು ಎಂಬುದನ್ನು ಕುರಿತಂತೆ ಸೂಕ್ಷ್ಮವಾಗಿ ಪರಿಚಯಿಸಲು ಮತ್ತು ಚರ್ಚಿಸಲು ಪ್ರಯತ್ನವನ್ನು ಮಾಡಲಾಗಿದೆ.

ಭಾರತದಲ್ಲಿ ಮಹಿಳಾ ಸಬಲೀಕರಣ ಪ್ರಶ್ನೆ ೧೯೮೦ರ ದಶಕದ ನಂತರ ಹೆಚ್ಚು ಚರ್ಚೆಗೆ ಗ್ರಾಸವಾಗಿರುವ ಒಂದು ಸಂಗತಿಯಾಗಿದೆ. ಆದರೆ ಈ ಚರ್ಚೆ ವಿಶ್ವದಾದ್ಯಂತ ಇಂದಿಗೂ ನಿರಂತರವಾಗಿ ಮುಂದುವರೆದಿದ್ದು ಒಂದು ರೀತಿ ಅಪೂರ್ಣ ಸ್ವರೂಪವನ್ನೇ ಪಡೆದುಕೊಂಡಿದೆ. ಮಹಿಳಾ ಸಬಲೀಕರಣ ಎಂದರೆ ಏನು? ಮಹಿಳಾ ಸಬಲೀಕರಣ ಪ್ರಕ್ರಿಯೆಯನ್ನು ಯಾವ ರೀತಿ ಕೈಗೊಳ್ಳಬೇಕು ಮತ್ತು ಅದರ ನಿರ್ವಹಣೆ ಹೇಗೆ ಮಾಡಬೇಕು? ಎಂಬುದರ ಬಗ್ಗೆ ಇಂದಿಗೂ ಒಂದು ಒಮ್ಮತದ ಅಭಿಪ್ರಾಯ ಮೂಡಿಲ್ಲ. ಮಹಿಳಾ ಸಬಲೀಕರಣವೆಂದರೆ ಅವರ ಆರ್ಥಿಕ ಸ್ಥಾನಮಾನವನ್ನು ಹೆಚ್ಚಿಸುವುದೇ? ಅವರ ಸಾಮಾಜಿಕ ಸ್ಥಾನಮಾನದಲ್ಲಿನ ಬದಲಾವಣೆಯೇ? ಅಥವಾ ರಾಜಕೀಯ ಸ್ಥಾನದಲ್ಲಿನ ಹೆಚ್ಚಳವೆ ಹೀಗೆ ಇತ್ಯಾದಿ ಅಂಶಗಳು ಚರ್ಚೆಗೆ ಒಳಗಾಗುತ್ತಿವೆ. ಇದಕ್ಕೆ ಸಂಬಂಧಿಸಿದಂತೆ ಭಾರತೀಯ ಮಹಿಳಾ ವಾದಿಗಳು ಮತ್ತು ಪಾಶ್ಚಿಮಾತ್ಯ ಮಹಿಳಾ ವಾದಿಗಳ ಮುಂದೆ ಹಲವಾರು ರೀತಿಯ ವಿಭಿನ್ನ ನಿಲುವುಗಳೂ ಇರುವುದನ್ನು ಗಮನಿಸಬಹುದಾಗಿದೆ. ಉದಾ: ಮಹಿಳೆಯರ ರಾಜಕೀಯ ಸಬಲೀಕರಣಕ್ಕೆ

ಸಂಬಂಧಿಸಿದಂತೆ ಅವಲೋಕಿಸಿದಾಗ ಮಹಿಳೆಯರಿಗೆ ರಾಜಕೀಯ ಮೀಸಲಾತಿಯನ್ನು ನೀಡುವ ಮೂಲಕ ಮಹಿಳಾ ಸಬಲೀಕರಣ ಪ್ರಕ್ರಿಯೆ ಚುರುಕುಗೊಳಿಸಬೇಕು ಎಂಬ ಅಭಿಪ್ರಾಯವನ್ನು ಭಾರತೀಯ ಮಹಿಳಾವಾದಿಗಳು ವ್ಯಕ್ತಪಡಿಸುತ್ತಾರೆ. ಆದರೆ ಇದೇ ಪ್ರಶ್ನೆಯನ್ನು ಪಾಶ್ಚಿಮಾತ್ಯ ಮಹಿಳಾವಾದಿಗಳ ಮುಂದೆ ಇಟ್ಟರೆ ಅವರು ಮೀಸಲಾತಿಯ ಮೂಲಕ ಮಹಿಳಾ ಸಬಲೀಕರಣ ಸಾಧ್ಯವಿಲ್ಲ ಎಂದು ಉತ್ತರಿಸುತ್ತಾರೆ. ಏಕೆಂದರೆ ಮೀಸಲಾತಿಯ ಮೂಲಕ ಮಹಿಳಾ ಸಬಲೀಕರಣ ಸಾಧ್ಯವಾಗಬೇಕೆಂದರೆ ಮಹಿಳಾ ಮೀಸಲಾತಿಯನ್ನು ಸಮರ್ಥವಾಗಿ ಬಳಸಿ ಕೊಳ್ಳುವಷ್ಟು ಸಾಮರ್ಥ್ಯವನ್ನು ಮಹಿಳೆಯರಲ್ಲಿ ಬೆಳೆಸುವಂತಹ ಸನ್ನಿವೇಶ ನಿರ್ಮಾಣವಾದಾಗ ಮಾತ್ರ ಮಹಿಳೆಯರ ರಾಜಕೀಯ ಸಬಲೀಕರಣ ಪ್ರಕ್ರಿಯೆ ಅರ್ಥಪೂರ್ಣಗೊಳ್ಳಲು ಸಾಧ್ಯ ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಅಂದರೆ ಭಾರತೀಯ ಮಹಿಳಾ ವಾದಿಗಳು ರಾಜಕೀಯ ಮೀಸಲಾತಿಯಿಂದ ಮಹಿಳಾ ಸಬಲೀಕರಣ ಸಾಧ್ಯ ಎಂದರೆ ಪಾಶ್ಚಾತ್ಯ ಮಹಿಳಾವಾದಿಗಳು ರಾಜಕೀಯ ಮೀಸಲಾತಿಯನ್ನು ಸಮರ್ಥವಾಗಿ ಉಪಯೋಗಿಸಿಕೊಳ್ಳುವಂತಹ ವಾತಾವರಣ ಸೃಷ್ಟಿಯಾದಾಗ ಮಾತ್ರ ಸಾಧ್ಯ ಎನ್ನುತ್ತಾರೆ. ಆದ್ದರಿಂದ ಮೀಸಲಾತಿ ನೀಡುವುದಕ್ಕಿಂತ ಮೊದಲು ಮೀಸಲಾತಿಯನ್ನು ಸದುಪಯೋಗ ಪಡಿಸಿಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸುವ ಕಡೆಗೆ ಹೆಚ್ಚಿನ ಆದ್ಯತೆ ನೀಡಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಈ ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಮಹಿಳಾ ಸಬಲೀಕರಣವನ್ನು ಗ್ರಹಿಸುವುದಾದರೆ ಕೇವಲ ರಾಜಕೀಯ ಸಬಲೀಕರಣವೊಂದನ್ನೆ ನಾವು ಮಹಿಳಾ ಸಬಲೀಕರಣ ಎಂದು ಕರೆಯಲು ಸಾಧ್ಯವಿಲ್ಲ. ಇತ್ತೀಚಿನ ದಿನಗಳಲ್ಲಿ ಭಾರತದಂತಹ ರಾಷ್ಟ್ರಗಳಲ್ಲಿ ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಯನ್ವಯ ಅಧಿಕಾರ ವಿಕೇಂದ್ರೀಕರಣದ ಹೆಸರಿನಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಶೇ. ೩೩.೩ರಷ್ಟು ಸದಸ್ಯ, ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಸ್ಥಾನಗಳಿಗೆ ಮಹಿಳೆಯರಿಗೆ ಮೀಸಲಾತಿಯನ್ನು ನೀಡಲಾಗಿದೆ. ಇದರಿಂದಾಗಿ ಮಹಿಳಾ ಸಬಲೀಕರಣ ಪ್ರಕ್ರಿಯೆಯನ್ನು ಕ್ರಾಂತಿಕಾರಕವಾಗಿ ಮಾಡಲಾಗುತ್ತಿದೆ ಎಂಬ ಭ್ರಮೆಯಲ್ಲಿ ನಾವು ತೇಲುವಂತಾಗಿದೆ. ಕಾರಣ ಲಭ್ಯವಿರುವ ಮೀಸಲಾತಿಯನ್ನು ಪಡೆಯುವಲ್ಲಿ ಸಮ್ಮ ಸಮಾಜ ಸದುಪಯೋಗಪಡಿಸಿಕೊಳ್ಳುವಲ್ಲಿ ಎಷ್ಟರಮಟ್ಟಿಗೆ ಕ್ರಿಯಾಶೀಲವಾಗಿದೆ ಎಂಬುದನ್ನು ಅವಲಂಬಿಸಿರುತ್ತದೆ. ಪ್ರಸ್ತುತ ಅಧಿಕಾರ ವಿಕೇಂದ್ರೀಕರಣ ಪ್ರಕ್ರಿಯೆಯನ್ನು ಅವಲೋಕಿಸಿದಾಗ ಸ್ಥಾನಗಳ ಹಂಚಿಕೆ ನಾಮಮಾತ್ರವಾಗಿ ಲಿಂಗಾಧಾರಿತವಾಗಿ ಹಂಚಿಕೆಯಾಗಿದೆಯಾದರೂ ಅದು ಲಿಂಗಾಧಾರಿತವಾಗಿ ಪುರುಷಪ್ರಧಾನವಾಗಿರುವುದನ್ನು ಹೆಚ್ಚಿನ ಸಶೋಧನೆಗಳು ದೃಢಪಡಿಸಿವೆ. ಆದ್ದರಿಂದ ಈ ಲಿಂಗಾಧಾರಿತ ಕೇಂದ್ರೀಕೃತ ವ್ಯವಸ್ಥೆಯಡಿಯಲ್ಲಿ ಮಹಿಳಾ ಸಬಲೀಕರಣ ಪ್ರಕ್ರಿಯೆಗೆ ಹಿನ್ನಡೆಯಾಗಲು ಕಾರಣವೇನು ಎಂಬುದರ ಬಗ್ಗೆ ಗಮನಿಸಿದಾಗ ಹೆಚ್ಚಿನ ಅಂಶಗಳು ವ್ಯಕ್ತಿಗತವಾಗಿರದೆ ಸಾಮುದಾಯಿಕ ಕಾರಣಗಳಾಗಿ ಕಂಡುಬರುತ್ತವೆ. ಐತಿಹಾಸಿಕ ವಾಗಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆ ಅವಲೋಕಿಸಿದಾಗ ಪ್ರಾಚೀನ ಭಾರತದಲ್ಲಿ ವೇದಗಳ

ಕಾಲದಲ್ಲಿ ಮಹಿಳೆಯರಿಗೆ ಸ್ವಾತಂತ್ರ್ಯ ಇದ್ದುದರ ಬಗ್ಗೆ ಉಲ್ಲೇಖಗಳು ಲಭ್ಯವಾಗುತ್ತವೆ. ಅದರಲ್ಲಿಯೂ ಋಗ್ವೇದ ಕಾಲದಲ್ಲಿ ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆ ಇದ್ದರೂ ಕೂಡ ಕೌಟುಂಬಿಕ ವಿಷಯವಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯ ಲಭ್ಯವಾಗಿತ್ತಲ್ಲದೆ ಬಾಲ್ಯವಲ್ಲಿಯೇ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಉಪನಯನದಂತಹ ಮಹತ್ವದ ಸಂಸ್ಕೃತಿಯನ್ನು ಯಾವುದೇ ಭೇದಭಾವಗಳಿಲ್ಲದೆ ನಡೆಸುತ್ತಿದ್ದುದರ ಬಗ್ಗೆ ಋಗ್ವೇದದಲ್ಲಿ ಉಲ್ಲೇಖಗಳಿರುವುದನ್ನು ಗುರುತಿಸಬಹುದಾಗಿದೆ. ಆದರೆ ಕ್ರಿ.ಪೂ. ೬ನೇ ಶತಮಾನದ ನಂತರದಲ್ಲಿ ಅಂದರೆ ಧರ್ಮಶಾಸ್ತ್ರಗಳ ಅವಧಿಯಲ್ಲಿ ಮಹಿಳೆಯರ ಸ್ಥಿತಿ ಕೇವಲ ಪುರುಷ ಅವಲಂಬಿತ ಸ್ಥಿತಿಯಾಗಿ ರೂಪುಗೊಂಡಿದ್ದರ ಬಗ್ಗೆ ಉಲ್ಲೇಖಿಸಲಾಗಿದೆ. ಇದೇ ಪರಿಸ್ಥಿತಿ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತದಲ್ಲಿಯೂ ಸಹ ಮುಂದುವರೆದಿದೆ. ಆದರೆ ಕ್ರಿ.ಪೂ. ೬ನೇ ಶತಮಾನದ ಅವಧಿಯಲ್ಲಿಯೇ ಪ್ರಾರಂಭಗೊಂಡ ಜೈನ ಮತ್ತು ಬೌದ್ಧ ಧರ್ಮಗಳು ಸ್ತ್ರೀಯರಿಗೆ ಸಮಾನತೆಯನ್ನು ನೀಡುವ ಪ್ರಯತ್ನವನ್ನು ಮಾಡಿದವು. ಬೌದ್ಧ ಸಂಘಗಳಲ್ಲಿ ಮಹಿಳೆಯರಿಗೆ ಪುರುಷ ಸಮಾನ ಸ್ಥಾನಮಾನವನ್ನು ಕಲ್ಪಿಸಲಾಗಿತ್ತು. ನಂತರ ವಸಾಹತುಶಾಹಿ ಆಡಳಿತದ ಅವಧಿಯಲ್ಲಿ ಕಾನೂನಾತ್ಮಕವಾಗಿ ಕೆಲವು ಸುಧಾರಣೆ ಗಳನ್ನು ತರುವ ಪ್ರಯತ್ನ ನಡೆಯಿತಾದರೂ ಅದಕ್ಕೆ ಸಾಮುದಾಯಿಕವಾದ ಒಂದು ಧನಾತ್ಮಕವಾದ ಪ್ರತಿಕ್ರಿಯೆ ದೊರೆಯಲಿಲ್ಲ ಎಂದೇ ಹೇಳಬಹುದು.

ಭಾರತ ಸ್ವಾತಂತ್ರ್ಯನಂತರದಲ್ಲಿ ಮಹಿಳಾ ಸಬಲೀಕರಣ ಪ್ರಕ್ರಿಯೆಗೆ ಒಂದು ರೀತಿ ಸಂವಿಧಾನಾತ್ಮಕ ಚಾಲನೆ ದೊರೆಯಿತು. ೧೯೫೦ರಲ್ಲಿ ಗಣರಾಜ್ಯ ಅಸ್ತಿತ್ವಕ್ಕೆ ಬಂದ ನಂತರ ಪುರುಷ ಮತ್ತು ಮಹಿಳೆಯರಿಗೆ ಸರಿಸಮವಾದ ಸ್ಥಾನವನ್ನು ಕಲ್ಪಿಸಲು ಆರ್ಥಿಕ, ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕ ಇತ್ಯಾದಿ ಕ್ಷೇತ್ರಗಳಲ್ಲಿ ಮಹಿಳಾ ಹಿತಾಸಕ್ತಿಗಳನ್ನು ಕಾಪಾಡುವ ಶಾಸನಗಳನ್ನು ಸಂವಿಧಾನದಲ್ಲಿ ಸೇರಿಸಲಾಯಿತು. ಈ ರೀತಿ ಮಹಿಳೆಯರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಉದ್ದೇಶದಿಂದ ಹಲವಾರು ಶಾಸನಾತ್ಮಕ ಕ್ರಮಗಳನ್ನು ಜಾರಿಗೊಳಿಸ ಲಾಯಿತು. ಅವುಗಳಲ್ಲಿ ಪ್ರಮುಖವಾದವುಗಳು ಯಾವುವೆಂದರೆ,

* ೧೪ನೇ ವಿಧಿಯನ್ವಯ ಮಹಿಳೆಗೆ ಸಂವಿಧಾನಾತ್ಮಕವಾಗಿ ಸಮಾನತೆಯನ್ನು ಕಲ್ಪಿಸ ಲಾಯಿತು.
* ೧೫(೧)ನೇ ವಿಧಿಯನ್ವಯ ರಾಜ್ಯ ಮಹಿಳೆಯರಿಗೆ ಲಿಂಗಾಧಾರಿತವಾಗಿ ಯಾವುದೇ ರೀತಿಯ ತಾರತಮ್ಯ ಮಾಡುವಂತಿಲ್ಲ.
* ೧೫(೩)ನೇ ವಿಧಿಯನ್ವಯ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗೆ ರಾಜ್ಯವು ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು.
* ೧೬ನೇ ವಿಧಿಯನ್ವಯ ಸಾರ್ವಜನಿಕ ಉದ್ಯೋಗದಲ್ಲಿ ಮಹಿಳೆಯರಿಗೆ ಸಮಾನ ಅವಕಾಶವನ್ನು ಕಲ್ಪಿಸುವುದು.

* ೩೯ (ಎ) ೩೯ (ಡಿ) ಮಹಿಳೆಯರಿಗೆ ವೇತನದಲ್ಲಿ ಯಾವುದೇ ರೀತಿಯ ತಾರತಮ್ಯ ಮಾಡದೇ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕು.
* ೪೨ನೇ ವಿಧಿಯ ಅನ್ವಯ ಉದ್ಯೋಗದಲ್ಲಿ ಮಹಿಳೆಯರಿಗೆ ನ್ಯಾಯಯುತವಾದ ಮಾನವೀಯ ಸೌಲಭ್ಯಗಳಾದ ಹೆರಿಗೆ, ಬಿಡುವು ಇತರೆ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು.
* ೪೬ನೇ ವಿಧಿಯನ್ವಯ ದುರ್ಬಲ ವರ್ಗದ ಮಹಿಳೆಯರನ್ನು ಶೋಷಣೆಯಿಂದ ಮುಕ್ತಗೊಳಿಸಬೇಕು.
* ೪೭ನೇ ವಿಧಿಯನ್ವಯ ಮಹಿಳಾ ಆಯೋಗವನ್ನು ಹೆಚ್ಚು ಬಲಗೊಳಿಸಲು ರಾಜ್ಯ ಕೈಗೊಳ್ಳಬೇಕು.
* ೫೧ (ಎ) ಮತ್ತು ೫೧ ದಿ ವಿಧಿಯ ಪ್ರಕಾರ ಮಹಿಳೆಯರಿಗೆ ಅವಮಾನವಾಗುವಂತಹ ಸಾಮಾಜಿಕ ಬಲತ್ಕಾರ ಸಂಗತಿಗಳನ್ನು ನಿಯಂತ್ರಿಸಬೇಕು.
* ೨೪೩ ಡಿ (೩) ರ ಪ್ರಕಾರ ರಾಷ್ಟ್ರದಾದ್ಯಂತ ಸ್ಥಳೀಯ ಸರ್ಕಾರಗಳ ಸದಸ್ಯ/ಅಧ್ಯಕ್ಷ/ಉಪಾಧ್ಯಕ್ಷ ಸ್ಥಾನಗಳಿಗೆ ಶೇ. ೩೩ರಷ್ಟು ಮೀಸಲಾತಿಯನ್ನು ಒದಗಿಸಬೇಕು, ಮುಂತಾದ ಸಂವಿಧಾನಾತ್ಮಕ ಮತ್ತು ಶಾಸನಾತ್ಮಕ ಕ್ರಮಗಳನ್ನು ಮಹಿಳೆಯರ ಸಬಲೀಕರಣಕ್ಕೆ ಪೂರಕವಾಗಿ ರೂಪಿಸಲಾಗಿದೆ.

ಈ ರೀತಿಯ ಸಂವಿಧಾನಾತ್ಮಕ ಚೌಕಟ್ಟಿನ ಹಿನ್ನೆಲೆಯಲ್ಲಿ ಭಾರತೀಯ ಶಾಸಕಾಂಗವು ಕಾಲದಿಂದ ಕಾಲಕ್ಕೆ ಮಹಿಳೆಯರ ಸ್ವಾತಂತ್ರ್ಯ, ಸಮಾನತೆಯ ಹಿತಾಸಕ್ತಿಗಳನ್ನು ಕಾಪಾಡುವ ಉದ್ದೇಶದಿಂದ ಹಲವಾರು ಶಾಸನಗಳನ್ನು ರಚಿಸುತ್ತಾ ಬಂದಿದೆ. ಇದಕ್ಕೆ ಸಂಬಂಧಿಸಿದಂತೆ ಭಾರತೀಯ ದಂಡ ಸಂಹಿತೆ (I.P.C.) ಮಹಿಳೆಯರಿಗೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ಶಿಕ್ಷಾರ್ಹ ಅಪರಾಧಗಳೆಂದು ಗುರುತಿಸಿದೆ. ಅವುಗಳೆಂದರೆ ಬಲತ್ಕಾರ (ಐ.ಪಿ.ಸಿ. ಸೆಕ್ಷನ್-೩೭೬). ಅಪಹರಣ ಮಾಡುವುದು (ಸೆಕ್ಷನ್ ೩೬೩-೩೭೩), ವರದಕ್ಷಿಣೆ ಕರುಕುಳ (ಸೆಕ್ಷನ್ ೩೦೨/೩೦೪), ಮಾನಸಿಕ ಹಾಗೂ ದೈಹಿಕ ಹಿಂಸೆ (ಸೆಕ್ಷನ್ ೪೯೮), ಲೈಂಗಿಕ ಕಿರುಕುಳ (ಸೆಕ್ಷನ್ ೩೫೪) ಇತ್ಯಾದಿ ವಿಷಯಗಳನ್ನು ಕಾನೂನಾತ್ಮಕ ಅಪರಾಧಗಳೆಂದು ಗುರುತಿಸಲಾಗಿದೆ.

ಈ ಮೇಲೆ ವಿವರಿಸಿದಂತಹ ಅಪಾಯಗಳಿಂದ ಮಹಿಳೆಯರನ್ನು ರಕ್ಷಿಸುವ ಉದ್ದೇಶದಿಂದಾಗಿ ಕಾಲದಿಂದ ಕಾಲಕ್ಕೆ ಮಹಿಳಾ ರಕ್ಷಣಾತ್ಮಕ ಕಾನೂನುಗಳನ್ನು ರಚಿಸುತ್ತಾ ಮತ್ತು ರಚಿಸಲ್ಪಟ್ಟ ಕಾನೂನುಗಳನ್ನು ಪರಿಷ್ಕರಿಸುತ್ತಾ ಬರಲಾಗುತ್ತಿದೆ. ಅಂದರೆ ಮಹಿಳೆಯರ ರಕ್ಷಣೆಗೆ ಪೂರಕವಾಗುವಂತೆ ಕಾಲ, ಪ್ರದೇಶ ಮತ್ತು ಪ್ರತಿನಿಧಿಗಳ ಮನೋಧರ್ಮಕ್ಕೆ ತಕ್ಕಂತೆ ತಿದ್ದುಪಡಿಗಳನ್ನು ಕೂಡ ತರಲಾಗುತ್ತಿದೆ. ಹೀಗೆ ರಚಿಸಲ್ಪಟ್ಟಿರುವ ಕಾನೂನುಗಳೊಂದಿಗೆ ರಾಜ್ಯ ನೌಕರ ಜೀವವಿಮೆ ನಿಯಮ-೧೯೪೮, ಪ್ಲಾಂಟೇಷಸ್ ಕಾರ್ಮಿಕರ ಕಾಯ್ದೆ-೧೯೫೧, ಕೌಟುಂಬಿಕ ನ್ಯಾಯಾಲಯಗಳ ಕಾಯ್ದೆ-೧೯೫೪, ವಿಶೇಷ ವಿವಾಹ ಕಾಯ್ದೆ-

೧೯೫೪, ಹಿಂದೂ ವಿಧವಾ ಕಾಯ್ದೆ-೧೯೫೬, ಹಿಂದೂ ಪುತ್ರಿ ಪುತ್ರರ ಕಾಯ್ದೆ-೧೯೫೬, ವೇಶ್ಯಾವಾಟಿಕೆ ನಿಯಂತ್ರಿತ ಕಾಯ್ದೆ-೧೯೫೬, ಹೆರಿಗೆ ಸೌಲಭ್ಯದ ಕಾಯ್ದೆ-೧೯೬೧ (೧೯೭೫ರಲ್ಲಿ ತಿದ್ದುಪಡಿ ಮಾಡಲಾಗಿದೆ), ವರದಕ್ಷಿಣೆ ನಿಷೇಧ ಕಾಯ್ದೆ-೧೯೬೧, ಗರ್ಭಪಾತ ನಿಯಂತ್ರಿತ ಕಾಯ್ದೆ-೧೯೭೧, ಸಮಾನವೇತನ ಕಾಯ್ದೆ-೧೯೭೬, ಬಾಲ್ಯವಿವಾಹ ನಿಷೇಧ ತಿದ್ದುಪಡಿ ಕಾಯ್ದೆ-೧೯೭೮, ಮಹಿಳೆಯರನ್ನು ಅಶ್ಲೀಲವಾಗಿ ದುಡಿಸುವ ವಿರುದ್ಧದ ಕಾಯ್ದೆ-೧೯೮೬, ಸತಿಪದ್ಧತಿ ನಿಯಂತ್ರಣ ಕಾಯ್ದೆ-೧೯೮೭ ಮತ್ತು ಭ್ರೂಣಹತ್ಯೆ ನಿಷೇಧ ಕಾಯ್ದೆ - ಈ ರೀತಿಯ ಹಲವಾರು ಕಾನೂನುಗಳನ್ನು ಜಾರಿಗೊಳಿಸುವ ಮೂಲಕ ಮಹಿಳೆಯರ ಹಿತಾಸಕ್ತಿಯನ್ನು ಕಾಪಾಡುವ ಮೂಲಕ ಮಹಿಳೆಯರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನ ನಡೆಸಲಾಗಿದೆ.

ಮಹಿಳೆಯರ ಸಬಲೀಕರಣ ಪ್ರಕ್ರಿಯೆಯನ್ನು ಕ್ರಿಯಾಶೀಲಗೊಳಿಸುವ ಉದ್ದೇಶದಿಂದ ಸ್ವಾತಂತ್ರ್ಯಾನಂತರ ಭಾರತದಲ್ಲಿ ಸಂವಿಧಾನಾತ್ಮಕವಾಗಿ ಹಲವಾರು ಶಾಸನಾತ್ಮಕ ಅವಕಾಶಗಳನ್ನು ಕಲ್ಪಿಸಿರುವ ಹಿನ್ನೆಲೆಯಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಮಹಿಳೆಯರ ಅಭಿವೃದ್ಧಿಗೆ ಪೂರಕವಾಗಿ ಹಲವಾರು ವಿಭಿನ್ನ ಆಯಾಮಗಳನ್ನೊಳಗೊಂಡ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಾ ಬಂದಿದೆ. ೧೯೯೨ರ ಜನವರಿಯಲ್ಲಿ ಮಹಿಳಾ ರಾಷ್ಟ್ರೀಯ ಆಯೋಗವನ್ನು ಸ್ಥಾಪಿಸುವ ಮೂಲಕ ಮಹಿಳೆಯರ ಹಿತಾಸಕ್ತಿಯನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಆಯೋಗದ ವ್ಯಾಪ್ತಿಗೆ ತರಲಾಗಿದೆ.

- ಹೆಣ್ಣುಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಹೆಣ್ಣುಮಕ್ಕಳ ರಾಷ್ಟ್ರೀಯ ಕ್ರಿಯಾ ಯೋಜನೆ (೧೯೯೧-೨೦೦೦)ರ ಅಡಿಯಲ್ಲಿ ಹೆಣ್ಣುಮಕ್ಕಳ ಸಮಗ್ರ ಅಭಿವೃದ್ಧಿಗೆ ದೊರೆತಿದೆ.
- ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಗಾಗಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಇಲಾಖೆಯನ್ನು ಸ್ಥಾಪಿಸಿದ್ದು, ಸರ್ಕಾರವು ಈ ಇಲಾಖೆಯ ಮೂಲಕ ಮಹಿಳೆಯರ ಅಭಿವೃದ್ಧಿಗಾಗಿ ಸ್ತ್ರೀಶಕ್ತಿ ಯೋಜನೆ, ಸಾಂತ್ವಾ ಯೋಜನೆ, ಗ್ರಾಮಾಂತರ ಪ್ರದೇಶದ ಹೆಣ್ಣುಮಕ್ಕಳ ಹಾಜರಾತಿ, ಶಿಷ್ಯವೇತನ, ವೃತ್ತಿ ತರಬೇತಿ ಪಡೆಯುವ ಮಹಿಳೆಯರಿಗೆ ಆರ್ಥಿಕ ಸಹಾಯ, ಮಹಿಳಾ ಕಾನೂನು ಪದವೀದರರಿಗೆ ಕಾನೂನು ಸಹಾಯ, ಹೆಣ್ಣು ಮಕ್ಕಳಿಗೆ ವಸತಿ ನಿಯಮಗಳು, ಸ್ವಶಕ್ತಿ ಯೋಜನೆಗಳು, ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ, ವಿಧವಾ ವೇತನದಂತಹ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ.
- ಜಿಲ್ಲಾ ಪಂಚಾಯತಿ ಮೂಲಕ ನಮ್ಮ ಮಗಳು ನಮ್ಮ ಶಕ್ತಿ ಯೋಜನೆ, ಸಮಗ್ರ ಶಿಶು ಅಭಿವೃದ್ಧಿ ಯೋಜನೆ, ಗೃಹ ಕೈಗಾರಿಕೆಗಳಲ್ಲಿ ತರಬೇತಿ ನೀಡುವ ಮಹಿಳಾ ಸಮಾಜ, ಮಹಿಳಾ ಮಂಡಳಿಗಳಿಗೆ ಅನುದಾನ, ಶಿಶುಪಾಲನ ಕೇಂದ್ರಗಳನ್ನು ಸ್ಥಾಪಿಸುವುದರ ಮೂಲಕ ಮಹಿಳೆಯರ ಅಭಿವೃದ್ಧಿಪರ ಹಿತಾಸಕ್ತಿಗಳನ್ನು ರಕ್ಷಿಸಲಾಗುತ್ತಿದೆ.

- ಕೇಂದ್ರ ಸರ್ಕಾರದ ಪ್ರಾಯೋಜಕತ್ವದಲ್ಲಿ ಉದ್ಯೋಗಸ್ಥ ಮಹಿಳೆಯರಿಗೆ ವಸತಿ ಗೃಹಗಳ ನಿರ್ಮಾಣ ಯೋಜನೆ, ರಾಷ್ಟ್ರೀಯ ಹೆರಿಗೆ ಭತ್ಯೆ ಯೋಜನೆ, ಬಾಲಿಕಾ ಸಮೃದ್ಧಿ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.
- ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಮಹಿಳೆಯರಿಗೆ ಉದ್ಯೋಗ ಯೋಜನೆ, ಮಹಿಳಾ ತರಬೇತಿ ಯೋಜನೆ, ಮಾರುಕಟ್ಟೆ ಯೋಜನೆ, ಮಹಿಳಾ ಸ್ವಉದ್ಯೋಗ ಮಾರ್ಗದರ್ಶಿ ಕೇಂದ್ರ, ದೇವದಾಸಿ ಪುನರ್ವಸತಿ ಯೋಜನೆ, ಗ್ರಾಮೀಣ ಮಹಿಳೆಯರ ಅಭಿವೃದ್ಧಿ ಮತ್ತು ಅಧಿಕಾರ ನೀಡಿಕೆ ಯೋಜನೆಗಳನ್ನು ರೂಪಿಸುವ ಮೂಲಕ ಮಹಿಳೆಯರನ್ನು ಆರ್ಥಿಕವಾಗಿ ಸಬಲಗೊಳಿಸುವ ಪ್ರಯತ್ನವನ್ನು ನಡೆಸಲಾಗಿದೆ.

ಈ ಲೇಖನದಲ್ಲಿ ಸಂವಿಧಾನಾತ್ಮಕವಾಗಿ ಮಹಿಳೆಯರಿಗೆ ಇರುವ ಕಾನೂನಾತ್ಮಕ ರಕ್ಷಣೆಗಳು ಯಾವುವು ಹಾಗೂ ಅದಕ್ಕೆ ಪೂರಕವಾಗಿ ಕಾಲದಿಂದ ಕಾಲಕ್ಕೆ ಯಾವ ರೀತಿಯ ಕಾನೂನುಗಳನ್ನು ರಚಿಸಲಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಈ ಕಾನೂನುಗಳ ಅನ್ವಯ ಮಹಿಳೆಯರ ಅಭಿವೃದ್ಧಿಗಾಗಿ ಯಾವ ರೀತಿಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ತಿಳಿದ ನಂತರದಲ್ಲಿ ಈ ಎಲ್ಲಾ ಕಾನೂನುಗಳು ಮತ್ತು ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಫಲಕಾರಿಯಾಗಿವೆ ಎಂಬುದನ್ನು ಅವಲೋಕಿಸಲಾಗಿದೆ. ಇವುಗಳ ಪ್ರತಿಫಲ ಸಂಬಂಧಿತ ಪ್ರತಿಕ್ರಿಯೆ ಸ್ವಲ್ಪಮಟ್ಟಿಗೆ ನಿರಾಶಾದಾಯಕವಾಗಿಯೇ ಕಂಡುಬರುತ್ತದೆ. ಅಂದರೆ ಈಗ ಲಭ್ಯವಿರುವ ಮಹಿಳಾ ಅಭಿವೃದ್ಧಿ ಕಾನೂನುಗಳಿಂದಾಗಲಿ ಅಥವಾ ಅಭಿವೃದ್ಧಿ ಯೋಜನೆಗಳಿಂದಾಗಲಿ ನಿರೀಕ್ಷಿತ ಮಟ್ಟದಲ್ಲಿ ಮಹಿಳೆಯರ ಅಭಿವೃದ್ಧಿ ಅಥವಾ ಸಬಲೀಕರಣ ಆಗದೆ ಇರುವುದು ಕಂಡುಬರುತ್ತದೆ. ಏಕೆಂದರೆ ಇಂದಿಗೂ ಸಹ ಭಾರತೀಯ ಸಾಮಾಜಿಕ ರಚನೆ ಪುರುಷಪ್ರಧಾನ ವ್ಯವಸ್ಥೆಯಾಗಿಯೇ ಮುಂದುವರೆದಿರುವ ಜೊತೆಗೆ ಸಮಾಜದಲ್ಲಿನ ರೂಢಿ, ಸಂಪ್ರದಾಯ ಆಚರಣೆಗಳು ಮಹಿಳಾ ಸಬಲೀಕರಣ ಪ್ರಕ್ರಿಯೆಗೆ ಒಂದು ದೊಡ್ಡ ಸವಾಲಾಗಿಯೇ ಪರಿಣಮಿಸಿವೆ. ಏಕೆಂದರೆ ಯಾವುದೇ ಒಬ್ಬ ಮಹಿಳೆ ಅವರ ಸ್ವ-ಇಚ್ಛೆಯಂತೆ ಯಾವುದೇ ಒಂದು ಅಭಿವೃದ್ಧಿಪರ ಚಟುವಟಿಕೆಗಳಲ್ಲಿ ಭಾಗವಹಿಸಲು ಸಮಾಜದಲ್ಲಿ ಒಂದಲ್ಲ ಒಂದು ರೀತಿಯ ಸಾಂಪ್ರದಾಯಕ ಕಟ್ಟಳೆಗಳನ್ನು ಎದುರಿಸಲಾಗದೆ ಹಿಂದೆ ಸರಿಯುವುದು ಒಂದು ಸಾಮಾನ್ಯ ಸಂಗತಿಯಾಗಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಮಹಿಳಾ ಸಬಲೀಕರಣ ಪ್ರಕ್ರಿಯೆಯು ಕೇವಲ ಸಂವಿಧಾನಾತ್ಮಕವಾಗಿ ಅಥವಾ ಶಾಸನಾತ್ಮಕ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಮಾತ್ರ ಸಾಧಿಸಲು ಸಾಧ್ಯವಾಗುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇಂದು ಸರ್ಕಾರ ಕೈಗೊಂಡಿರುವ ಶಾಸನಾತ್ಮಕ ಕ್ರಮಗಳು ಯಶಸ್ವಿಯಾಗಬೇಕಾದರೆ ಮೊದಲು ಹೆಣ್ಣಿನ ಬಗ್ಗೆ ಇರುವ ದೃಷ್ಟಿಕೋನ ನಮ್ಮ ಸಮಾಜದಲ್ಲಿ ಸಾಕಷ್ಟು ಬದಲಾವಣೆಯಾಗಬೇಕಾದ ಅಗತ್ಯತೆ ಇದ್ದು ಅದು ಸಾಧ್ಯವಾಗದೇ ಮಹಿಳೆಯರ ಪರಿಪೂರ್ಣ ಸಬಲೀಕರಣವನ್ನು ಊಹಿಸುವುದು ಕೂಡಾ ಸಾಧ್ಯವಿಲ್ಲ ಎಂದು ಹೇಳಬಹುದಾಗಿದೆ.

# ಲಿಂಗೀಯ ಸಂಬಂಧಗಳು ಮತ್ತು ಸಮುದಾಯ ಚರ್ಚೆಗೆ ದಂಥೆ ಮಾಡುವವರ ಹಿನ್ನೆಲೆಯಲ್ಲಿ ಕೆಲವಿಚಾರಗಳು

ಮನೋರಂಜಿನಿ

**ಈ** ಪ್ರಬಂಧವು 'ಲಿಂಗ ಮತ್ತು ಸಮುದಾಯ'ದಲ್ಲಿ 'ವೇಶ್ಯಾವೃತ್ತಿ'ಯಲ್ಲಿರುವ ಮಹಿಳೆಯರನ್ನು ಸಮುದಾಯವೆಂದು ಪರಿಗಣಿಸಬಹುದೇ? ಪರಿಗಣಿಸುವುದಾದರೆ ಯಾವ ಮಾನದಂಡಗಳು ಈ ಸಮುದಾಯದ ಪರಿಕಲ್ಪನೆಯನ್ನು ಅಳತೆ ಮಾಡುತ್ತವೆ? ಲಿಂಗವ್ಯವಸ್ಥೆಯಲ್ಲಿ ಈ ಸಮುದಾಯದೊಳಗಿನ ವಿಚಾರಗಳು ಹೇಗೆ ಬೇರೆ ಸಮುದಾಯದೊಂದಿಗೆ ಸ್ಪಂದಿಸುತ್ತವೆ? ಘರ್ಷಣೆ ಮತ್ತು ಸ್ಪರ್ಧೆಯನ್ನುಂಟು ಮಾಡುತ್ತವೆ ಎಂಬ ಅಂಶಗಳನ್ನು ಈ ಪತ್ರಿಕೆಯು ಒಳಗೊಂಡಿದೆ.

೧. 'ಸಮುದಾಯ'ವನ್ನು ನಾವು ಸಾಮಾನ್ಯ ವ್ಯಾಖ್ಯಾನದಲ್ಲಿ ನೋಡುವುದಾದರೆ, ಒಂದೇ ಕಡೆ ವಾಸಿಸುವ ಒಂದೇ ಅಭಿರುಚಿ, ಉದ್ದೇಶ, ನಂಬಿಕೆ, ಸಂಪನ್ಮೂಲ, ಪ್ರಾಮುಖ್ಯತೆ, ಅವಶ್ಯಕತೆ ಮತ್ತು ಸಂಕಷ್ಟಗಳನ್ನು ಅನುಭವಿಸುವ ಜನರ ಗುಂಪನ್ನು ಸಮುದಾಯವೆನ್ನಬಹುದು. ಇದು ಲಿಂಗ, ವೃತ್ತಿ, ವರ್ಗ, ಜಾತಿ, ಧರ್ಮ, ವಾಸಿಸುವ ಸ್ಥಳ, ಭಾಷೆಯನ್ನು ಆಧರಿಸಿಯೂ ರೂಪುಗೊಳ್ಳುತ್ತದೆ. ಸಮುದಾಯವು ಬಹಳ ದೊಡ್ಡ ಕಲ್ಪನೆಯಾಗಿದ್ದು, ಇದು ಸಾಮಾಜಿಕ ವಿಚಾರಗಳ ಐಕ್ಯತೆಯನ್ನು ಒಳಗೊಂಡಿದೆ (ನೇಸ್ ಬೇಟ್ ೧೯೬೭).[೧]

ಸಮಾಜದ ಇತಿಹಾಸದಲ್ಲಿ ಸಮುದಾಯವು ಕೆಲವು ಹಂತಗಳಲ್ಲಿ ಸಾಮಾಜಿಕ ಸಂಬಂಧಗಳನ್ನು ನಿರ್ದೇಶಿಸುವ ಚೌಕಟ್ಟೆಂದು ಗಸ್ ಪಿಲ್ಡ್ ಹೇಳುತ್ತಾರೆ.[೨] ನನ್ನ ಪ್ರಕಾರ ಪ್ರತಿಯೊಂದು ಸಮುದಾಯವು ಸಾಮಾಜಿಕ ವಿಚಾರಗಳ ವ್ಯವಸ್ಥೆಯಿಂದ ಹುಟ್ಟಿಕೊಂಡಿರುತ್ತದೆ. ಪ್ರತಿಯೊಂದು ಸಮುದಾಯದ ರಚನೆಯಲ್ಲಿ ಸಮಾಜದ ವಿಚಾರಗಳು ಸಮುದಾಯಕ್ಕನುಗುಣವಾಗಿ ರೂಪುಗೊಂಡಿರುತ್ತವೆ. 'ಸಮಾಜ' ಮತ್ತು 'ಸಮುದಾಯ'ವನ್ನು ಎರಡು ಭಾಗಗಳಾಗಿ ವಿಂಗಡಿಸಿ, ಸಮಾಜಶಾಸ್ತ್ರಜ್ಞರು ಈ ವಿಷಯಗಳ ಮೇಲೆ ಬಹಳ ಸಂಶೋಧನೆಗಳನ್ನು ಮತ್ತು ಚರ್ಚೆಗಳನ್ನು ಮಾಡಿ 'ಮಾನವ ಸಂಘಟನೆ' ಮತ್ತು 'ಸಾಮಾಜಿಕ ಬದಲಾವಣೆ' ಎಂಬ ಎರಡು ಅಂಶಗಳನ್ನು ಕೇಂದ್ರಬಿಂದುಗಳಾಗಿ ಸಮುದಾಯದ ಚೌಕಟ್ಟನ್ನು ನಿರ್ಮಿಸುತ್ತವೆ. ವರ್ತಮಾನದಲ್ಲಿ ಅವನ್ನು ಅರ್ಥಮಾಡಿಕೊಂಡು ಭೂತಕಾಲದಲ್ಲಿ ಅವು ಯಾವ ರೀತಿ ಪರಿಣಾಮ ಬೀರುತ್ತವೆ ಮತ್ತು ಭವಿಷ್ಯತ್ತಿನಲ್ಲಿ ಅವುಗಳ ಕಲ್ಪನೆಗಳು ಹೇಗಿರಬಹುದೆಂದು

ಮತ್ತು ಅವುಗಳ ಪರಿಣಾಮ ಎಂತಹದಾಗಿರುತ್ತದೆಂದು ಸಮಾಜಶಾಸ್ತ್ರಜ್ಞರು ಸಮುದಾಯದ ಪರಿಕಲ್ಪನೆಯಲ್ಲಿ ಚರ್ಚಿಸಿದ್ದಾರೆ.[೬] ಈ ಪ್ರಕಾರ ನಾನು ಹೇಳುವುದಾದರೆ ಸಮುದಾಯದ ಪರಿಕಲ್ಪನೆಯು ತುಂಬ ವಿಶಾಲವಾಗಿದ್ದರೂ, ಅದರ ಪರಿಮಿತಿಯಲ್ಲಿ ಅದು ಪುನಃ ಚಿಕ್ಕ ಚಿಕ್ಕ ಸಮುದಾಯಗಳ ಉಗಮಕ್ಕೆ ದಾರಿ ಮಾಡಿಕೊಡುತ್ತದೆ. ಸಮುದಾಯದ ಅರ್ಥದಲ್ಲಿ 'ಜನರ ಸಂಘಟನೆ', 'ಸಾಮಾಜಿಕ ವಿಚಾರ' ಮತ್ತು 'ಸಮಾಜದೊಂದಿಗಿನ ಸಂಬಂಧ' ಅವು ಸಾಮಾಜಿಕ ಪರಿವರ್ತನೆಯಲ್ಲಿ ಬೀರುವ ಪ್ರಭಾವ ಎಂತಹದ್ದು ಎಂಬುವುದು ಮುಖ್ಯವಾಗಿರುತ್ತದೆ. ಸಮುದಾಯದ ಪರಿಕಲ್ಪನೆಯಲ್ಲಿ ಇವು ಬಹುಮುಖ್ಯವಾಗಿರುತ್ತದೆ.

ನಾವು ಮಹಿಳಾ ಸಮುದಾಯವನ್ನು ದೊಡ್ಡ ಸಮುದಾಯವೆಂದು ಹೇಳುವಾಗ ಲಿಂಗ ಆಧರಿಸಿ, ಎಲ್ಲ ಮಹಿಳೆಯರು ಆ ಸಮುದಾಯದಲ್ಲಿ ಸೇರಿರುತ್ತಾರೆ. ಈ ದೊಡ್ಡ ಸಮುದಾಯ ವನ್ನು ಪುನಃ ಚಿಕ್ಕಚಿಕ್ಕ ಸಮುದಾಯಗಳಾಗಿ ವಿಂಗಡಿಸಿದಾಗ ದಲಿತ ಮಹಿಳಾ ಸಮುದಾಯ, ಮುಸ್ಲಿಂ ಮಹಿಳಾ ಸಮುದಾಯ, ಕೂಲಿ ಕೆಲಸ ಮಾಡುವ ಮಹಿಳೆಯರು ಸಮುದಾಯವೆಂದು ಪುನಃ ಈ ರೀತಿಯ ಸಮುದಾಯಗಳು ನಿರ್ಮಾಣವಾಗುತ್ತವೆ. ಈ ಎಲ್ಲ ಸಮುದಾಯಗಳು ವಿಭಿನ್ನ ರೀತಿಯ ವಿಚಾರಗಳಿಂದ ಬೇರೆ ಬೇರೆ ಸಮುದಾಯಗಳು ಸೃಷ್ಟಿಯಾದರೆ, ಒಂದು ಸಮುದಾಯದ ಸೃಷ್ಟಿಗೆ ಒಂದೇ ವಿಚಾರವಿರುವ ಜನರ ಗುಂಪು ಮತ್ತು ಅದರ ಆ ವಿಚಾರದಲ್ಲಿನ ಅವರ ಒಂದೇ ರೀತಿಯ ಅನುಭವ ಮತ್ತು ಒಗ್ಗಟ್ಟು ತುಂಬ ಮುಖ್ಯ ವೆನಿಸುತ್ತದೆ. ಈ ರೀತಿ ಬೇರೆ ಬೇರೆ ಸಮುದಾಯಗಳಿಗೆ ಇದನ್ನು ಹೋಲಿಸಿ ನೋಡಿದಾಗ ಇವು ಬೇರೆ ಯಾವ ಸಮುದಾಯಕ್ಕೂ ಹೋಲದಂತೆ ಆಚಾರ-ವಿಚಾರಗಳನ್ನು ಮತ್ತು ಹಿನ್ನೆಲೆಗಳನ್ನು ತನ್ನ ಚೌಕಟ್ಟಿನಲ್ಲಿ ರೂಪಿಸಿಕೊಂಡು ತನ್ನ ಅನನ್ಯತೆಯನ್ನು (ಗುರುತನ್ನು) ಪಡೆದಿರುತ್ತದೆ. ಗಸ್ ಫಿಲ್ಡ್ ಹೇಳುವಂತೆ ಈ ವಿಚಾರಗಳು ಸಾಮಾಜಿಕ ಬದಲಾವಣೆಯಲ್ಲಿ ಮಹತ್ತರ ಪರಿಣಾಮವನ್ನು ಬೀರುತ್ತವೆ. ಪ್ರತಿಯೊಂದು ಸಮುದಾಯವನ್ನು ನಾವು ಗುರುತಿಸು ವಾಗ ಅದರ ಹಿನ್ನೆಲೆ ಮತ್ತು ಆ ಸಮುದಾಯದ ಆಚಾರ ಮತ್ತು ವಿಚಾರಗಳು ಸಮಾಜದಲ್ಲಿ ಮುಖ್ಯವೆನಿಸುತ್ತದೆ ಮತ್ತು ಅದು ಬೇರೆ ಯಾವ ಸಮುದಾಯವನ್ನು ಹೋಲುವಂತಿರುವುದಿಲ್ಲ.

ಈ ರೀತಿಯಾಗಿ, ವೇಶ್ಯಾವೃತ್ತಿಯಲ್ಲಿರುವ ಮಹಿಳೆಯರ ಸಮುದಾಯವನ್ನು ನಾವು ಸಮುದಾಯವೆಂದು ಗುರುತಿಸುವಾಗ, ಅದರ ಹಿನ್ನೆಲೆ ಮತ್ತು ಅದರ ಆಚಾರ-ವಿಚಾರಗಳಲ್ಲಿ ಆದಂತಹ ಬದಲಾವಣೆಯನ್ನು ಮತ್ತು ಅವು ಸಮಾಜದ ಮೇಲೆ ಬೀರಿದ ಪರಿಣಾಮವನ್ನು ಅರಿಯುವುದು ಅವಶ್ಯವೆನಿಸುತ್ತದೆ.

೨. ಪುರಾತನ ಭಾರತ ಇತಿಹಾಸವನ್ನು ಗಮನಿಸುವಾಗ ಅಂದಿನಿಂದ ಇಂದಿನವರೆಗೂ ಲೈಂಗಿಕ ಸುಖಕ್ಕೆ ಪುರುಷಪ್ರಧಾನ ಸಮಾಜವು ಮಹತ್ವದ ಆದ್ಯತೆಯನ್ನು ನೀಡಿರುತ್ತದೆ. ಅದಕ್ಕಾಗಿಯೇ ಅದು ಕೆಲವು ತಂತ್ರಗಳನ್ನು ಪದ್ಧತಿಗಳನ್ನಾಗಿ ಮಾಡಿ ಮಹಿಳೆಯ ಲೈಂಗಿಕ ಭಾವನೆಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುತ್ತದೆ. 'ಪರಲಿಂಗ' ಲೈಂಗಿಕತೆಗೆ ಮಹತ್ವ ನೀಡುವುದರ ಮೂಲಕ ಮಹಿಳೆಯನ್ನು ಸಂಪೂರ್ಣವಾಗಿ ತನ್ನ ಅಧೀನದಲ್ಲಿರಿಸಿಕೊಂಡಿದೆ.

ಮಹಿಳೆ ಸುಖವನ್ನು ಮಾತ್ರ ನೀಡುವ ಭೋಗದ ವಸ್ತುವಾಗಿ ನಿರ್ಣಯಿಸುತ್ತದೆ. ಪುರುಷ ತನ್ನ ಹೆಂಡತಿಯನ್ನು ಮಾತ್ರವಲ್ಲದೆ ಬೇರೆ ಮಹಿಳೆಯರಿಂದಲೂ ಆ ಸುಖವನ್ನು ತನ್ನದಾಗಿಸಿಕೊಳ್ಳಲು ಹಲವು ತಂತ್ರಗಳ ಮೂಲಕ ಕೆಲವು ಪದ್ಧತಿಗಳನ್ನು ವ್ಯವಸ್ಥೆಯನ್ನಾಗಿ ಮಾಡಿ, ಆ ವ್ಯವಸ್ಥೆಯನ್ನು ಕೆಳಜಾತಿ ಮತ್ತು ಕೆಳವರ್ಗದ ಮಹಿಳೆಯರಿಗೆ ಕಡ್ಡಾಯಗೊಳಿಸಿದೆ.

ನಾವು ಪುರಾತನ ವೇದಗಳಲ್ಲಿ ಇದರ ಬಗ್ಗೆ ಅಷ್ಟಾಗಿ ಕಾಣದಿದ್ದರು, 'ಮನು'ವಿನ ಧರ್ಮಶಾಸ್ತ್ರದಲ್ಲಿ ಮದುವೆಯ ವಿಚಾರಗಳನ್ನು ಗಮನಿಸುವಾಗ 'ಶೂದ್ರನಿಗೆ ಶೂದ್ರಳೇ ಹೆಂಡತಿಯಾಗಬೇಕು. ವೈಶ್ಯನಿಗೆ ವೈಶ್ಯ ಜಾತಿಯ ಹಾಗೂ ಶೂದ್ರ ಜಾತಿಯ ಹೆಣ್ಣಾಗಬಹುದು. ಕ್ಷತ್ರಿಯನಿಗೆ ಕ್ಷತ್ರಿಯ ಜಾತಿಯವಳು, ವೈಶ್ಯ ಜಾತಿಯವಳು ಹಾಗೂ ಶೂದ್ರಳು ಹೆಂಡತಿಯಾಗ ಬಹುದು. ಬ್ರಾಹ್ಮಣನಿಗೆ ಬ್ರಾಹ್ಮಣ ಸ್ತ್ರೀಯೂ, ಕ್ಷತ್ರಿಯಳೂ, ವೈಶ್ಯಳೂ, ಶೂದ್ರಳೂ ಹೆಂಡತಿಯಾಗಬಹುದು.'[೪] ಹಾಗೆಯೆ ಮುಂದುವರೆದು ಅವರು ಹೇಳುವುದೇನೆಂದರೆ, 'ಎಂಥ ಅನಿವಾರ್ಯವಾದ ಸಂದರ್ಭದಲ್ಲೂ ಬ್ರಾಹ್ಮಣ ಹಾಗೂ ಕ್ಷತ್ರಿಯ ವರಗಳು (ಗಂಡುಗಳು) ಶೂದ್ರ ಸ್ತ್ರೀಯನ್ನು ಪ್ರಥಮ ಹೆಂಡತಿ ಎಂದು ವಿವಾಹ ಮಾಡಿಕೊಳ್ಳಬಾರದು.'[೫] ಅವನ ವಿಚಾರಗಳನ್ನು ಗಮನಿಸುವಾಗ, ಶೂದ್ರ ಮಹಿಳೆಯನ್ನು ಎಲ್ಲ ವರ್ಗದ ಪುರುಷನು ಅನುಭವಿಸ ಬಹುದು ಆದರೆ ಆಕೆಯನ್ನು ಧರ್ಮ ಪತ್ನಿಯನ್ನಾಗಿ ಶೂದ್ರನ ಹೊರತು ಬೇರೆ ಯಾರು ಸ್ವೀಕರಿಸಬಾರದು ಎಂಬ ನಿಯಮವನ್ನು ಸ್ಪಷ್ಟಪಡುತ್ತದೆ. ಇದು ಅವಳನ್ನು 'ವಿವಾಹೇತರ' ಸಂಬಂಧಗಳಾದ ಉಪಪತ್ನಿ, ಸೂಳೆ, ವೇಶ್ಯೆ, ದೇವದಾಸಿ ಮತ್ತು ನರ್ತಕಿಯರ ಪಾತ್ರಗಳಲ್ಲಿ ಅವರನ್ನು ಸಮಾಜ ಗುರ್ತಿಸುವಂತೆ ಮಾಡಿತು. ಈ ವ್ಯವಸ್ಥೆಯು ಅರಮನೆಗಳಲ್ಲಿ ನರ್ತಕಿಯ ರನ್ನು ಹಿಂದೂ ದೇವಾಲಯಗಳಲ್ಲಿ ದೇವದಾಸಿಯರನ್ನು ಮತ್ತು ಕೆಲವು ಪ್ರಮುಖ ಮತ್ತು ಶ್ರೀಮಂತರ ಬೀದಿಗಳಲ್ಲಿ ಸೂಳೆಗಾರಿಕೆಯನ್ನು ಪ್ರೋತ್ಸಾಹಿಸುವ ರೂಢಿಯನ್ನು ಮಾಡಿ ಕೊಂಡಿತು. ಆಗೀನ ಕಾಲದಲ್ಲಿ ಈ ಪದ್ಧತಿಗಳು ಗೌರವಯುತ ಸ್ಥಾನಮಾನಗಳನ್ನು ಪಡೆದಿದ್ದವು ಎಂಬ ಅಂಶಗಳನ್ನು ನಾವು ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಕಾಣುತ್ತೇವೆ.

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವೇಶ್ಯೆವಾಟಿಕೆಯಲ್ಲಿರುವ ಮಹಿಳೆಯರನ್ನು ಮೂರು ವರ್ಗಗಳಾಗಿ ವಿಂಗಡಿಸಲಾಗಿತ್ತೆಂದು ತಿಳಿಸುತ್ತಾನೆ. ಆ ವರ್ಗಗಳು 'ರೂಪಜಿವ, ಕುಂಭದಾಸಿ ಮತ್ತು ಗಣಿಕವೆಂದು.'[೬]

ಕುಂಭ - ಕೆಳವರ್ಗದ ಮಹಿಳೆಯಾಗಿದ್ದು ತಾನು ಕೆಲಸ ಮಾಡುವಮನೆಯ ಯಜಮಾನನಿಗೆ ಲೈಂಗಿಕ ಸೇವೆಯನ್ನು ಪೂರೈಸುತ್ತಿದ್ದಳು. ಇದು ಒತ್ತಾಯ ಪೂರ್ವಕವಾಗಿ ಕೂಡ ನಡೆ ಯುತ್ತಿತ್ತು.

ರೂಪಜಿವ - ಎರಡನೇ ವರ್ಗದ ಮಹಿಳೆ ಇವಳು ಮಧ್ಯಮ ವರ್ಗದವಳಾಗಿದ್ದು ಇವಳು ತನ್ನ ಗಿರಾಕಿಗಳನ್ನು ಲೈಂಗಿಕವಾಗಿ ಆಕರ್ಷಿಸುವ ಬಗೆ ಹಲವಾರು ರೀತಿಯಾಗಿರುತ್ತದೆ. ಈ ವರ್ಗದ ಜನ ಗಂಡನ ಗಮನಕ್ಕೆ ಬಾರದೆ ವೇಶ್ಯಾವೃತ್ತಿ ಕೆಲವರು ಮಾಡಿದರೆ ಇನ್ನು ಕೆಲವರ ಗಂಡಂದಿರೇ ಅವರ ತಲೆ ಹಿಡಿದು ಅವಳ ಗಳಿಕೆಯ ಮೇಲೆ ಬದುಕುತ್ತಿದ್ದರು.

ಗಣಿಕದಾಸಿಯರು ಇವರು ಮೊದಲನೇ ವರ್ಗದ ಶ್ರೀಮಂತ ಮಹಿಳೆಯರು ಇವರಿಗೆ ಕೌಟಿಲ್ಯನ ಪ್ರಕಾರ ೬೪ ಕಲೆಗಳು ಗೊತ್ತಿರುತ್ತಿದ್ದವು, ಕಾನೂನು ಇವರಿಗೆ ಬೆಂಬಲ ವಾಗಿರುತ್ತಿತ್ತು. ಸರ್ಕಾರದಲ್ಲಿ ಇದನ್ನು ಹುದ್ದೆಯಾಗಿ ಪರಿಗಣಿಸಿ ಇವರಿಗೆ ತಿಂಗಳಿಗೆ ೧,೦೦೦ ರೂ. ಸಂಬಳವನ್ನು ಕೊಡುತ್ತಿದರು.[೬] ಇವರನ್ನು ಯಾರಾದರೂ ಅವಮಾನಿಸಿದರೂ ಅವರಿಗೆ ೧೦೦ ಪೌನ್ಸ್ ದಂಡ ವಿಧಿಸುತ್ತಿದ್ದರು. ಈ ವರ್ಗದ ಜನ ರಾಜ್ಯಕ್ಕೆ ತೆರಿಗೆಯನ್ನು ಕೊಡುತ್ತಿದ್ದರು ಮತ್ತು ಈ ವರ್ಗದ ಜನ ಗೌರವದಿಂದ ಬದುಕುತ್ತಿದ್ದರು. ವೇಶ್ಯವಾಟಿಕೆಯು ಆಗ ನೈತಿಕ ಧೋರಣೆಯಲ್ಲಿಯೆ ಈ ಪದ್ಧತಿ ಮುಂದುವರೆದಿತ್ತು. ಆದರೂ ಆ ವೇಳೆಯಲ್ಲಿ ಕೂಡ ಈ ಪದ್ಧತಿಯಲ್ಲಿಯು ಆರ್ಥಿಕವಾಗಿ ದುರ್ಬಲರನ್ನು ಮತ್ತು ಕೆಳಜಾತಿಯ ಮಹಿಳೆಯರನ್ನು ಮಾತ್ರ ಈ ಪದ್ಧತಿಯಲ್ಲಿ ಅಳವಡಿಸಿಕೊಂಡಿತು.

'ಮೊಗಲ್ ಅರಸನ ಕಾಲದಲ್ಲಿ, ಅಕ್ಬರ ಮತ್ತು ಔರಂಗಜೇಬ್‌ನ್ನು ಹೊರತುಪಡಿಸಿ ಉಳಿದವರು ಆ ಪದ್ಧತಿಯನ್ನು ಒಂದು 'ಸಂಘವೆಂದು' ಪರಿಗಣಿಸಿದ್ದರು. ಆದರೆ ಇವರ ಆಳ್ವಿಕೆಯಲ್ಲಿ ಇದು 'ನೈತಿಕತೆಯ' ಚೌಕ್ಕಟ್ಟಿನಿಂದ 'ಅನೈತಿಕತೆಗೆ' ಸಂಪೂರ್ಣವಾಗಿ ಬದಲಾಯಿತು. ಈ ಬದಲಾವಣೆಯು ಈ ವರ್ಗದ ಜನರ ಜೀವನದ ಮೇಲೆ ತುಂಬ ದುಷ್ಪರಿಣಾಮವನ್ನು ಬೀರಿತು. ಅದಕ್ಕಾಗಿ ಅಕ್ಬರನು ಇದನ್ನು ಕ್ರಮಬದ್ಧಗೊಳಿಸಿ ಅದರಲ್ಲಿ ಸುಧಾರಣೆ ತರಬೇಕೆಂದು ಪ್ರಯತ್ನಿಸಿದನು. ಆದರೆ, ಔರಂಗಜೇಬನು ವೇಶ್ಯವಾಟಿಕೆಯನ್ನು ರದ್ದುಪಡಿಸುವುದು ಮಾತ್ರವಲ್ಲದೆ ಅವರು ಮದುವೆ ಮಾಡಿಕೊಳ್ಳಲೇಬೇಕು ಇಲ್ಲವಾದರೆ, ತನ್ನ ಆಸ್ಥಾನವನ್ನು ಬಿಟ್ಟು ಹೋಗಬೇಕೆಂದು ಒತ್ತಾಯಪಡಿಸಿದನು.[೭] ಮೊಗಲರ ಕಾಲದಲ್ಲಿ ಇದು ನೈತಿಕತೆಯ ಆಧಾರದ ಮೇಲೆ ಕೆಲವು ನಿರ್ಬಂಧನೆಗಳನ್ನು ಹೊರಿಸಿ ಆ ವ್ಯವಸ್ಥೆಯಿಂದ ಮಹಿಳೆಯರನ್ನು ಹೊರಗೆ ತರಬೇಕೆಂದು ಪ್ರಯತ್ನ ಮಾಡಿದರೂ ಅದು ಸಾಧ್ಯವಾಗದೆ, ಅದಕ್ಕೆ ಬದಲಾಗಿ ಅದು ಬೇರೆ ಸ್ವರೂಪವನ್ನು ಹೊಂದುವುದರ ಮೂಲಕ ಅವರ ಸ್ಥಿತಿ ತೀರ ಸಂಕಷ್ಟಗೊಳಗಾಯಿತು. ಬ್ರಿಟಿಷರ ವಸಾಹತುಶಾಹಿಯಲ್ಲಿ ಈ ಪದ್ಧತಿಯನ್ನು ಅನೈತಿಕತೆಯ ಆಧಾರದ ಮೇಲೆ ಅದನ್ನು ಅಪರಾಧವೆಂದು ಪರಿಗಣಿಸಿದರು. ಅದನ್ನು ಕಾನೂನಿನಲ್ಲಿ ಕೂಡ ಅಪರಾಧವೆಂದು ಪರಿಗಣಿಸಲಾಯಿತು. ಇದು ಸಮಾಜದಲ್ಲಿ ಅವರನ್ನು ಅಪಾರಧಿ ಗಳಂತೆ ಗುರುತಿಸುವಂತ ಪ್ರಕ್ರಿಯೆಯು ಬೆಳೆದು ಬಂತು. ಆದರೂ ಅವರು ತಮ್ಮ ಸೇವೆಯಲ್ಲಿ ರುವ ಬ್ರಿಟಿಷ್ ಮಿಲಿಟರಿ ಪಡೆಗಳಿಗೆ ಭಾರತೀಯ ಮಹಿಳೆಯರು ಲೈಂಗಿಕ ಸೇವೆಯನ್ನು ಸಲ್ಲಿಸುವಂತಹ ಪದ್ಧತಿಯನ್ನು ಜಾರಿಗೊಳಿಸಲಾಯಿತು. ಬ್ರಿಟಿಷ್ ಕಾಮಂಡರ್ ಇನ್ ಚೀಫ್ ಅಧಿಕಾರಿ ಲಾರ್ಡ್ ರಾರ್ಬಟ್‌ರವರು ೧೮೮೬ರಲ್ಲಿ ಬ್ರಿಟಿಷ್ ಮಿಲಿಟರಿ ಪ್ರಾಂತೀಯ ಪಡೆಗಳ ಮಾರುಕಟ್ಟೆಗಳಲ್ಲಿ ಆಕರ್ಷಣೆಯ ಮಹಿಳೆಯರು ಹಣಕ್ಕಾಗಿ ಲೈಂಗಿಕ ಸೇವೆಯನ್ನು ನೀಡಬೇಕೆಂದು ಆದೇಶಿಸಿದನು.[೮] ಇದರಿಂದ ಲೈಂಗಿಕತೆಯು ವ್ಯಾಪಾರದ ಸೇವೆಯಾಗಿ ಬದಲಾಯಿತು. ಇದು ಹಣವಂತರ ಹಿಡಿತವನ್ನು ಬಲಪಡಿಸಿತು. ಅದಕ್ಕಾಗಿಯೇ ಅನೇಕ ವೈಶ್ಯ ಗೃಹಗಳು ಕಾನೂನು ರೀತಿಯಲ್ಲಿ ಹುಟ್ಟಿಕೊಂಡವು. ತಲೆಹಿಡುಕರ ಸಂಖ್ಯೆ ಏರಿತು. ಈ ಲೈಂಗಿಕತೆಯು ಮಾರುಕಟ್ಟೆಯಲ್ಲಿ ಹಣವಂತರ ಮತ್ತು ಅಧಿಕಾರ ವರ್ಗದವರ ದೌರ್ಜನ್ಯ

ಆರಂಭವಾಯಿತು. ಒಂದು ಕಡೆ ಕಾನೂನಿನಲ್ಲಿ ಅಪರಾಧವೆಂದು ಅದನ್ನು ಗುರುತಿಸಿದ್ದು, ಇನ್ನೊಂದಡೆ ಅದನ್ನು ವ್ಯಾಪಾರದ ಸರಕಾಗಿರಿಸಿದ್ದು ಮಹಿಳೆಯರ ದಿಕ್ಕನು ತಪ್ಪಿಸುವುದರ ಮೂಲಕ ಅವರ ಜೀವನವನ್ನು ಅಸ್ತವ್ಯಸ್ತವಾಗಿಸಿತು. ಇದರಿಂದ ಮಹಿಳೆಗೆ ಲೈಂಗಿಕ ಆಯ್ಕೆಯಲ್ಲಿ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ಸಿಕ್ಕಿತ್ತಾದರೂ, ಅದು ಹಣಕ್ಕಾಗಿ ಮಾಡುವ ನಿರ್ಬಂಧನೆಯನ್ನು ಹೇರಿ ಅದನ್ನು ಕಡ್ಡಾಯವಾದ ಕೆಲಸವಾಗಿ ಪರಿಣಮಿಸುವುದು, ಅದು ಅವರನ್ನು ಅಧೋಗತಿಗೆ ತಂದಿತು. ಮಹಿಳೆಯರನ್ನು ಮತ್ತು ಅಪ್ರಾಪ್ತ ಹೆಣ್ಣು ಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳುವುದು, ವೇಶ್ಯಾಗೃಹಗಳಲ್ಲಿ ಬಲವಂತವಾಗಿ ಅವರನ್ನು ದುಡಿಸಿಕೊಳ್ಳುವುದರಿಂದ ಅವರನ್ನು ಲೈಂಗಿಕ ಗುಲಾಮರನ್ನಾಗಿ ಮಾಡಿತು.

ಪುರಾತನ ಕಾಲದಲ್ಲಿ ವಂಶಾಪರಂಪರೆಯಾಗಿ ಬೆಳೆದು ಬಂದ ಈ ಪದ್ಧತಿ ಮಹಿಳೆಯರಿಗೆ ಸ್ವಲ್ಪಮಟ್ಟಿನ ಗೌರವನ್ನಾದರೂ ತಂದು ಕೊಟ್ಟಿತು. ಆದರೆ ಬ್ರಿಟಿಷರ ವಸಾಹತುಶಾಹಿಯ ಸಮಯದಲ್ಲಿ ಇದು ನೈತಿಕತೆಯ ಹೊಣೆ ಹೊತ್ತು ಆ ಗೌರವದ ಚೌಕಟ್ಟಿನಿಂದ ಹೊರಗೆಳೆಯಿತು. ಈ ರೀತಿಯ ಪ್ರಕ್ರಿಯೆಯು ಈ ಸಮುದಾಯದವರಿಂದ ವಿರೋಧದ ಪ್ರತಿಕ್ರಿಯೆಯನ್ನು ಉಂಟುಮಾಡಿತು. ಈ ಪದ್ಧತಿಯನ್ನು ವಿರೋಧಿಸಿ ಅನೇಕ ಬರಹಗಳು ಕಂಡುಬಂದವು. ೧೮ನೇ ಶತಮಾನದ ಮಧ್ಯದಲ್ಲಿ ಮುದ್ದುಪಲಿನಿ, ಇವರು ತಾಂಜವೂರಿನ ರಾಜನ ಆಸ್ಥಾನದಲ್ಲಿ ನರ್ತಕಿಯಾಗಿದ್ದವಳು ಇವರು 'ರಾಧಿಕ ಶಾಂತವಾನಂ' ಎಂಬ ಪದ್ಯವನ್ನು ಬರೆದರು.[೧೦] ಇದು ರಾಧ ಕೃಷ್ಣರ ಪ್ರಣಯ ಕಾವ್ಯವಾಗಿದ್ದು, ಈ ಕವನದಲ್ಲಿ ರಾಧೆಯು ತನ್ನ ಕಾಮದ ಅಭೀಲಾಷೆಯನ್ನು ಕೃಷ್ಣನಲ್ಲಿ ತೋಡಿಕೊಂಡಿರುವಂತಹದ್ದಾಗಿತ್ತು. ಇದನ್ನು ಬೆಂಗಳೂರು ನಾಗರತ್ನ ಇವರು ಆಸ್ಥಾನದ ನರ್ತಕಿಯಾಗಿದ್ದು ಈ ಪುಸ್ತಕವನ್ನು ಮರುಪ್ರಕಟಣೆ ಮಾಡಿದ್ದು ಬ್ರಿಟಿಷರ ಅಸಮಾಧಾನಕ್ಕೆ ಕಾರಣವಾಗಿ ಪ್ರಬಲ ವಿರೋಧವಾಯಿತಲ್ಲದೆ ಅದನ್ನು ಪ್ರಕಟಿಸಿದವರ ವಿರುದ್ಧ ಬ್ರಿಟಿಷರು ಕಾನೂನು ರೀತಿಯಲ್ಲಿ ಆ ಪುಸ್ತಕದ ಎಲ್ಲ ಪ್ರತಿಗಳನ್ನು ವಶಪಡಿಸಿಕೊಂಡರು ಮತ್ತು ಅಶ್ಲೀಲ ಪ್ರತಿಗಳ ಪ್ರಕಟಣೆ ಎಂದು ಅವರ ಮೇಲೆ ಕ್ರಮತೆಗೆದುಕೊಂಡರು.[೧೧] ಭಾರತದ ಎಲ್ಲ ಬರಹಗಾರರು, ವಿದ್ವಾಂಸರು ಮತ್ತು ಕವಿಗಳು ಬ್ರಿಟೀಷರ ಈ ಕ್ರಿಯೆಯನ್ನು ಖಂಡಿಸಿದರು.

ಲಿಂಗ ಆಧಾರದ ಮೇಲೆ (ಮಹಿಳೆಯ ಲೈಂಗಿಕತೆಯ ಶೋಷಣೆಯನ್ನು) ಗುರುತಿಸಿ ಅಜ್ಞಾನ, ಬಡತನ, ಶಿಕ್ಷಣದ ಕೊರತೆ, ಸಾಂಪ್ರದಾಯಿಕ ಹಿಡಿತಗಳು ಅವರನ್ನು ಸಾಮಾಜಿಕವಾಗಿ ಮತ್ತು ಕೌಟುಂಬಿಕವಾಗಿ ಇವರನ್ನು ಬಲಿಪಶುಗಳನ್ನಾಗಿ ಮಾಡಿವೆ ಎಂದು ಗುರುತಿಸುವುದರ ಮೂಲಕ ಸಾಮಾಜಿಕ ಅನಿಷ್ಟ ಪದ್ಧತಿಗಳಲ್ಲಿ ವೇಶ್ಯಾವಾಟಿಕೆಯನ್ನು ಸೇರಿಸುವುದರಿಂದ ಆ ಪದ್ಧತಿಯ ನಿರ್ಮೂಲನೆಯ ಪ್ರಯತ್ನಕ್ಕೂ ವಿಚಾರಗಳ ವಿನಿಮಯ ನಡೆದವು. ರಾಜರಾಂ ಮೋಹನರಾಯರು ಸಮಾಜದಲ್ಲಿ ಮಹಿಳೆಯರ ಸ್ಥಾನವನ್ನು ಉತ್ತಮಪಡಿಸಬೇಕೆಂದು ಅಚಲವಾಗಿ ಪ್ರಯತ್ನಿಸಿದರು. ಬಾಲ್ಯವಿವಾಹ, ಸತಿಪದ್ಧತಿಯನ್ನು ರದ್ದುಪಡಿಸುವ ಪ್ರಯತ್ನದಿಂದ ವೇಶ್ಯಾವಾಟಿಕೆಯನ್ನು ಪರೋಕ್ಷವಾಗಿ ನಿರ್ಮೂಲನೆ ಮಾಡಲು ಪ್ರಯತ್ನಿಸಿದರು. ಸಮಾಜ ಸುಧಾರಣಾ ಚಳುವಳಿಯು ಕೂಡ ವೇಶ್ಯೆಯರ

ಜೀವನಮಟ್ಟದ ಅಂಶವನ್ನು ಸುಧಾರಿಸುವ ಅಂಶವನ್ನು ಒಳಗೊಂಡಿತ್ತು. ಅನೇಕ ಸಮಾಜ ಸುಧಾರಕರು ಮಹಿಳೆಯರನ್ನು ಮತ್ತು ಮಕ್ಕಳನ್ನು ವೇಶ್ಯಾವೃತ್ತಿಗೆ ತಳ್ಳುವುದನ್ನು ನಿಲ್ಲಿಸಲು ಕಾನೂನನ್ನು ಮಾಡಬೇಕೆಂದು ಅಂದಿನ ಸರ್ಕಾರದ ಮೇಲೆ ಒತ್ತಡವನ್ನು ತರುವುದರಿಂದ ಭಾರತ ದಂಡ ಸಂಹಿತೆಯು-೧೮೬೦ರ ಕಾಯಿದೆಯಲ್ಲಿ ೩೭೨, ೩೭೪ ವೇಶ್ಯಾವೃತ್ತಿಗಾಗಿ ಅಪ್ರಾಪ್ತ ಮಕ್ಕಳನ್ನು ಮಾರುವುದು ಅಪರಾಧವೆಂದು ಪರಿಗಣಿಸಲಾಯಿತು. ಅವರ ನಾಗರೀಕ ಹಕ್ಕುಗಳನ್ನು ಒತ್ತಾಯಿಸಿ ಸಮಾಜ ಸುಧಾರಣಾ ಚಳುವಳಿಗಳು ನಡೆದವು. ಇದರ ಪರಿಣಾಮವಾಗಿ ಬಿಳಿಗುಲಾಮರ ಕಾಯಿದೆ ೧೯೧೦ರಲ್ಲಿ ಜಾರಿಗೆ ಬಂತು.

ಭಾರತದ ಇತಿಹಾಸದಲ್ಲಿ ವೇಶ್ಯಾವಾಟಿಕೆಯನ್ನು ಕಡ್ಡಾಯಗೊಳಿಸಿದ್ದು ಬ್ರಿಟೀಷರಾದರೂ, ಬ್ರಿಟೀಷರು ಹೋದ ನಂತರವೂ ಈ ವೃತ್ತಿಯು ಇಂದಿನವರೆಗೂ ಮುಂದುವರಿದಿದೆ. ಕೌಟಿಲ್ಯನ ಅರ್ಥಶಾಸ್ತ್ರದ ೩ ವರ್ಗದ ದೇವದಾಸಿಯರು ಅನ್ನುವ ಪದ ಈಗ ಇಲ್ಲವಾದರೂ ವೇಶ್ಯೆಯರು ಈಗ ಅದೇ ವರ್ಗಗಳಲ್ಲಿ ಮುಂದುವರೆದಿದ್ದಾರೆ. ಮೊಗಲರ, ಬ್ರಿಟಿಷರ ಕಾಲದ ನೈತಿಕತೆಯ ಪ್ರಶ್ನೆ ಇದುವರೆಗೂ ಈ ಸಮುದಾಯದ ಮೇಲೆ ನಿಂತಿದೆ. ಬ್ರಿಟಿಷರ ಕಾಲದಲ್ಲಿ ಜಾರಿಗೆ ಬಂದ ವೇಶ್ಯಾಗೃಹ ತಲೆ ಹಿಡುಕತನ ಇಂದಿಗೂ ಮುಂದುವರೆದಿದೆ. ಪ್ರಸ್ತುತ ಸಮಾಜದಲ್ಲಿ ಈ ಪದಗಳು ಯಾವ ರೀತಿ ಲಿಂಗ ವ್ಯವಸ್ಥೆಯ ಮತ್ತು ಪರಲಿಂಗ ಸಂಬಂಧಗಳಲ್ಲಿ ಪ್ರಭಾವ ಬೀರುತ್ತಿವೆ ಎಂಬುವುದು ಕೂಡ ಮುಖ್ಯವಾಗಿರುತ್ತದೆ.

೩. ನಾವು ದಂದೆಯ ಸಮುದಾಯವನ್ನು ಲೈಂಗಿಕತೆಯ ಭಾವನೆಗಳನ್ನು ಮತ್ತು ಕ್ರಿಯೆಗಳನ್ನು ಹಣಕ್ಕಾಗಿ ಅಥವಾ ಅದರ ಸಮಾನದ ವಸ್ತುಗಳಿಗಾಗಿ ವಿನಿಮಯ ಮಾಡುವ ಪ್ರಮುಖ ಗುಣಲಕ್ಷಣವನ್ನು ಹೊಂದಿದ ಸಮುದಾಯವೆಂದು ನಾವು ಗುರುತಿಸುತ್ತೇವೆ. ಲೈಂಗಿಕತೆಯ ವಿಷಯವು ನಮ್ಮ ಸಮಾಜದಲ್ಲಿ ತುಂಬ ಗೌಪ್ಯದ ವಿಷಯುವಾಗಿರುವುದರಿಂದ ನಾವು ಲಿಂಗ, ಲಿಂಗತ್ವ ಮತ್ತು ಲೈಂಗಿಕತೆಯ ನಡುವಣ ಸಂಬಂಧಗಳು ಯಾವ ರೀತಿಯಲ್ಲಿ ಬೆಸೆದುಕೊಂಡಿವೆ ಮತ್ತು ಇವುಗಳ ಅಂತರ ಯಾವ ರೀತಿ ಈ ಲೈಂಗಿಕತೆಯ ಮೇಲೆ ಪರಿಣಾಮವನ್ನು ಬೀರುತ್ತಿದೆ ಎಂದು ತಿಳಿಯುವುದು ಅತಿ ಅವಶ್ಯವೆನಿಸುತ್ತದೆ. ಲಿಂಗ, ಲಿಂಗತ್ವ ಲೈಂಗಿಕತೆಯ ಸಾಮಾನ್ಯ ಅರ್ಥವಿವರಣೆ ಈ ರೀತಿಯಾಗಿದೆ.

ಲಿಂಗ ಎನ್ನುವುದು-ಗಂಡು ಹೆಣ್ಣಿನ ದೈಹಿಕ ಅಂಗಗಳಿಂದ ಗುರುತಿಸಲ್ಪಡುತ್ತದೆ. ಲಿಂಗತ್ವವು-ಗಂಡು ಹೆಣ್ಣಿನ ವೇಷಭೂಣವನ್ನು ಹಾವ ಭಾವಗಳನ್ನು ಮತ್ತು ಕಾರ್ಯ ಚಟುವಟಿಕೆಗಳನ್ನು ಮತ್ತು ಮಾನಸಿಕ ಗುಣಗಳನ್ನು ನಿರ್ಧರಿಸುತ್ತದೆ.

ಲೈಂಗಿಕತೆಯು-ಭಾವನಾತ್ಮಕವಾಗಿ ಮತ್ತು ದೈಹಿಕವಾಗಿ ಇನ್ನೊಬ್ಬರನ್ನು ಆಕರ್ಷಿಸಿ ಲೈಂಗಿಕ ಕ್ರಿಯೆಯಲ್ಲಿ ತೊಡಗುವ ಭಾವನೆಗಳನ್ನು ಮತ್ತು ಚಟುವಟಿಕೆಯನ್ನು 'ಲೈಂಗಿಕತೆ' ಎಂದು ಸಾಧಾರಣವಾಗಿ ಅರ್ಥಮಾಡಿಕೊಳ್ಳುತ್ತೇವೆ.

ಲಿಂಗ ಪ್ರಕೃತಿಯಿಂದ ರೂಪುಗೊಳ್ಳುತ್ತದೆ. ಲಿಂಗತ್ವವು ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚಾರ ವಿಚಾರಗಳಿಂದ ಹೆಣ್ಣು ಮತ್ತು ಗಂಡಿನ ಪಾತ್ರಗಳನ್ನು ನಿರ್ಧರಿಸುವುದರಿಂದ

ಲಿಂಗತ್ವವನ್ನು ನಿರ್ಧರಿಸುತ್ತೇವೆ. ಲೈಂಗಿಕತೆಯು - ಭಾವನಾತ್ಮಕವಾಗಿ ದೈಹಿಕವಾಗಿ ಇನ್ನೊಬ್ಬರನ್ನು ಆಕರ್ಷಿಸಿ ಲೈಂಗಿಕ ಕ್ರಿಯೆಯಲ್ಲಿ ತೊಡಗುವ ಭಾವನೆಗಳನ್ನು ಭಾಗಶಃ ಪ್ರಕೃತಿಯಿಂದ ಭಾಗಶಃ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚಾರ ವಿಚಾರಗಳಿಂದ ಹೆಣ್ಣು ಮತ್ತು ಗಂಡಿನ ಪಾತ್ರಗಳನ್ನು ನಿರ್ಧರಿಸುವುದರಿಂದ ಅವುಗಳ ಚೌಕಟ್ಟಿನಲ್ಲಿ ಪಾತ್ರವಹಿಸುತ್ತವೆ. ಈ ರೀತಿಯಾಗಿ ಇವು ಆಂತರಿಕವಾಗಿ ಒಂದಕ್ಕೊಂದು ನಿಕಟ ಸಂಬಂಧ ವಿದ್ದರೂ ಹಲವಾರು ವಿಚಾರಗಳಲ್ಲಿ ಇವುಗಳಲ್ಲಿ ಅಂತರವಿರುವುದನ್ನು ನಾವು ಗುರುತಿಸುತ್ತೇವೆ. ಪುರುಷಪ್ರಧಾನ ಸಮಾಜವು ಇದನ್ನು ಹಲವಾರು ರೀತಿಯ ಇತಿಮಿತಿಗಳ ಚೌಕಟ್ಟಿಗೆ ಮಿತಿಗೊಳಿಸಿದೆ. ನಾವು ಈ ಮೂರನ್ನು ಸೂಕ್ಷ್ಮವಾಗಿ ನೋಡುವಾಗ ಲಿಂಗ ಮತ್ತು ಲಿಂಗತ್ವಕ್ಕಿರುವ ಮುಕ್ತತೆ ಲೈಂಗಿಕತೆಗೆ ಇಲ್ಲದಿರುವುದು. ಈ ಇತಿಮಿತಿಗಳು ಲೈಂಗಿಕತೆಗೂ ಲಿಂಗ ಮತ್ತು ಲಿಂಗತ್ವಕ್ಕೂ ಸರಿಯಾದ ಹೊಂದಾಣಿಕೆಯನ್ನು ನಿರ್ಮಿಸದೆ ಇರುವುದು. 'ಲೈಂಗಿಕತೆಯ' ವಿಚಾರವು ನೈತಿಕತೆಯ ಆಧಾರದ ಮೇಲೆ ಗೌಪ್ಯವಾಗಿರುವುದರಿಂದ ಇದು ಎಲ್ಲರಲ್ಲಿ ಮೌನ, ನಾಚಿಕೆ, ಭಯ, ಕುತೂಹಲವನ್ನು ನಿರ್ಮಿಸಿದೆ. ಈ ವಿಷಯದಲ್ಲಿ ತುಂಬ ಕಟ್ಟುನಿಟ್ಟಿನ ಅಂಶ ಹೆಣ್ಣಿನ ಮೇಲೆ ಹೇರುವುದರ ಮೂಲಕ ಹೆಣ್ಣಿನ 'ಲೈಂಗಿಕತೆ'ಯ ಒಡೆತನವನ್ನು ಪುರುಷನು ತನ್ನ ಹಿಡಿತದಲ್ಲಿ ಬಿಗಿಪಡಿಸಿಕೊಂಡಿರುತ್ತಾನೆ. ಮದುವೆಯಾದ ಪುರುಷನೊಡನೆ ಮಾತ್ರ ಇಂತಹ ಸಂಬಂಧವಿರಬೇಕು, ಅದು ಹೇಗಿರಬೇಕು, ಯಾವಾಗ ಎಷ್ಟಿರಬೇಕು, ಯಾರು ಅದರಿಂದ ಹೆಚ್ಚಿನ ಸುಖ ಪಡೆಯಬೇಕು ಎಂಬ ಒಡೆತನವನ್ನು ತನ್ನಲ್ಲಿ ಇಟ್ಟುಕೊಂಡಿದೆ. ಎಷ್ಟು ಪುರುಷ ಮಹಿಳೆಯರನ್ನು ಸುಖಿಸುತ್ತಾನೋ ಅವನು ಸಮಾಜದ ದೃಷ್ಟಿಯಲ್ಲಿ ರಸಿಕನಾಗಿರುತ್ತಾನೆ. ಮಹಿಳೆಯ ವಿಷಯದಲ್ಲಿ ಅವಳು ಸೂಳೆ ಯಾಗುತ್ತಾಳೆ ಮತ್ತು 'ಕೆಟ್ಟ' ಮಹಿಳೆಯಾಗಿರುತ್ತಾಳೆ. ಇದು ಅವಳ ಜೀವನದಲ್ಲಿ ಮದುವೆ ಎಂಬ ಚೌಕ್ಕಟ್ಟಿನಲ್ಲಿ ಮಕ್ಕಳನ್ನು ಹೇರಲು ಇರುವ ಯಂತ್ರದಂತೆ ಮಾಡುವುದರ ಮೂಲಕ ಎಷ್ಟು ಮಕ್ಕಳು, ಎಂತಹ ಮಕ್ಕಳನ್ನು ಹೇರಬೇಕೆಂಬ ಆಯ್ಕೆಯನ್ನು ಕಸಿದುಕೊಳ್ಳುವುದರಿಂದ, ಅವಳನ್ನು ಲೈಂಗಿಕ ಗುಲಾಮಳನ್ನಾಗಿ ಮಾಡಿ ಅವಳ ಜೀವನದಲ್ಲಿ ನಿರಾಶೆಯ ಅಡ್ಡಗೋಡೆ ಗಳನ್ನು ನಿರ್ಮಿಸಿದೆ. ಈ ವ್ಯವಸ್ಥೆಯು ಅವಳ ಲೈಂಗಿಕ ಸ್ವಾತಂತ್ರ್ಯವನ್ನು ಅವಳಿಂದ ಕಸಿದುಕೊಂಡಿದೆ.

ಅದು ಅಲ್ಲದೆ ಅದು 'ಸಲಿಂಗ' ಸಂಬಂಧವನ್ನು ಸಮಾಜವಾಗಲಿ, ಧಾರ್ಮಿಕ ವಿಚಾರ ಗಳಾಗಲಿ ಎಂದಿಗೂ ಒಪ್ಪುವುದಿಲ್ಲ. ಆದರೂ ಸಮಾಜದಲ್ಲಿ ಲೈಂಗಿಕತೆ ಮತ್ತು ಲಿಂಗತ್ವದ ವಿಚಾರಗಳು ಪರಲಿಂಗದೊಂದಿಗೆ ಮಾತ್ರ ಹೊಂದಾಣಿಕೆಯನ್ನು ನೀಡುತ್ತವೆ. ಅದು ಸಲಿಂಗ ಕಾಮಕ್ಕೆ ಇಂದಿನವರೆಗೂ ಸ್ಪಂದಿಸುತ್ತಿಲ್ಲ. ಈ ಸಲಿಂಗದ ಸಂಬಂಧಗಳು ಕೂಡ ಗಂಡು ಗಂಡು ಹೆಣ್ಣು ಹೆಣ್ಣಿನೊಂದಿಗಿನ ಸಂಬಂಧವಾಗಿದ್ದು, ಅದು ಹೆಣ್ಣು ಗಂಡಿನ ಸಂಬಂಧದ ಚೌಕಟ್ಟಿನಲ್ಲಿ ಬಂದರೂ ಅದನ್ನು ಲೈಂಗಿಕತೆ ಮತ್ತು ಲಿಂಗತ್ವದ ಆಧಾರದ ಮೇಲೆ ಬೇರೆ ಲಿಂಗವೆಂದು ಗುರುತಿಸುವುದರಿಂದ ಅದನ್ನು ಮೂರನೆಯ ಲಿಂಗವಾಗಿ ಸಮಾಜ ಗುರುತಿ

ಸುತ್ತಿದೆ. ಈ ಸಲಿಂಗದ ಸಂಬಂಧಗಳು ಗಂಡು ಹೆಣ್ಣನ್ನು ಹೊರತುಪಡಿಸಿ ಪ್ರಾಣಿಗಳಂತಹ ಸಂಬಂಧ ಹಾಗೂ ವಸ್ತುಗಳ ಜೊತೆಗಿನಂತಹ ಸಂಬಂಧವಾಗಿರದೆ ಇದು ಮನುಷ್ಯ ಸಂಬಂಧ ವಾಗಿರುತ್ತದೆ ಮತ್ತು ಈ ಮಾನವ ಸಂಬಂಧವು ತುಂಬ ಮಹತ್ವದ್ದು ಮತ್ತು ಅರ್ಥಪೂರ್ಣ ವಾಗಿರುತ್ತದೆ. ಲೈಂಗಿಕತೆಯ ಒಡೆತನವು ಅವರವರ ವಿಚಾರಗಳಿಗಿಂತ ಪುರುಷನ ವಿಚಾರಗಳ ಮತ್ತು ಪರಲಿಂಗ ಸಂಬಂಧಗಳಿಗೆ ವಿಚಾರಗಳಿಗೆ ಅತಿಯಾಗಿ ಸ್ಪಂದಿಸುತ್ತವೆ. ಹಿಜ್ರಾಗಳು ಕೋಜಾಗಳು ಮತ್ತು ಸಲಿಂಗ ಕಾಮಿಗಳು ಈ ಸಮುದಾಯದಲ್ಲಿ ಬರುವುದರಿಂದ, ಈ ವಿಷಯವನ್ನು ಇಲ್ಲಿ ಚರ್ಚಿಸುವುದು ಅವಶ್ಯಕವೆನಿಸುತ್ತದೆ. ದಂದೆ ಸಮುದಾಯವು ಬರಿ ಮಹಿಳೆಯರನ್ನು ಮಾತ್ರವಲ್ಲದೆ ಸಲಿಂಗ ಕಾಮಿಗಳನ್ನು ಒಳಗೊಂಡಿದೆ. ಅದರಿಂದ ಈ ವಿಷಯವನ್ನು ಇಲ್ಲಿ ಗುರುತಿಸುವುದು ಮುಖ್ಯವೆನಿಸುತ್ತದೆ. ಪುರುಷರನ್ನು ಹೊರತುಪಡಿಸಿ ಸ್ತ್ರೀ ಸಮುದಾಯ ವಲ್ಲಿಯೂ ತನ್ನ ಲೈಂಗಿಕ ಆಸೆಯನ್ನು ವ್ಯಕ್ತಪಡಿಸಿದ ಉದಾಹರಣೆಗಳು ಇಂದಿನವರೆಗೂ ಕಂಡುಬಂದಿಲ್ಲ. ಗಂಡ ಹೆಂಡತಿಯ ಸಂಬಂಧದಲ್ಲಿ ಕೂಡ ಮಹಿಳೆಯು ಬಿಚ್ಚು ಮನಸ್ಸಿನಿಂದ ಗಂಡನಲ್ಲಿ ಲೈಂಗಿಕ ಅಭಿಲಾಷೆಯನ್ನು ವ್ಯಕ್ತಪಡಿಸುವುದು ಕೂಡ ಅಪರಾಧವಾಗಿ ಪರಿಣಮಿಸುತ್ತದೆ. ಇಲ್ಲಿಯವರೆಗೂ ನಾವು ಲೈಂಗಿಕತೆಯನ್ನು ಪುರುಷ ನಿರ್ಮಿಸಿದ ಚೌಕಟ್ಟಿನಲ್ಲಿಯೆ ಅದನ್ನು ಅರ್ಥಮಾಡಿಕೊಂಡು ಪಾಲಿಸುತ್ತಿದ್ದೇವೆ. ಮಹಿಳೆಯರು ಲೈಂಗಿಕತೆಯು ತನ್ನ ಜೀವನದ ಅವಶ್ಯಕತೆ: ಅದು ತನ್ನ ಹಕ್ಕು ಎಂದು ಎಲ್ಲಿಯೂ ಸ್ಪಷ್ಟವಾಗಿ ಮತ್ತು ಧೈರ್ಯವಾಗಿ ಪ್ರತಿಪಾದಿಸುತ್ತಿಲ್ಲ. ಇದು ದಂಧೆ ಮಾಡುವ ಸಮುದಾಯದಲ್ಲಿ ಮಾತ್ರವೇ ಕಂಡರೂ ಅದು ಅವರನ್ನು ನೈತಿಕತೆಯ ನಿರ್ಣಯಕ್ಕೆ ಗುರಿ ಮಾಡುತ್ತದೆ.

ದಂದೆಯಲ್ಲಿರುವ ಮಹಿಳಾ ಸಮುದಾಯವನ್ನು ನಾವು ಸಾಮಾನ್ಯವಾಗಿ ಆರ್ಥಿಕ ಮತ್ತು ಕುಟುಂಬದ ಒತ್ತಡದಿಂದ ಮತ್ತು ಕೆಲವರು ಆಯ್ಕೆಯಿಂದ ಬಂದವರು ಎಂದು ಅರ್ಥೈಸಿದರು. ಈ ಸಮುದಾಯವು ಪರೋಕ್ಷವಾಗಿ ಲೈಂಗಿಕ ಆಯ್ಕೆಯು ಮಹಿಳೆಯರ ಸ್ವಾತಂತ್ರ್ಯ ಮತ್ತು ಅವರ ಹಕ್ಕು ಎಂದು ಪ್ರತಿಪಾದಿಸುವುದರಲ್ಲಿ ಮುಂದಾಗಿರುವುದು ಸಮಾಜದಲ್ಲಿ ಲೈಂಗಿಕ ಕ್ರಾಂತಿಯನ್ನೆ ಮಾಡುತ್ತಿದೆ. ಈ ಕ್ರಾಂತಿಯು ಮಹಿಳೆಯನ್ನು ಕೇವಲ ಲೈಂಗಿಕ ವಸ್ತುವನ್ನಾಗಿ ಕಾಣದೆ ಅವರಿಗೂ ಮನುಷ್ಯರಂತೆ ಬೇರೆ ಭಾವನೆಗಳು ಇವೆ ಎಂದು ಅರ್ಥೈಸಲು ಮುಂದಾಗಿವೆ. ಇದು ಮಹಿಳೆಯರ ಲೈಂಗಿಕ ಸ್ವಾತಂತ್ರ್ಯದ ಕ್ರಾಂತಿ ಎಂದು ಹೇಳಬಹುದು. ಎಲ್ಲಿ ಮಹಿಳೆ ತನ್ನ ಆಯ್ಕೆಯಲ್ಲಿರುತ್ತಾಳೊ ಅಲ್ಲಿ ಅವಳು ಸಬಲಳಾಗಿ ಸಂತೋಷವಾಗಿರಲು ಸಾಧ್ಯ ವಾಗುತ್ತದೆ. ಇದು ಸಮಾನತೆಯ ಮತ್ತು ಆರೋಗ್ಯಕರ ವಾತಾವರಣವನ್ನು ನಿರ್ಮಿಸುತ್ತದೆ. ಲೈಂಗಿಕತೆಯ ಸಂಬಂಧವು ಮಹಿಳೆಯ ಆಯ್ಕೆಯಿಂದ ಕೂಡಿದ್ದಾಗ ಮಾತ್ರ ಅವಳಿಗೆ ನಿಜವಾದ ಸಂತೋಷವನ್ನು ತಂದು ಕೊಡುತ್ತದೆ. ಅದು ಸಕಾರಾತ್ಮಕ ಪರಿಣಾಮವನ್ನು ಕುಟುಂಬದಲ್ಲಿ ಮತ್ತು ಸಮಾಜದ ಮೇಲೆ ಬೀರುತ್ತದೆ. ನನ್ನ ಪ್ರಕಾರ ಪ್ರತಿಯೊಬ್ಬರ ಲಿಂಗತ್ವ ಮತ್ತು ಲೈಂಗಿಕತೆಯು ಅವರವರ ವೈಯಕ್ತಿಕ ಆಯ್ಕೆಯಾಗಿರಬೇಕು.

- "ನನ್ನ ಲಿಂಗ, ನನ್ನ ಲಿಂಗತ್ವ, ನನ್ನ ಲೈಂಗಿಕತೆ ನನ್ನ ಹಕ್ಕು" ಎಂಬ ಸಿದ್ಧಾಂತವನ್ನು ರೂಪಿಸುವುದು ಅತಿ ಅವಶ್ಯವೆನಿಸುತ್ತದೆ.

ಈ ಸಿದ್ಧಾಂತವನ್ನು ಅಳವಡಿಸುವಾಗ ನಮಗೆ ಎದುರಾಗುವ ಸಮಸ್ಯೆಯೆಂದರೆ, ಹೆಣ್ಣು ಗಂಡು ಎನ್ನುವ ಅನನ್ಯತೆಯಲ್ಲಿ (ಗುರುತಿಸುವುದರಲ್ಲಿ) ಆಗುವ ತೊಂದರೆ ಹೆಣ್ಣು ಗಂಡು, ಹಿಜ್ರಾ, ಸಲಿಂಗಕಾಮಿ ಎಂಬ ಇತ್ಯಾದಿ ವಿಂಗಡನೆಯನ್ನು ನಾವು ಪುನಃ ಗುರುತಿಸಬೇಕಾಗುತ್ತದೆ. ಗಂಡು ಹೆಣ್ಣು ಎಂಬ ವರ್ಗದಲ್ಲಿ ಪುನಃ ಹಿಜ್ರಾ ಕೋಜಾ, ಹೆಣ್ಣು ಹೆಣ್ಣು, ಗಂಡು-ಗಂಡು ಎಂಬ ಗುಂಪುಗನ್ನು ಕಾಣುತ್ತೇವೆ. ಇದು ಸಮಾಜದ ನಿಯಮವನ್ನು ದಾರಿ ತಪ್ಪಿಸುತ್ತಿದೆ ಎಂದು ನಾವು ತಿಳಿದುಕೊಂಡಿರುತ್ತೇವೆ. ಏಕೆಂದರೆ ನಾವು ಬರೀ ಹೆಣ್ಣು ಗಂಡಿನ ಅಸ್ತಿತ್ವವನ್ನು ಮಾತ್ರ ಪರಿಗಣಿಸಿದ್ದೇವೆ. ಅದರ ಚೌಕಟ್ಟಿನ ಹೊರಗಡೆ ಈ ರೀತಿಯ ಸಂಬಂಧಗಳು ಇವೆ ಎಂಬುವುದು ಸತ್ಯಸಂಗತಿಯಾದರೂ ಅದನ್ನು ಸಮಾಜವು ಒಪ್ಪಿಕೊಳ್ಳುವಲ್ಲಿ ಗೊಂದಲವನ್ನು ನಿರ್ಮಿಸುತ್ತಿದೆ ಮತ್ತು ಇನ್ನೊಂದು ಕಡೆಯಲ್ಲಿ ಇವರನ್ನು ಸಮಾನತೆಯ ಚೌಕಟ್ಟಿನಲ್ಲಿ ತರುವುದು ಹೇಗೆ ಎನ್ನುವ ಪ್ರಶ್ನೆಯನ್ನು ನಾವು ಕಾಣಬೇಕು, ಮೊದಲು ನಾವು 'ಮಾನವತೆ' ಕಡೆ ಗಮನಹರಿಸಬೇಕು. ನಾವೆಲ್ಲರೂ ಮನುಷ್ಯರು ಎಂಬ ಕಲ್ಪನೆಯನ್ನು ನಾವು ವಿಸ್ತಾರವಾಗಿ ಅಳವಡಿಸಿಕೊಂಡಿಸಿಕೊಂಡರೆ, ಈ ಸಮಸ್ಯೆಯನ್ನು ನಾವು ತೊಡೆದು ಹಾಕಬಹುದು. ನಮ್ಮ ಸಮಾಜದಲ್ಲಿ ಮನುಷ್ಯರನ್ನು ನಾವು ಅವರ ಜಾತಿ, ಲಿಂಗ, ಧರ್ಮ, ಲೈಂಗಿಕ ಆಯ್ಕೆ, ಅಂತಸ್ತು, ಶಿಕ್ಷಣ ಇವುಗಳ ಮಾನದಂಡಗಳಿಂದ ಅಳೆದು ನೋಡುವುದರಿಂದ ನಮ್ಮಲ್ಲಿ ಈ ರೀತಿಯ ಸಮಸ್ಯೆಗಳು ದಿನದಿಂದ ದಿನಕ್ಕೆ ಉಲ್ಬಣವಾಗುತ್ತಿರುವುದು ಸಹಜವಾಗಿದೆ. ಇದು ಯಾವಾಗಲೂ ಬೇರೆಯವರ ವ್ಯವಹಾರಗಳಲ್ಲಿ ತಲೆಹಾಕುವ ವೃತ್ತಿಯಾಗಿದೆ. ಅದಕ್ಕಾಗಿಯೆ ನಮ್ಮ ದೇಶದಲ್ಲಿ ಲಿಂಗ, ಧರ್ಮ, ವೃತ್ತಿ, ದೈಹಿಕ, ಲೈಂಗಿಕ ಆಯ್ಕೆಯಲ್ಲಿ ಅಸಮಾನತೆಯು ನಡೆಯುತ್ತಲೆ ಇದೆ.

೪. ಈ ವಿಚಾರದಲ್ಲಿ ನಾವು ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಇದುವರೆಗಿನ ಈ ಸಂಬಂಧವು ಲೈಂಗಿಕ ಸಮುದಾಯದಲ್ಲಿ ಇರುವ ಮಹಿಳೆಯನ್ನು ಮತ್ತು ಮದುವೆಯಂತಹ ಸಂಬಂಧದಲ್ಲಿ ಇರುವ ಮಹಿಳೆಯನ್ನು ಶೋಷಿತಳನ್ನಾಗಿ ಮಾಡುವುದಲ್ಲದೆ ಅವಳನ್ನು ಲೈಂಗಿಕ ಗುಲಾಮಳಂತೆ ಕಾಣುತ್ತದೆ ಮತ್ತು ಸಮಾಜ ಕಾನೂನು ಮತ್ತು ಧಾರ್ಮಿಕ ಆಚಾರ ವಿಚಾರಗಳು ಅದನ್ನು 'ಕೆಲಸ' ಎನ್ನುವುದರ ಮೂಲಕ ಅವಳಿಗೆ ಅದನ್ನು ಕಡ್ಡಾಯಗೊಳಿಸಿದೆ. ಲೈಂಗಿಕ ಸಮುದಾಯದಲ್ಲಿ ಇರುವ ಮಹಿಳೆಗೂ ಮತ್ತು ಮದುವೆಯಾದ ಮಹಿಳೆಗೂ ಈ ಸಂಬಂಧದಲ್ಲಿ ಇರುವ ಒಂದೇ ವ್ಯತ್ಯಾಸವೆಂದರೆ ಮದುವೆಯಾದ ಮಹಿಳೆ ಗಂಡನೆಂಬ ಸಂಬಂಧದಲ್ಲಿ ವೈಯಕ್ತಿಕ ಲೈಂಗಿಕ ಸ್ವತ್ತಾಗಿ ಇರುತ್ತಾಳೆ. ದಂದೆಯಲ್ಲಿರುವ ಮಹಿಳೆಯು ಸಾರ್ವಜನಿಕ ಲೈಂಗಿಕ ಸ್ವತ್ತಾಗಿರುತ್ತಾಳೆ. ಇದು ಮಹಿಳೆಯನ್ನು ಕೇವಲ ಲೈಂಗಿಕತೆಯ ಆಧಾರದ ಮೇಲೆ ಗುರುತಿಸುವುದರಿಂದ, ಅವಳು ಎಷ್ಟೋ ಒಳ್ಳೆ ಕೆಲಸನ್ನು ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಮಾಡಿದ್ದರು. ಅವಳು ತನ್ನ ಗಂಡನ ಹೊರತುಪಡಿಸಿ ಬೇರೆ ಪುರುಷನೊಡನೆ ದೈಹಿಕ ಸಂಬಂಧವನ್ನು ಹೊಂದಿದರೆ ಅವಳು ಸಮಾಜದಲ್ಲಿ ಕೆಟ್ಟವಳು ಎನ್ನುವುದು ಮಹಿಳೆ ಯನ್ನು ಅಪ್ಪಟ ಲೈಂಗಿಕತೆಯಿಂದ ಮಾತ್ರ ಗುರುತಿಸುವುದು ಸ್ಪಷ್ಟವಾಗಿದೆ. ಅವಳ ಬೇರೆ

ಯಾವ ಮಾನವ ಭಾವನೆಗಳಿಗೆ ಈ ಸಮಾಜದಲ್ಲಿ ಸ್ಪಂದನವೇ ಇಲ್ಲ. ಈ ರೀತಿಯಾಗಿ ಲೈಂಗಿಕತೆ ಎನ್ನುವುದು ಅವಳಿಗೆ ಕಷ್ಟಾಯದ ಕೆಲಸವಾಗಿ ಮಾರ್ಪಟ್ಟಿದೆ. ಈ ಕೆಲಸ ಎನ್ನುವ ಚೌಕಟ್ಟಿನಲ್ಲಿ ಅವಳು ಅನುಭವಿಸುತ್ತಿರುವ ನೋವು ತೀವ್ರವಾಗಿದೆ. ಇದು ಕೇವಲ ಮಹಿಳೆಯ ಲೈಂಗಿಕ ಕೆಲಸಕ್ಕೆ ಮಾತ್ರವಲ್ಲದೆ ಅವಳು ಮಾಡುವ ಎಲ್ಲ ಕೆಲಸಕ್ಕೂ ಮತ್ತು ಕೆಲಸ ಎನ್ನುವ ಚೌಕಟ್ಟಿನಲ್ಲಿ ಕೆಲಸ ಮಾಡುತ್ತಿರುವ ಕೂಲಿ ಕಾರ್ಮಿಕ ವರ್ಗಕ್ಕೂ ಬೆಲೆ ಇಲ್ಲದಾಗಿ ಅವರನ್ನು ಆರ್ಥಿಕವಾಗಿ ಶೋಷಣೆಗೆ ಗುರಿ ಮಾಡಿದೆ. ಈ ವಿಚಾರವನ್ನು ಮುಂದಿನ ಚರ್ಚೆಯಲ್ಲಿ ವಿವರವಾಗಿ ತಿಳಿದುಕೊಳ್ಳಬಹುದು.

ಇಲ್ಲಿ ನಾಮ ಕೆಲಸ ಎನ್ನುವ ಚೌಕಟ್ಟು ದಂದೆಯಲ್ಲಿರುವ ಮಹಿಳೆಯರ ಅಧ್ಯಯನ ದೊಂದಿಗೆ ಬೇರೆ ಕಾರ್ಮಿಕ ವರ್ಗವನ್ನು ಯಾವ ರೀತಿ ಕಾಣುತ್ತಿದೆ. ಈ ಪರಿಮಿತಿಯು ಇವರನ್ನು ಸಬಲೀಕರಣಗೊಳಿಸುವುದರಲ್ಲಿ ಹೇಗೆ ವಿಫಲವಾಗುತ್ತಿದೆ ಎಂಬುವುದನ್ನು ಚರ್ಚಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ.

ಇದು 'ಲೈಂಗಿಕ ವೃತ್ತಿ' ಅಥವಾ 'ಕೆಲಸ' ಎನ್ನುವುದನ್ನು ಇಲ್ಲಿ ಪ್ರಾಯೋಗಿಕ ಅಂಶವಾಗಿ ತೆಗೆದುಕೊಂಡು ಈ ವಿಷಯವನ್ನು ವಿಶ್ಲೇಷಿಸಲಾಗಿದೆ.

ವೇಶ್ಯಾವಾಟಿಕೆಯನ್ನು ಕೆಲಸ, ಶ್ರಮ ಅಥವಾ ದುಡಿಮೆ ಎಂದು ವ್ಯಾಖ್ಯಾನಿಸುವಾಗ ನಾವು ಅರ್ಥಶಾಸ್ತ್ರದ ವಿವರಣೆಯನ್ನು ನೋಡಬೇಕಾಗುತ್ತದೆ.

ಅರ್ಥಶಾಸ್ತ್ರ ಕಾರ್ಲ್‌ಮಾರ್ಕ್ಸ್‌ರ ಪ್ರಕಾರ ಶ್ರಮ ದುಡಿಮೆ ಅಥವಾ ಕೆಲಸದ ವ್ಯಾಖ್ಯಾನವು ಈ ರೀತಿಯಾಗಿದೆ.

ಕಾರ್ಲ್‌ಮಾರ್ಕ್ಸ್‌ರ ಪ್ರಕಾರ - ಶ್ರಮ ಅಥವಾ ಕೆಲಸ ಎಂದರೆ, "ಸೇವೆ ಮತ್ತು ಸರಕುಗಳನ್ನು ಉತ್ಪಾದಿಸುವಲ್ಲಿನ ಪ್ರಯತ್ನ ಅಥವಾ ಚಟುವಟಿಕೆ" ಎನ್ನಬಹುದು. ಇವರ ಪ್ರಕಾರ 'ಒಬ್ಬ ವ್ಯಕ್ತಿಯ ಶ್ರಮ ಅಥವಾ ಕೆಲಸವನ್ನು ಉತ್ಪಾದಿಸುವ ಬಲವೆಂದು, ಶ್ರಮ ಜಾಣ್ಮೆ, ಚಾಣಕ್ಷತೆ, ದೈಹಿಕ ಸಾಮರ್ಥ್ಯದ ನಾಜೂಕುತನವನ್ನು ಕೆಲಸದ ಬಲವೆಂದು ಕರೆಯುತ್ತಾರೆ.'[೨] ಒಬ್ಬ ವ್ಯಕ್ತಿಯ ಶ್ರಮ ಅಥವಾ ಕೆಲಸವನ್ನು ಜಾರಿಗೊಳಿಸುವಾಗ ಅವನಲ್ಲಿರುವ ದೈಹಿಕ ಬಲ ಜಾಣ್ಮೆ, ನಾಜೂಕುತನ, ಚಾಣಕ್ಷತನವು ಉಪಯೋಗವಾಗುತ್ತದೆ ಮತ್ತು ಆ ಶ್ರಮವು ಅದೃಶ್ಯರೂಪವಾಗಿರುತ್ತದೆಂದು[೨] ಅವರು ಈ ವ್ಯಾಖ್ಯಾನವನ್ನು ಹೇಗೆಲ್ಸ್‌ರವರ ಅಧಿಕಾರದ ತತ್ವಶಾಸ್ತ್ರ ಎಂಬುವುದರಿಂದ ತೆಗೆದುಕೊಂಡಿದ್ದಾರೆ. 'ಕೆಲಗಾರರು ತನ್ನ ಕೆಲಸದ ಬಲವನ್ನು ಮತ್ತು ಉತ್ಪಾದಿಸುವ ಬಲವನ್ನು ಬಂಡವಾಳಕಾರನಿಗೆ ಹಣಕ್ಕಾಗಿ ಮಾರಿಕೊಳ್ಳುತ್ತಾನೆ. ಅಲ್ಲಿ ಅವನ ಶ್ರಮ ಅಥವಾ ಕೆಲಸ ಅದೃಶ್ಯವಾಗುತ್ತದೆ. ಆ ಶ್ರಮದ ಸರಕು ಅಥವಾ ಸೇವೆಯು ಒಡೆತನ ಬಂಡವಾಳಕಾರನ ಅಥವಾ ಯಜಮಾನನ ಒಡೆತನದಲ್ಲಿರುತ್ತದೆ'[೪] ಎನ್ನುತ್ತಾರೆ.

ಕೆಲಸವು,

೧. ಒಡೆಯ/ಸೇವಕ

೨. ಬೇಡಿಕೆ/ಪೂರೈಕೆ

೩. ಶ್ರಮದ ಮೌಲ್ಯ ನಿರ್ಧರಣೆ
೪. ಕೆಲಸದ ಬಲ ಮತ್ತು ಲಾಭ
೫. ಒಪ್ಪಂದಗಳು ಇವೆಲ್ಲವು ಒಡೆಯನ ಹಿಡಿತದಲ್ಲಿರುತ್ತವೆ. ಹೀಗಾಗಿ ಕೆಲಸಗಾರನಿಗೆ ತನ್ನ ಉತ್ಪಾದಿಸುವ ಬಲದಲ್ಲಿ 'ಕೆಲಸದ ಬಲ' ಹಣಕ್ಕಾಗಿ ಮಾರಲ್ಪಡುವುದರಿಂದ ತನ್ನ ಶ್ರಮದ ಒಡೆತನ ಕಳೆದುಕೊಂಡು ಯಜಮಾನನಿಂದ ಶೋಷಿತನಾಗುತ್ತಾನೆ.[೨೫]

ಕಾರ್ಲ್‌ಮಾರ್ಕ್ಸ್‌ರ ಈ ಚಿಂತನೆಗಳನ್ನು ನಾವು 'ಲೈಂಗಿಕ ಕೆಲಸ ಅಥವಾ ವೃತ್ತಿ'ಯೊಂದಿಗೆ ಹೋಲಿಸಿ ನೋಡಿದಾಗ, ಇದು 'ಲೈಂಗಿಕ ಸೇವೆಯನ್ನು ಉತ್ಪಾದಿಸುವ/ನೀಡುವ ಶಕ್ತಿಯೆಂದು' ನಿರ್ಧರಿಸಲ್ಪಡುತ್ತದೆ ಮತ್ತು ಕೆಲಸದ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಕಾರ್ಲ್‌ಮಾರ್ಕ್ಸ್‌ರವರ ಕೆಲಸದ ಚೌಕಟ್ಟಿನಲ್ಲಿ ಬರುವ ಎಲ್ಲ ಅಂಶಗಳು ಪೂರಕವಾಗಿರುತ್ತವೆ. ಯಜಮಾನ ಪುರುಷ/ಬಂಡವಾಳಕಾರನಾದರೆ ಆ ಕೆಲಸದಲ್ಲಿರುವ ಮಹಿಳೆಯು ಆಳಾಗಿರಬೇಕಾಗುತ್ತದೆ. ಲೈಂಗಿಕ ವಿಷಯದಲ್ಲಿ ಲೈಂಗಿಕ ಕೆಲಸದಲ್ಲಿರುವ ಮಹಿಳೆಗೆ ಅವಳ ದೇಹವೇ 'ಬಂಡವಾಳ'ವಾದರೆ, ಅದರಿಂದ ನೀಡುವ 'ಸೇವೆ ಅಥವಾ ಚಟುವಟಿಕೆ' ಶ್ರಮವಾಗುತ್ತದೆ. ಆ ಸೇವೆಯ ಸಂತೋಷವೇ 'ಉತ್ಪಾದನೆ'ಯಾಗುತ್ತದೆ. ಅವಳು ತನ್ನ ಗಿರಾಕಿಯನ್ನು ಆಕರ್ಷಿಸಲು ಉಪಯೋಗಿಸುವ ಜಾಣ್ಮೆಯು 'ಕೆಲಸದ ಬಲ'ವಾಗಿರುತ್ತದೆ.

ಯಜಮಾನ ಹಣಕ್ಕಾಗಿ ಇವುಗಳ ಮೇಲೆ ಒಪ್ಪಂದಗಳನ್ನು ಮಾಡುತ್ತಾನೆ. ಕೆಲಸದ ಪರಿಮಿತಿಯಲ್ಲಿ ಆ ಒಪ್ಪಂದಗಳಿಗೆ ಸೇವಕನು ಒಪ್ಪಲೇಬೇಕಾಗುತ್ತದೆ. ಅಲ್ಲಿ ಅವಳು ತನ್ನ ಅನುಕೂಲಕ್ಕಾಗಿ ತನ್ನ ಒಪ್ಪಂದಗಳನ್ನು ಯಜಮಾನನ ಮೇಲೆ ಹಾಕುವ ಅವಕಾಶಕ್ಕೆ ಅವಕಾಶವಿರುವುದಿಲ್ಲ. ಈ ಮೂಲಕ ಯಜಮಾನ ಒಡೆತನವನ್ನು ಸ್ಥಾಪಿಸಿ ಅವಳನ್ನು ಶೋಷಿಸುತ್ತಾನೆ.

ಅದನ್ನು 'ದಂಧೆ' ಅಂದರೆ 'ವ್ಯಾಪಾರ' ಎನ್ನುವ ಪದದ ಚೌಕಟ್ಟಿನೊಡನೆ ಹೋಲಿಸುವಾಗ 'ದಂದೆ' ಎನ್ನುವ ಪದ ಸಬಲೀಕರಣದ ಶಬ್ದವಾಗಿರುವುದನ್ನು ನಾವು ಈ ಕೆಲ ತರ್ಕಗಳಿಂದ ಕಾಣಬಹುದು. ಈ ಅಂಶವನ್ನು 'ಶ್ರಮದ ಮೌಲ್ಯ'ವನ್ನು ಬಂಡವಾಳಕಾರರು, ಅಧಿಕಾರಿ ವರ್ಗಗಳು ಅದನ್ನು ಪಡೆಯುವುದರಲ್ಲಿ ಕೆಲವು ಕುತಂತ್ರಗಳನ್ನು ಅಳವಡಿಸಿ ಅದರ ಮೇಲೆ ತಮ್ಮ ಒಡೆತನವನ್ನು ಸ್ಥಾಪಿಸಿಕೊಂಡಿದೆ. 'ಕೆಲಸ' ಅಥವಾ 'ಶ್ರಮ' ಎನ್ನುವ ಚೌಕಟ್ಟಿನಲ್ಲಿ ಆಗುತ್ತಿರುವ ಶೋಷಣೆಯನ್ನು ನಾವು ಇಲ್ಲಿ ಕಾಣಬಹುದು. ಈ ಪ್ರಾಯೋಗಿಕ ಉದಾಹರಣೆಯನ್ನು ದಂದೆ ಮಾಡುವ ಮಹಿಳೆಯ ಸಮುದಾಯಕ್ಕೆ ಹೋಲಿಸಿ ಇಲ್ಲಿ ನೋಡಲಾಗಿದೆ. ಕಾರ್ಲ್‌ಮಾರ್ಕ್ಸ್‌ವರು ಈ ಕೆಲಸದ ಚೌಕಟ್ಟನ್ನು ಅವರು ವಿರೋಧಿಸಿದರು. ಆದರೂ ಆ ಚೌಕಟ್ಟಿನಲ್ಲಿಯೆ ಅದು ಅಂದಿನಿಂದ ಇಂದಿನವರೆಗೂ ನಡೆಯುತ್ತಿದೆ.

ಆದರೆ ಲೈಂಗಿಕ 'ದಂದೆ' ಅಥವಾ 'ವ್ಯಾಪಾರ' ಅರ್ಥದಲ್ಲಿ ನಾವು ನೋಡುವುದಾದರೆ ಕೆಲಸದ ಚೌಕಟ್ಟಿನಲ್ಲಿ ಇತಿಮಿತಿಗಳು ಇರುವುದಿಲ್ಲ. ಬಂಡವಾಳ ಶ್ರಮ, ಶ್ರಮದ ಮೌಲ್ಯ, ಪೂರೈಕೆಯ ಒಡೆತನ, ಲಾಭ ನಷ್ಟ ಎಲ್ಲವೂ ಅವರಲ್ಲಿಯೇ ಇರುತ್ತದೆ. ಹೀಗಾಗಿ ಅವಳ ಶ್ರಮ, ಶ್ರಮದ ಮೌಲ್ಯ, ಪೂರೈಕೆಯ ಒಡೆತನ, ಲಾಭ ನಷ್ಟ ಎಲ್ಲದಕ್ಕೂ ಅವಳೇ

ಯಜಮಾನಿಯಾಗಿರುತ್ತಾಳೆ. ಅವಳು ತನ್ನ ಶ್ರಮದ ಬೆಲೆಯನ್ನು ಕೆಲಸದ ಸಮಯ ಕೆಲಸದ ಸ್ವರೂಪ, ಗಿರಾಕಿಗಳ ಮೇಲಿನ ಒಪ್ಪಂದ ಎಲ್ಲವನ್ನು ಅವಳೇ ನಿರ್ಧರಿಸುತ್ತಾಳೆ. ಈ ರೀತಿಯ ಸಂಬಂಧದಲ್ಲಿ ಇವರು ಮೇಲ್ವರ್ಗದವರಾಗಿ ಇರುವುದರಿಂದ ಅವರಲ್ಲಿಗೆ ಬರುವವರು ಇವರ ಒಪ್ಪಂದವನ್ನು ಪಾಲಿಸಬೇಕಾಗುತ್ತದೆ. ಇದರಿಂದ ಶೋಷಣೆಗೆ ಹೆಚ್ಚಿನ ಆಸ್ಪದವಿರುವುದಿಲ್ಲ ಮತ್ತು ಅವರ ಅಧಿಕಾರ ಅವರಲ್ಲಿಯೇ ನೆಲಸಿ ಅವಳನ್ನು ಸಬಲಳನ್ನಾಗಿ ಮಾಡುತ್ತದೆ.

ಈ ಅರ್ಥದಲ್ಲಿ ನಾವು 'ವ್ಯಾಪಾರವನ್ನು' ಸರಕುಗಳಿಗೆ ಹೋಲಿಸಿದಾಗ ಉದಾಹರಣೆಗೆ ಬೀದಿಯಲ್ಲಿ ತರಕಾರಿ ಮಾರುವವರಿಗೂ ಇವರಿಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕಾಗುತ್ತದೆ, ಬೀದಿಯಲ್ಲಿ ತರಕಾರಿ ಮಾರುವವರು ಮಾರುಕಟ್ಟೆಯಲ್ಲಿ ನಿಗದಿತ ಬೆಲೆಗೆ ತರಕಾರಿ (ಸರಕನ್ನು) ತರಬೇಕು, ಅದು ಖರ್ಚು ತೆಗೆದು ತಮ್ಮ ಲಾಭವನ್ನು ನಿಗದಿಸಬೇಕಾಗುತ್ತದೆ. ಈ ಲಾಭವು ತಮ್ಮ ಇಷ್ಟಕ್ಕೆ ಇರುವುದಿಲ್ಲ. ಇದು ಮಾರುಕಟ್ಟೆಯಲ್ಲಿ ನಿರ್ಧರವಾಗಿರುತ್ತದೆ. ಏಕೆಂದರೆ ಇವರು ಅತೀ ಹೆಚ್ಚಿನ ಬೆಲೆಯನ್ನು ನಿರ್ಧರಿಸಿದರೆ ಅವರ ಸರಕು ಮಾರಾಟವಾಗುವುದಿಲ್ಲ. ಮಾರುಕಟ್ಟೆಯು ಸರಕಿನ ಮತ್ತು ಅವರ ಶ್ರಮದ ಮೌಲ್ಯವನ್ನು ಪರೋಕ್ಷವಾಗಿ ಮೊದಲೆ ನಿರ್ಧರಿಸಿ ಬಿಟ್ಟಿರುತ್ತದೆ. ಹಾಗಾಗಿ ಅವರಿಗೆ ಸರಕಿನ ಮೇಲೆ ಬೆಲೆ ನಿಗದಿ ಮಾಡುವ ಸಂಪೂರ್ಣ ಅಧಿಕಾರವಿರುವುದಿಲ್ಲ. ಅದನ್ನು ಹೊರತು ಪಡಿಸಿದರೆ, ಅವರ ಸಮಯ ಕೆಲಸದ ಒತ್ತಡ, ನಿಯಮವು ಎಲ್ಲವು ಅವರಿಂದಲೇ ನಿರ್ಧರಿಸುವ ಸ್ವಾತಂತ್ರ್ಯ ಅವರಿಗಿರುತ್ತದೆ.

ಅದೇ ರೀತಿ ಇದನ್ನು 'ಸೇವೆಗೆ' ಹೋಲಿಸಿದಾಗ ಒಬ್ಬ ಖಾಸಗೀ ವೈದ್ಯನ ಸೇವೆಯು ಅವನು ಉಪಯೋಗಿಸುವ ಸರಕನ್ನು ಹೊರತು ಪಡಿಸಿದರೆ ಅವನ ಸಮಯ ಹಣ ಕೆಲಸದ ಸ್ವರೂಪ ಎಲ್ಲವೂ ಅವನ ಹಿಡಿತದಲ್ಲಿರುತ್ತದೆ. ಅವನು ತನ್ನ ಖರ್ಚು ವೆಚ್ಚಗಳನ್ನು ತೆಗೆದು ಅವನ ಶ್ರಮದ ಮೌಲ್ಯವನ್ನು ಅದಕ್ಕಿಂತಲೂ ಹೆಚ್ಚಿಗೆ ನಿರ್ಧರಿಸುವ ಅಧಿಕಾರ ಅವನಿಗಿರುತ್ತದೆ. ಹೀಗಾಗಿ ಅವನು ಯಾರಿಂದಲೂ ಶೋಷಣೆಗೆ ಒಳಪಡುವುದಿಲ್ಲ. ಮುಖ್ಯವಾಗಿ ಈ ಎರಡು ಉದಾಹರಣೆಯಲ್ಲಿ ಖರ್ಚು ವೆಚ್ಚವು ಪರೋಕ್ಷವಾಗಿ ಬಂಡವಾಳಕಾರನಿಂದ ಸರಕುಗಳ ಮೇಲೆ ನಿರ್ಧರಿಸಲ್ಪಟ್ಟಿರುವುದರಿಂದ ಸಂಪೂರ್ಣ ಶ್ರಮದ ಮೌಲ್ಯದ ನಿರ್ಧಾರ ತೆಗೆದುಕೊಳ್ಳುವಲ್ಲಿ ಸ್ವಲ್ಪ ಅಡಚಣೆ ಉಂಟಾಗುತ್ತದೆ.

ಆದರೆ 'ಲೈಂಗಿಕ ದಂದೆಯಲ್ಲಿ' ದಂದೆಯು/ವ್ಯಾಪಾರವು ಸೇವೆಗೆ ನಿರ್ಮಿತವಾಗಿದ್ದು ಈ ಮೇಲಿನ ಉದಾಹರಣೆಗಳಂತೆ ಖರ್ಚು ವೆಚ್ಚ ಬಂಡವಾಳಕಾರನ ಕೈಯಲ್ಲಿರದೆ, ಅವಳ ಕೈಯಲ್ಲಿರುತ್ತದೆ. ಏಕೆಂದರೆ ಅವಳ ದೇಹವೇ ಬಂಡವಾಳವಾಗಿರುವುದರಿಂದ ಅವಳ ದೇಹದ ಸ್ವಾತಂತ್ರ್ಯ ಮತ್ತು ಶ್ರಮದ ಮೌಲ್ಯ ಸಂಪೂರ್ಣವಾಗಿ ಅವಳಲ್ಲಿಯೇ ಇರುತ್ತದೆ. ಇದರಿಂದ ಅವಳಿಗೆ ಸಂಪೂರ್ಣ ಸ್ವಾತಂತ್ರ್ಯ ಅವಳಲ್ಲಿರುತ್ತದೆ. ಇಲ್ಲಿ ಶೋಷಣೆಗೆ ಆಸ್ಪದವಿರುವುದಿಲ್ಲ. ಈ ತತ್ವವನ್ನು ನಾವು ಕಾರ್ಮಿಕ ಮತ್ತು ಎಲ್ಲ ಮಹಿಳಾ ವರ್ಗದ ಶ್ರಮಕ್ಕೂ ಅನ್ವಯಿಸಬಹುದು. 'ಕೆಲಸ' ಎನ್ನುವ ಪದವು ಅವರ ಶ್ರಮದ ಮೌಲ್ಯವನ್ನು ಅವರೇ ನಿರ್ಧರಿಸುವ ಸ್ವಾತಂತ್ರ್ಯವನ್ನು ಅವರಿಗೆ ನೀಡುವುದಿಲ್ಲವಾದ್ದರಿಂದ 'ವ್ಯಾಪಾರ' ಎನ್ನುವ ಪದವು ಈ

ವರ್ಗಗಳನ್ನು ಎತ್ತಿಹಿಡಿಯುತ್ತದೆ. ನಾವು ಸಾಮಾನ್ಯವಾಗಿ ಶ್ರಮಿಕ ವರ್ಗಗಳು ಹಣಕ್ಕಾಗಿ ಕೊಡುವ ಸೇವೆಯನ್ನು ಕೆಲಸವೆಂದು ಬಂಡವಾಳಕಾರರು ವ್ಯಾಪಾರಸ್ಥರು ಹಣಕ್ಕಾಗಿ ಮಾಡುವ ಸೇವೆಯನ್ನು ವ್ಯಾಪಾರ ಎಂದು ನಿರ್ಧರಿಸುವುದರಲ್ಲಿಯೇ ಶ್ರಮಿಕರ ಶ್ರಮವನ್ನು ಕಬಳಿಸುವ ತಂತ್ರವು ಅಡಗಿದೆ. ಏಕೆಂದರೆ ಶ್ರಮವು ಹಣಕ್ಕಿಂತಲೂ ಅಮೂಲ್ಯವಾದುದು ಎಂಬುದು ನನ್ನ ಅಭಿಪ್ರಾಯವಾಗಿರುತ್ತದೆ.

ನಾನು ಪ್ರತಿಪಾದಿಸುವ ಶ್ರಮದ ಮೌಲ್ಯ ನಿರ್ಧರಣೆಯು ಸಿದ್ಧಾಂತವು ಈ ರೀತಿಯಾಗಿದೆ.

'ನನ್ನ ಶ್ರಮ ನನ್ನ ಬೆಲೆ - - - ಸಬಲೀಕರಣ

ನನ್ನ ಶ್ರಮ ಪರರ ಬೆಲೆ - - ದುರ್ಬಲೀಕರಣ'

ಇದು ಎಲ್ಲ ಕಾರ್ಮಿಕ ವರ್ಗಗಳಿಗೆ ಅನ್ವಯಿಸಿದಾಗ ಮಾತ್ರ ಆರ್ಥಿಕ ಸಬಲತೆಯನ್ನು ನಾವು ಕಾಣಬಹುದು.

೫. ಈ ವಿಷಯಕ್ಕೆ ಸಂಬಂಧಿಸಿದಂತೆ ಮುಂದುವರೆಯುವುದಾದರೆ ಇದು ಕೇವಲ ಹೆಸರಿನ ತೊಂದರೆಯಾಗಿರದೆ, ಅದನ್ನು ಗುರುತಿಸುವಲ್ಲಿನ ತೊಂದರೆಯಾಗಿ ಕಂಡು ಬರುತ್ತದೆ. 'ಹೆಸರಿಸುವ ಅನನ್ಯತೆ' ಪ್ರತಿಯೊಬ್ಬರ ಜೀವನದಲ್ಲಿ ಮುಖ್ಯವಾಗಿರುತ್ತದೆ. ಇದು ರಾಜಕೀಯ ವಾಗಿ ಅದರ ವ್ಯಾಪ್ತಿಯಲ್ಲಿ ಒಬ್ಬರಿಗೆ ತೀರ ಅನ್ಯಾಯವಾಗಿ ಇನ್ನೊಬ್ಬರು ಅದರ ಲಾಭವನ್ನು ಪಡೆಯದೇ, ಇದು ಸಮಾನತೆಯನ್ನು ಮತ್ತು ಗೌರವವನ್ನು ತರುವಂತಿರಬೇಕು. ಬೇರೆಯವರು ಒಂದು ವರ್ಗವನ್ನಾಗಲಿ ಸಮುದಾಯವನ್ನು ಹೆಸರಿಸುವಾಗ ಅವರ ಉದ್ದೇಶ ತುಂಬ ಮುಖ್ಯವಾಗಿರುತ್ತದೆ. ಅದಕ್ಕಾಗಿ ಅದು ಸ್ಪಷ್ಟವಾಗಿರಬೇಕು ಮತ್ತು ಆ ಉದ್ದೇಶ ಆ ಸಮುದಾಯದ ಮೇಲೆ ಯಾವ ಪರಿಣಾಮವನ್ನು ಬೀರುತ್ತದೆ ಮತ್ತು ಆ ಹೆಸರಿನಿಂದ ಆ ಜನತೆಗೆ ಆಗುವ ತೊಂದರೆಗಳು ಯಾವುವು ಎಂಬುವುದನ್ನು ಪರಿಶೀಲಿಸಬೇಕಾಗುತ್ತದೆ. ನಮ್ಮ ದೇಶದಲ್ಲಿ ಮೊದಲಿನಿಂದಲೂ, ಬೇರೆಯವರು ಬೇರೆಯವರನ್ನು ಗುರುತಿಸುವುದರಿಂದ ತಮ್ಮ ಒಡೆತನವನ್ನು ಆ ವರ್ಗದ ಜನರ ಮೇಲೆ ತೋರಿಸಿಕೊಂಡು ಮೇಲುಕೀಳು ಎನ್ನುವ ಮನೋಭಾವನೆಯನ್ನು ತರುತ್ತಿದೆ. ಅದು ಒಂದು ವ್ಯಕ್ತಿಯಾಗಲಿ, ಸಮುದಾಯವಾಗಲಿ ತಾನು ಏನು ತನಗೆ ಏನು ಬೇಕು ಎಂದು ನಿರ್ಧರಿಸುವ ಸಾಮರ್ಥ್ಯದ ವಿವೇಚನೆಯನ್ನು ಕಸಿದುಕೊಳ್ಳುತ್ತದೆ. ನಮ್ಮ ವ್ಯವಸ್ಥೆಯಲ್ಲಿ ದಲಿತ ಸಮುದಾಯ, ಕೂಲಿ ಕಾರ್ಮಿಕರ ಸಮುದಾಯ, ಮಹಿಳಾ ಸಮುದಾಯ ಮತ್ತು ಲೈಂಗಿಕ ಅಲ್ಪಸಂಖ್ಯಾತರಲ್ಲಿ ಇದು ಸಮಾನತೆಗೆ ಬದಲು ಶೋಷಣೆಯನ್ನು ಮಾಡುತ್ತಿದೆ. ಗಾಂಧೀಜಿ ದಲಿತರನ್ನು 'ಹರಿಜನ' ಎಂದು ಗುರುತಿಸುವ ಪ್ರಯತ್ನವನ್ನು ಅವರು ಮಾಡಿದರು. ಅವರ ಉದ್ದೇಶ ಒಳ್ಳೆಯದೇ ಆಗಿರ ಬಹುದು. ಆದರೆ ಆ ಹೆಸರು ಪುನಃ ದೇವರನ್ನು ನಂಬುವ ಮತ್ತು ನಂಬದಿರುವ ಜನರ ಮಧ್ಯೆ ಘರ್ಷಣೆಯನ್ನು ಸಮಾಜದಲ್ಲಿ ತರುವ ಪ್ರಯತ್ನವನ್ನು ಮಾಡಿತು. ಆ ಸಮುದಾಯಕ್ಕೆ ಪುನಃ ದೇವರ ಹೆಸರಿನಲ್ಲಿ ಶೋಷಣೆಯನ್ನು ಅನುಭವಿಸಲು ಒಂದು ಪರವಾನಿಗೆ ಕೊಟ್ಟಂತೆ ಈ ಸಮುದಾಯಕ್ಕೆ ಆಗಿರುತ್ತದೆ. ಏಕೆಂದರೆ ದೇವರ ಹೆಸರಿನಲ್ಲಿ ಅನುಭವಿಸಿದ ಶೋಷಣೆಗೆ

ಇಲ್ಲಿ ಮಿತಿ ಇರಲಿಲ್ಲ ಮತ್ತು ಗಾಂಧೀಜಿಯು ತನ್ನ ದೇವರ ನಂಬಿಕೆಯನ್ನು ಈ ಸಮುದಾಯದ ಮೇಲೆ ಹೇರುವ ಪ್ರಯತ್ನವನ್ನು ಈ ಸಮುದಾಯ ಒಪ್ಪಲಿಲ್ಲ. ಅವರು ತಮ್ಮನ್ನು ತಾವು ದಲಿತರೆಂದು ಹೆಸರಿಸಿಕೊಂಡು ದಲಿತ ಸಮುದಾಯವನ್ನು ಇನ್ನು ವಿಸ್ತಾರವಾದ ಪರಿಮಿತಿಗೆ ತರುವುದರ ಮೂಲಕ ಸಮಾನತೆಯನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಮಾಡುತ್ತಿದೆ. 'ದಲಿತ' ಎನ್ನುವ ಹೆಸರು ಶೋಷಣೆಗೆ ಒಳಗಾದವರು ಎಂದು ಅರ್ಥೈಸುವುದರ ಮೂಲಕ ಎಲ್ಲ ಶೋಷಿತರನ್ನು ಲಿಂಗ ಜಾತಿ ಬೇಧವಿಲ್ಲದೆ ಎಲ್ಲರನ್ನು ತನ್ನ ಪರಿಮಿತಿಯಲ್ಲಿ ಸೇರಿಸಿಕೊಳ್ಳುತ್ತದೆ.

ಕಾರ್ಲ್‌ಮಾರ್ಕ್ಸ್ ಅವರು ಕೆಲಸದ ಪರಿಮಿತಿಯನ್ನು ವಿವರಿಸುವುದರ ಮೂಲಕ ಅದು ಬಂಡವಾಳಕಾರರ ಪರವಾದ ಚೌಕಟ್ಟಾಗಿರುತ್ತದೆ ಎನ್ನುವುದರ ಮೂಲಕ ಬಂಡವಾಳಕಾರರ ಒಡೆತನದ ಅಧಿಕಾರವನ್ನು ಖಂಡಿಸಿದರು. ಕೆಲಸ, ಹರಿಜನ, ವೇಶ್ಯೆ ಇತ್ಯಾದಿ ಪದಗಳು ಖಂಡಿತವಾಗಿ ಒಳ್ಳೆಯವು. ಆದರೆ ಆ ಪದಗಳಿಗೆ ನಿರ್ಮಿಸಿರುವ ಚೌಕಟ್ಟು ಮಾತ್ರ ಸಮಾನತೆಯನ್ನು ತರುವಂತಹವಲ್ಲ. ಅದಕ್ಕಾಗಿ ನಾವು ಆ ಹೆಸರನ್ನು ಒಪ್ಪಿಕೊಳ್ಳುವಾಗ ಸ್ವಲ್ಪ ಚಿಂತಿಸಬೇಕಾಗುತ್ತದೆ. ಅದರ ಚೌಕಟ್ಟನ್ನು ಸರಿಪಡಿಸಲು ಅನೇಕ ಶತಮಾನಗಳು ಕಳೆದವು. ಆದರೂ ಆ ಹೆಸರಿನಿಂದ ಬದಲಾವಣೆ ಸಾಧ್ಯವಾಗುತ್ತಿಲ್ಲ. ಅದಕ್ಕಾಗಿ ಹೆಸರಿನ ವರ್ಗಾವಣೆ ಮುಖ್ಯವಾಗುತ್ತದೆ. ಒಂದು ಹೆಸರಿನಿಂದ ಇನ್ನೊಂದು ಹೆಸರಿಗೆ ವರ್ಗಾವಣೆಯಾಗುವುದರಿಂದ ಆ ಹೆಸರಿನ ಚೌಕಟ್ಟಿನಲ್ಲಿ ಸುಲಭವಾಗಿ ಸೇರಿಕೊಂಡು ಅದರ ವ್ಯಾಪ್ತಿಯ ಅನುಕೂಲಗಳನ್ನು ಸುಲಭವಾಗಿ ಪಡೆಯಬಹುದು. ಲೈಂಗಿಕ ಸೇವೆಯನ್ನು ಕೆಲಸವೆಂದು ಈ ಸಮುದಾಯವು ಒಪ್ಪಿಕೊಳ್ಳುವಂತಹ ಪರಿಸ್ಥಿತಿಯನ್ನು ಅಂತಾರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಈ ಸಮುದಾಯಕ್ಕೆ ಹೇರಿದೆ.[೨] ಈ ಸಮುದಾಯವನ್ನು ಕಾರ್ಮಿಕ ಹಕ್ಕುಗಳಿಗೆ ಒಳಪಡಿಸಬಹುದೆಂಬ ಉದ್ದೇಶವನ್ನು ಇಟ್ಟು ಇದನ್ನು ಕೆಲಸ ಎನ್ನುತ್ತದೆ'. ಆದರೆ ಎಷ್ಟು ದೇಶಗಳಲ್ಲಿ ಈ ಲಾಭವನ್ನು ಈ ಸಮುದಾಯಕ್ಕೆ ಒದಗಿಸಿದೆ ಎಂಬುವುದು ಹುಬ್ಬೇರಿಸುವ ವಿಷಯವಾಗಿದೆ. ಯಾಕೆ ಐ.ಎಲ್.ಓ. ಮತ್ತು ಇದಕ್ಕೆ ಸಂಬಂಧಿಸಿದ ಸಂಸ್ಥೆಗಳು ಈ ಸಮುದಾಯದ ಇಚ್ಛೆಯಂತೆ ಅವರಿಗೆ ಘನತೆಯ ಜೀವನದಲ್ಲಿ ಉನ್ನತ ಸ್ಥಾನವನ್ನು ನೀಡಲು ಇವರನ್ನು 'ಉದ್ಯೋಗ' ವರ್ಗದಲ್ಲಿ ಅಥವಾ ಬಂಡವಾಳಕಾರ ವರ್ಗದಲ್ಲಿ ಸೇರಿಸಿ ಅವರ ಹಕ್ಕುಗಳನ್ನು ಈ ಸಮುದಾಯಕ್ಕೆ ನೀಡಬಹುದಾಗಿತ್ತಲ್ಲವೆ? ಇದೇ ಅಧಿಕಾರ ವರ್ಗಗಳು ಬಂಡವಾಳಶಾಹಿಗಳು ಬೇರೆ ಸಮುದಾಯವನ್ನು ಹೆಸರಿಸುವ ರಾಜಕೀಯ ತಂತ್ರವಾಗಿದೆ. ವೇಶ್ಯಾಗೃಹಗಳಲ್ಲಿ ಮಹಿಳೆಯರನ್ನು ಬಂಡವಾಳಕಾರರು ಸಂತೋಷಕ್ಕಾಗಿ ಅವರನ್ನು ದುಡಿಸಿಕೊಳ್ಳುವ ಪ್ರವೃತ್ತಿ ಮಾತ್ರ ಹಾಗೆಯೆ ಮುಂದುವರೆದಿದೆ.

ಲೈಂಗಿಕ ಕ್ಷೇತ್ರದಲ್ಲಿರುವ ಮಹಿಳೆಯರನ್ನು ಗುರುತಿಸುವ ವಿಷಯದಲ್ಲಿ ನಾವು ಅನೇಕ ಹೆಸರಿನ ಬದಲಾವಣೆಯನ್ನು ಕಾಣಬಹುದು. ಇದು ಯಾವ ಸಮುದಾಯವನ್ನು ಗುರುತಿಸುವಲ್ಲಿ ಆಗಲಿಲ್ಲ ಎಂಬುವುದು ಗಮನಾರ್ಹ ಸಂಗತಿ. ನರ್ತಕಿ, ದಾಸಿ ವೇಶ್ಯೆ, ಸೂಳೆ ಕೆಲಸ,

ದಂಧೆ ಮಾಡುವವರು ಇತ್ಯಾದಿ... ಈ ಹೆಸರುಗಳಲ್ಲಿ ಬದಲಾವಣೆಯು ಆಗುತ್ತಿರುವುದು ಸಹಜವಾಗುತ್ತದೆ. ಎಲ್ಲಿಯವರೆಗೆ ಈ ಸಮುದಾಯ ಅದನ್ನು ಒಪ್ಪಿಕೊಳ್ಳುವುದಿಲ್ಲವೋ ಮತ್ತು ತನ್ನನ್ನು ತಾನು ಗುರುತಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಈ ಪ್ರಕ್ರಿಯೆ ನಡೆಯುತ್ತಿರುತ್ತದೆ. 'ದಂಧೆ' ಎನ್ನುವ ಪದವು ಹಳೆಯದಾಗಿದ್ದು ಅದು ಬೇರೆಯವರ ವಿಚಾರದಿಂದ ಬೆಳೆದು ಬಂದಿದೆ. ಆದರೆ ಅದರ ಚೌಕಟ್ಟು, ಸಬಲೀಕರಣದ ವಿಚಾರಗಳಿಂದ ಕೂಡಿರುವುದರಿಂದ, ಬೆಂಗಳೂರಿನ ಸಾಧನ (ದಂದೆಯಲ್ಲಿರುವ ಮಹಿಳೆಯರ) ಗುಂಪು ತಮ್ಮನ್ನು ತಾವು ಈ ಹೆಸರಿನಿಂದ ಗುರುತಿಸಿಕೊಳ್ಳಲು ಹೊರಟಿರುವ ಪ್ರಯತ್ನ ಇದಾಗಿದೆ. ಇದನ್ನು ಸಮಾಜ ಮತ್ತು ಕಾನೂನು ಒಪ್ಪಿಕೊಂಡರೆ, ಮಹಿಳೆಯರನ್ನು ಕಾರ್ಮಿಕರನ್ನು ಸಬಲೀಕರಿಸುವ ಎಲ್ಲ ಯೋಜನೆಗಳಿಗಿಂತ ಈ ಯೋಜನೆಯು ತುಂಬ ಫಲಪ್ರದವಾಗಿರುತ್ತದೆ ಎನ್ನುವುದರಲ್ಲಿ ಸಂಶಯವೇ ಇಲ್ಲ ಎಂಬ ನಿಲುವು ನನ್ನದಾಗಿದೆ.

೬. ಈ ಚರ್ಚೆಯು "ಲೈಂಗಿಕ ದಂದೆಯ ಸಮುದಾಯದಲ್ಲಿನ ವರ್ಗಗಳು" ಮತ್ತು ಆ ವರ್ಗಗಳಲ್ಲಿನ ಭಿನ್ನತೆಗಳು ಯಾವುವು? ಅವು ಹೇಗೆ ಲಿಂಗವ್ಯವಸ್ಥೆ, ಸಮಾಜ ಮತ್ತು ಕಾನೂನಿನ ಮೇಲೆ ಪ್ರಭಾವ ಬೀರುತ್ತಿವೆ ಹಾಗೂ ಈ ಸಮುದಾಯದ ವಿಚಾರಗಳೊಂದಿಗೆ ಸಮ್ಮತ, ಘರ್ಷಣೆ ಮತ್ತು ವಿರುದ್ಧದ ಪ್ರಭಾವ ಬೀರುತ್ತವೆ ಎಂಬ ವಿಚಾರಗಳನ್ನು ನಾವು ಇಲ್ಲಿ ಗಮನಿಸಬಹುದು.

ಪುನಃ ಒಂದು ಸಾರಿ ಲೈಂಗಿಕತೆಯನ್ನು ವೃತ್ತಿಯನ್ನಾಗಿಸಿಕೊಂಡ ಸಮುದಾಯದ ವ್ಯಾಖ್ಯಾನವನ್ನು ಪುನರ್‌ಪರಿಶೀಲಿಸಿದರೆ, "ಲೈಂಗಿಕ ಕ್ರಿಯೆಗಳನ್ನು ಹಣಕ್ಕಾಗಿ ಅಥವಾ ಅದರ ಸಮನಾದ ಬೆಲೆಬಾಳುವ ವಸ್ತುಗಳಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ತನ್ನ ಗಿರಾಕಿಗಳಿಗೆ/ಸ್ನೇಹಿತ/ಜೊತೆಗಾರರಿಗೆ ಅದಲುಬದಲು ಮಾಡುವ ಮಹಿಳೆಯರ ಸಮುದಾಯವನ್ನು ಲೈಂಗಿಕ ದಂದೆಯ ಸಮುದಾಯವೆಂದು ಕರೆಯಬಹುದು." ಈ ಸಮುದಾಯದಲ್ಲಿ ಬರುವ ಮುಖ್ಯ ಘಟಕಾಂಶಗಳು.

- ಲೈಂಗಿಕ ಕ್ರಿಯೆ
- ಹಣ/ಸಮಾನವಾದ ವಸ್ತು
- ಗಿರಾಕಿ

ಪ್ರತ್ಯಕ್ಷ ಅಥವಾ ಪರೋಕ್ಷ ಲೈಂಗಿಕ ಸೇವೆ ಇತ್ಯಾದಿ.... ಸಾಮಾನ್ಯವಾಗಿ ಈ ಮಿತಿಗಳಲ್ಲಿ ಸೇವೆ ನೀಡುವ ಯಾರಾದರೂ ಈ ಸಮುದಾಯಕ್ಕೆ ಒಳಪಡುತ್ತಾರೆ. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ ಹಿಂದಿನ ಕಾಲದಲ್ಲಿ ನಾವು ಮೂರು ವರ್ಗಗಳನ್ನು ಗಮನಿಸುತ್ತೇವೆ. ಪ್ರಸ್ತುತ ಸಮಾಜದಲ್ಲಿ ನಾವು ಇದನ್ನು ನಾಲ್ಕು ವರ್ಗಗಳನ್ನಾಗಿ ನಾವು ವಿಂಗಡಿಸಬಹುದು. ಈ ವರ್ಗಗಳನ್ನು ನಾವು ಈ ರೀತಿಯಾಗಿ ಕಾಣಬಹುದು.

ಮೊದಲನೆಯ ವರ್ಗವು - ಚಿತ್ರನಟಿಯರು, ರೂಪದರ್ಶಿಯರು, ಕರೆ ಹುಡುಗಿಯರು ಇಂಟರ್‌ನೆಟ್ ಲೈಂಗಿಕ ಸೇವೆಯನ್ನು ನೀಡುವವರು. ಇವರ ಸೇವೆಯು ಅದೃಶ್ಯ ಮತ್ತು

ಪರೋಕ್ಷವಾಗಿ ಈ ಸಮುದಾಯದಲ್ಲಿ ಬರುತ್ತಾರೆ. ಈ ವರ್ಗದವರಿಗೆ ಪ್ರೇಕ್ಷಕರು ಬಂಡವಾಳಗಾರರು ಗಿರಾಕಿಗಳಾಗಿರುತ್ತಾರೆ. ಈ ವರ್ಗದ ಮಹಿಳೆಯರಲ್ಲಿಯೂ ಎರಡು ವರ್ಗವನ್ನು ಕಾಣಬಹುದು. ಈ ಮೊದಲನೆಯ ವರ್ಗದ ಮಹಿಳೆಯರು ತಮ್ಮ ಶ್ರಮದ ಮೌಲ್ಯ ತಾವೇ ನಿರ್ಧರಿಸುತ್ತಾರೆ. ಏಕೆಂದರೆ, ಈ ವರ್ಗದ ಮಹಿಳೆಯ ರೂಪ, ಯೌವ್ವನ, ಚಾಣಕ್ಷತನವನ್ನು ಸಮಾಜ ಒಪ್ಪಿಕೊಂಡಿರುತ್ತದೆ. ಇನ್ನೊಂದು ವರ್ಗದ ಮಹಿಳೆಯರು ತಮ್ಮ ಶ್ರಮದ ಮೌಲ್ಯವನ್ನು ತಾವು ನಿರ್ಧರಿಸುವುದಿಲ್ಲ. ಅದು ಬಂಡವಾಳಕಾರರಿಂದ ನಿಗದಿಯಾಗುತ್ತದೆ. ಏಕೆಂದರೆ, ಇವರ ರೂಪ, ಯೌವ್ವನ, ಚಾಣಕ್ಷತನವನ್ನು ಸಮಾಜವು ಮೊದಲಿನ ವರ್ಗದಷ್ಟು ಅವರನ್ನು ಮೆಚ್ಚದಿದ್ದರೂ, ಇವರನ್ನು ತಿರಸ್ಕಾರ ಮಾಡುವುದಿಲ್ಲ. ಇವರ ಸೇವೆಯು ಪ್ರೇಕ್ಷಕರನ್ನು ಪರೋಕ್ಷವಾಗಿ ತಲುಪುತ್ತದೆ. ಉದಾ:- ಒಬ್ಬ ರೂಪದರ್ಶಿ ಅರೆಬರೆ ನಗ್ನ ಭಿತ್ತಿ ಚಿತ್ರಗಳು, ಸಿನಿಮಾ ತಾರೆಯರು ಸಿನಿಮಾದಲ್ಲಿ ಲೈಂಗಿಕತೆಯಲ್ಲಿ ತೊಡಗುವ ದೃಶ್ಯಗಳನ್ನು ಪ್ರೇಕ್ಷಕರು ನೋಡುತ್ತಿರುವಾಗ, ಅವರಿಗೆ ಕಾಮ ಪ್ರಚೋದನೆಯನ್ನು ನೀಡುವುದು ಅವರಲ್ಲಿ ರೋಮಾಂಚನ ಮತ್ತು ಲೈಂಗಿಕ ಸುಖವನ್ನು ಪಡೆಯುತ್ತಾರೆ. ಇವರ ಹಾವಭಾವ ವೇಷಭೂಷಣ, ಸೌಂದರ್ಯವನ್ನು ಸಮಾಜ ಒಪ್ಪುತ್ತದೆ ಮತ್ತು ನಕಲು ಮಾಡುತ್ತದೆ. ಹೀಗಾಗಿ ಈ ವರ್ಗದ ಮಹಿಳೆಯರಿಗೆ ಹಣ, ಅಧಿಕಾರ ಶಿಕ್ಷಣ ಜನ ಬೆಂಬಲ ಇರುವುದರಿಂದ ಇವರ ಜೀವನದಲ್ಲಿ ಆಯ್ಕೆಗೆ ಅವಕಾಶಗಳು ಸಾಕಷ್ಟು ಇರುತ್ತದೆ. ಈ ವರ್ಗದಲ್ಲಿ ಇತರ ವರ್ಗಗಳ ಮಹಿಳೆಯರಂತೆ ಅತಿಯಾದ ಲೈಂಗಿಕ ಶೋಷಣೆ ದೌರ್ಜನ್ಯವನ್ನು ಅನುಭವಿಸದಿದ್ದರೂ, ನಿರ್ದೇಶಕರಿಂದ ಶ್ರೀಮಂತ ವರ್ಗದವರಿಂದ ಇವರಿಗೆ ದೌರ್ಜನ್ಯವನ್ನು ತಪ್ಪಿರುವುದಿಲ್ಲ. ಇದಕ್ಕೆ ಉದಾಹರಣೆ:- ಜಸಿಕಾಲಾಲ್ ರೂಪದರ್ಶಿಯ ಹತ್ಯೆಯ ಪ್ರಕರಣ ವಾದಾಗ ಇಡೀ ಲೈಂಗಿಕ ದಂದೆಯ ಸಮುದಾಯ ವಿಚಲಿತವಾಗಿದ್ದಿತು. ಉಚ್ಚನ್ಯಾಯಾಲಯದ ತೀರ್ಮಾನಕ್ಕೆ ಸಂತೋಷಿಸಿತ್ತು. ಇದು ಯಾಕೆಂದರೆ, ಅವಳಲ್ಲಿ ಉಚ್ಚನ್ಯಾಯಾಲಯಕ್ಕೆ ಅಪೀಲು ಹೋಗುವ ಅವಕಾಶವಿತ್ತು. ಈ ವರ್ಗದ ಜನರಲ್ಲಿ ಸಾಮಾಜಿಕ ಮತ್ತು ಕಾನೂನಿನ ನೈತಿಕತೆಯ ಪ್ರಶ್ನೆಯೇ ಇಲ್ಲ. ಲೈಂಗಿಕ ಸ್ವೇಚ್ಛೆ ಇವರಿಗಿದೆ. ಇವರ ಅರೆ ನಗ್ನ ಬಟ್ಟೆಯನ್ನು ಹಾಕಿ ಬೀದಿ ಬೀದಿಗಳಲ್ಲಿ ಸಾರ್ವಜನಿಕರಿಗೆ ಕಾಮ ಪ್ರಚೋದನೆ ಮಾಡುವ ಅವರ ಅರೆನಗ್ನ ಭಿತ್ತಿಚಿತ್ರಗಳನ್ನು ಸಾರ್ವಜನಿಕವಾಗಿ ಬೀದಿ ಬೀದಿಗಳಲ್ಲಿ ಅಂಟಿಸಿದ್ದರು. ಇವರಿಗೆ ಐ.ಟಿ.ಪಿ. ಕಾಯಿದೆಯ ೮(ಬಿ) ಸೆಕ್ಷನ್ ಆಗಲಿ ಅಥವಾ ನೈತಿಕ ಪ್ರಶ್ನೆಯಾಗಲಿ ಇವರನ್ನು ಅಪರಾಧಿವೆನಿಸು ವುದಿಲ್ಲ. ಅದಕ್ಕಿಂತಲೂ ಅವರಿಗೆ ಬೇಡಿಕೆಯು ಜಾಸ್ತಿ ಇರುತ್ತದೆ.

ಈ ರೀತಿಯ ವ್ಯವಸ್ಥೆಯು ಲಿಂಗ ತಾರತಮ್ಯದಲ್ಲಿ ಪುನಃ ಮಹಿಳೆಯರ ಸೌಂದರ್ಯ, ರೂಪ ಯೌವ್ವನ ಚಾಣಕ್ಷತೆಯನ್ನು ಮಹಿಳೆಯರ ಮೇಲೆ ಹೇರುತ್ತಿದೆ.

### ಎರಡನೆಯ ವರ್ಗದ ಜನರು

ವೇಶ್ಯಾಗೃಹಗಳಲ್ಲಿ ವೇಶ್ಯಾವಾಟಿಕೆ ಮಾಡುವವರು. ಲಾಡ್ಜ್, ರೆಸ್ಟೋರೆಂಟ್ ಮತ್ತು ಬಾರ್‌ಗಳಲ್ಲಿ ದಂದೆ ಮಾಡುವವರು. ಈ ವರ್ಗದ ಜನರಲ್ಲಿ ಸೇವೆಯ ಪ್ರತ್ಯಕ್ಷವಾಗಿ

ದೃಶ್ಯವಾಗಿರುತ್ತದೆ. ಇವರು ಒತ್ತಾಯದಿಂದ ಬರುವವರು. ಈ ವರ್ಗದ ಮಹಿಳೆಯರು ಈ ಚೌಕಟ್ಟಿನಲ್ಲಿ ಇರಬೇಕಾಗುತ್ತದೆ. ಈ ವರ್ಗದ ಮಹಿಳೆಯರು ತಮ್ಮ ಶ್ರಮದ ಮೌಲ್ಯವನ್ನು ತಾವು ನಿರ್ಧರಿಸುವ ಸ್ವಾತಂತ್ರ್ಯ ಇವರಲ್ಲಿ ಇಲ್ಲ. ಇವರು ಕೆಲಸ ಇನ್ನುವ ಚೌಕಟ್ಟಿನಲ್ಲಿರಬೇಕು. ಬಂಡವಾಳಕಾರರಲ್ಲಿ ಶ್ರಮದ ಮೌಲ್ಯವಿರುತ್ತದೆ/ತಲೆಹಿಡುಕರ ಮಾತಿನಂತಿರುತ್ತದೆ. ಗಿರಾಕಿಗಳಿಗೆ ಒತ್ತಾಯ ಸೇವೆ ಸಲ್ಲಿಸಬೇಕು. ಆರ್ಥಿಕವಾಗಿ ಶೋಷಣೆಯಿಂದ ಬಂದವರು ಮತ್ತು ಮಾರಲ್ಪಡುವವರು. ಚಿತ್ರನಟಿಯರ, ರೂಪದರ್ಶಿಗಳ ವೇಷಭೂಷಣ ನಕಲು ಮಾಡಬೇಕು. ಕಡ್ಡಾಯವಾಗಿ ನೃತ್ಯ ಮತ್ತು ಹಾವಭಾವಗಳ ಕಲೆಗಳನ್ನು ಕಲಿತಿರಬೇಕು. ಈ ವರ್ಗವು ಸಂಪೂರ್ಣವಾಗಿ ಶೋಷಿತರಾಗಿರುತ್ತಾರೆ. ಕಾನೂನಿನಲ್ಲಿ ಈ ಮಹಿಳೆಯರ ಸಂಪೂರ್ಣ ರಕ್ಷೆ ಇದ್ದರೂ ಕಾನೂನಿನ ಕ್ರಮ ನಡೆಯುತ್ತಿಲ್ಲ. ಈ ವರ್ಗದ ಜನರಲ್ಲಿ ಗುಲಾಮಗಿರಿ ಮನೋಭಾವ, ಕೀಳರಿಮೆ, ಭಯ, ನಿಸ್ಸಹಾಯಕತೆ ಗುಣಗಳು ಹೆಚ್ಚಿರುತ್ತವೆ. ನೈತಿಕತೆಯ ಪ್ರಶ್ನೆ ಇವರ ಬದುಕಿನಲ್ಲಿ ಯಾವಾಗಲೂ ಕಾಡುತ್ತದೆ. ಇದಕ್ಕೆ ಉದಾಹರಣೆಯಾಗಿ ಬಾರ್‌ಗಳಲ್ಲಿ ನೃತ್ಯ ಮಾಡುವ ಮಹಿಳೆಯರ ಬಗ್ಗೆ ಮಹಾರಾಷ್ಟ್ರ ಸರ್ಕಾರವು ಮುಂಬೈ ಕೋರ್ಟಿನಲ್ಲಿ ಹೂಡಿದ ಮೊಕದ್ದಮೆ ಸಾಕ್ಷಿಯಾಗಿದೆ.[೨] ಈ ಕ್ರಿಯೆಯು ಇಡೀ ಲೈಂಗಿಕ ಸಮುದಾಯದ ಮಹಿಳೆಯರ ನಡುವೆ ನಡೆದ ಬದುಕಿನ ಪ್ರಶ್ನೆ ಪ್ರಶ್ನೆಯಾಗಿರದೆ, ತೀರ್ಪಿನ ಮೂಲಕ ಆಶೆ ಬಂದಂತಾದರೂ ಎಲ್ಲಿಯವರೆಗೆ....? ಎಂಬ ಪ್ರಶ್ನೆ ಇವರಿಗೆ ಈ ವರ್ಗದ ಪ್ರಶ್ನೆಯಾಗಿಯೇ ಉಳಿದಿದೆ. ಪುರುಷ ಪ್ರಧಾನ ಲಿಂಗ ವ್ಯವಸ್ಥೆಯಲ್ಲಿ ಮಹಿಳೆಯರನ್ನು ಲೈಂಗಿಕ ಪೂರೈಕೆಯ ವಸ್ತುಗಳಾಗಿ ಪರಿಗಣಿಸುತ್ತಾರೆ. ಪೊಲೀಸರ ದೌರ್ಜನ್ಯ ನೇರವಾಗಿಲ್ಲದಿದ್ದರೂ ಇವರ ಮೇಲೆ ಪರಿಣಾಮ ಬೀರುತ್ತದೆ. ಇವರು ಲೈಂಗಿಕ ಗುಲಾಮರಾಗಿರುತ್ತಾರೆ. ಇವರಿಗೆ ಆ ಚೌಕಟ್ಟಿನಲ್ಲಿರುವವರೆಗೂ ಸ್ವಾತಂತ್ರ್ಯವಿರುವುದಿಲ್ಲ.

ಲಿಂಗ ವ್ಯವಸ್ಥೆಯಲ್ಲಿ ಲೈಂಗಿಕತೆಯ ಸಂಪೂರ್ಣ ಒಡೆತನ ಪುರುಷನದಾಗಿರುತ್ತದೆ. ಅವಳ ಆಶೆ ಬೇಕು ಬೇಡಗಳಿಗೆ ಕಿಂಚಿತ್ತೂ ಆಸ್ಪದವಿರುವುದಿಲ್ಲ. ಇವರ ಗಳಿಕೆಯ ಹಣದಲ್ಲಿ ಬಹಳ ಜನ ಬದುಕುತ್ತಾರೆ.

### ಮೂರನೇಯ ವರ್ಗದ ಜನರು

ಬೀದಿಗಳಲ್ಲಿ ದಂಧೆ ಮಾಡುವ ಮಹಿಳೆಯರು - ಇವರು ಸೇವೆಯ ಪ್ರತ್ಯಕ್ಷ ಮತ್ತು ದೃಶ್ಯವಾಗಿರುತ್ತದೆ. ಇವರು ಸಮಾಜದಲ್ಲಿ ಜನರೊಂದಿಗೆ ಬೆರೆತಿರುತ್ತಾರೆ. ಇವರು ತಮ್ಮ ಶ್ರಮದ ಮೌಲ್ಯ ತಾವೇ ನಿರ್ಧರಿಸುತ್ತಾರೆ. ಬೀದಿಯೇ ಇವರ ವಾಸಸ್ಥಾನ. ಇವರು ನಿರಾಶ್ರಿತರು, ಆರ್ಥಿಕವಾಗಿ ಲೈಂಗಿಕವಾಗಿ ಶೋಷಣೆಗೆ ಒಳಗಾದವರು. ಈ ಜನರು ಸಾಮಾಜಿಕ ಮತ್ತು ಕಾನೂನಿನ ನೈತಿಕತೆಗೆ ನೇರವಾಗಿ ಬಲಿಯಾಗುತ್ತಾರೆ. ಇವರ ಮೇಲೆ ಕೌಟುಂಬಿಕ ಗಿರಾಕಿ, ಗೂಂಡ, ಪೋಕರಿ, ಪೊಲೀಸ್ ದೌರ್ಜನ್ಯ ಹೆಚ್ಚಿರುತ್ತದೆ. ಇವರ ಬೆಂಬಲಕ್ಕೆ ಸಮಾಜವಾಗಲಿ ಕಾನೂನಾಗಲಿ ಇಲ್ಲ. ಇವರ ದೇಹವು ಸಾರ್ವಜನಿಕ ಆಸ್ತಿ ಎಂಬ ರೀತಿಯಲ್ಲಿ ಗುರುತಿಸಲ್ಪಡುತ್ತದೆ. ಗಿರಾಕಿಗಳನ್ನು ಆಕರ್ಷಿಸಲು ತುಂಬ ಪ್ರಯತ್ನ ಮಾಡಬೇಕಾಗುತ್ತದೆ.

ಗಿರಾಕಿಗಳ ಇಷ್ಟದಂತೆ ಇವರ ಲೈಂಗಿಕ ಕ್ರಿಯೆ ನಡೆಯುತ್ತದೆ. ಲಿಂಗವ್ಯವಸ್ಥೆಯಲ್ಲಿನ ಹೆಣ್ಣುತನದ ಗುಣಲಕ್ಷಣಗಳನ್ನು ಇವರು ಪಾಲಿಸಬೇಕಾಗುತ್ತದೆ. ಅದಕ್ಕಾಗಿ ಇವರು ಕದ್ದು ಮುಚ್ಚಿ ಮನೆಯವರ ಗಮನಕ್ಕೆ ಬಾರದಂತೆ ಕೆಲವರು ದಂದೆ ಮಾಡಿದರೆ ಇನ್ನೂ ಕೆಲವರನ್ನು ಗಂಡಂದಿರು ಮತ್ತು ಮನೆಯವರು ಈ ಕೆಲಸಕ್ಕೆ ಒತ್ತಾಯಿಸಿ ಅವರ ಗಳಿಕೆಯಲ್ಲಿ ಬದುಕುತ್ತಾರೆ. ಲಿಂಗ ತಾರತಮ್ಯದಲ್ಲಿ ಮತ್ತು ಲೈಂಗಿಕತೆಯ ಒಡೆತನದಲ್ಲಿ ಪುರುಷರು ಮುಖ್ಯನಾಗಿರುತ್ತಾರೆ.

ಈ ಮೇಲಿನ ವರ್ಗದ ಲೈಂಗಿಕ ಸಂಬಂಧ 'ಪರಲಿಂಗ' ಸಂಬಂಧಕ್ಕೆ ಮಾತ್ರ ಸೀಮಿತ ವಾಗಿರುತ್ತದೆ. ಮೊದಲಿನ ವರ್ಗವನ್ನು ಹೊರತುಪಡಿಸಿ, ಉಳಿದ ಎಲ್ಲ ವರ್ಗದ ಮಹಿಳೆಯರು ಆರ್ಥಿಕವಾಗಿ ಸಾಮಾಜಿಕ ಶೋಷಿತ ವರ್ಗದ ಮಹಿಳೆಯರು. ಇವರ ಜೀವನದಲ್ಲಿ ಹಣ ಅಧಿಕಾರ. ಶಿಕ್ಷಣವಿಲ್ಲವುದರಿಂದ, ದಂದೆ ಮಾಡದಿದ್ದರೆ, ಅವರ ಜೀವನ ನಡೆಸುವುದು ಕಷ್ಟವಾಗಿರುತ್ತದೆ. ನೈತಿಕ ಪ್ರಶ್ನೆ ಸಮಾಜ ಇವರ ಮೇಲೆ ಹೊರಿಸಿರುವುದರಿಂದ ಅವರನ್ನು ಒಳ್ಳೆ ಮತ್ತು ಕೆಟ್ಟ ಮಹಿಳೆ ಎಂದು ಗುರುತಿಸುತ್ತೇವೆ. ಮಾತ್ರವಲ್ಲದೆ ಕಾನೂನಿನಲ್ಲಿ ಇವರು ಅಪರಾಧಿಗಳಾಗಿರುತ್ತಾರೆ. ತುಂಬ ಮಹಿಳೆಯರು ಸಮಾಜದ ನಿಯಮದಲ್ಲಿ ಇವರಿಗೆ ಅಷ್ಟಾಗಿ ನಂಬಿಕೆ ಇರುವುದಿಲ್ಲ. ಏಕೆಂದರೆ, ಇವರು ಮದುವೆಯ ಸಂಬಂಧಗಳಿಂದ ಮೋಸ ಹೋಗಿರುವವರು. ಮನಸ್ಸಿನಲ್ಲಿ ಒಂದು ಜೊತೆಗಾರ ಇರಬೇಕು ತನ್ನ ರಕ್ಷಣೆಗಾಗಿ ಎಂದು ಆಶಿಸುತ್ತಾರೆ, ಈ ಮಹಿಳೆಯರು ತುಂಬ ಧೈರ್ಯವಂತರಾಗಿರುತ್ತಾರೆ. ಸಮಾಜ ಮತ್ತು ಲಿಂಗವ್ಯವಸ್ಥೆಯಲ್ಲಿ ಮಹಿಳೆಯರಿಗಿರಬೇಕಾದ ಗುಣಲಕ್ಷಣಗಳು ಇವರಿಗಿದ್ದರೂ, ಗಂಡಸಿನ ಸ್ವಭಾವಗಳು ಇವರಲ್ಲಿರುತ್ತದೆ. ಇದು ಅವರ ರಕ್ಷಣೆಗಾಗಿ ಬೆಳಸಿಕೊಂಡಿರುತ್ತಾರೆ. ಈ ಸಮುದಾಯವು ಸಾರ್ವಜನಿಕ ಸ್ವತ್ತು ಎಂದು ಸಮಾಜ ಪ್ರತಿಕ್ರಿಯಿಸುತ್ತದೆ. ಮುಖ್ಯವಾಗಿ ಈ ಸಮುದಾಯವು ಮಹಿಳೆ ಲೈಂಗಿಕತೆಯ ಮುಕ್ತತೆ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದೆ.

### ನಾಲ್ಕನೇಯ ವರ್ಗದ ಜನರು

ಇವರು ಸಮಾಜದ ಲಿಂಗ ಮತ್ತು ಲೈಂಗಿಕತೆಯ ವ್ಯವಸ್ಥೆಯ ವಿರುದ್ಧವಾಗಿರುವ ವರ್ಗ ಇದರಲ್ಲಿ ಹಿಜ್ರಾ, ಕೋಜಾ ಮತ್ತು ಟ್ರಾನ್ಸ್ ಜೆಂಡರ್ ಹಿಜ್ರಾ - ಗಂಡಾಗಿ ಹುಟ್ಟಿ ಹೆಣ್ಣಾಗಿರಲು ಆಶೆ ಪಡುವವರು ಲಿಂಗ ಬಧಲಿ ಮಾಡಿಕೊಳ್ಳುತ್ತಾರೆ.

ಕೋಥಿ - ಗಂಡಾಗಿದ್ದರೂ ಹೆಣ್ಣಿನ ಸ್ವಭಾವ ಹೊಂದಿರುತ್ತಾನೆ.

ಟ್ರಾನ್ಸ್ ಜೆಂಡರ್ - ಜೈವಿಕವಾಗಿ ಒಂದು ಲಿಂಗಕ್ಕೆ ಸೇರಿದವರು ವಿರುದ್ಧ ಲಿಂಗದ (ಗಂಡಾಗಿದ್ದರೆ ಹೆಣ್ಣಿನ, ಹೆಣ್ಣಾಗಿದ್ದರೆ ಗಂಡಿನ) ಗುಣ ಸ್ವಭಾವವನ್ನು ಹೊಂದಿರುತ್ತಾರೆ. ಕೆಲವು ಬಾರಿ ಲಿಂಗ ಬದಲಾವಣೆ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಳ್ಳುತ್ತಾರೆ.[೮] ಇವರನ್ನು ಲೈಂಗಿಕ ದಂದೆಯಲ್ಲಿರುವ ಸಮುದಾಯದಲ್ಲಿ ಬರುತ್ತಾರೆ. ಏಕೆಂದರೆ, ನಾವು ಮೇಲೆ ಚರ್ಚಿಸಿದ

ಎಲ್ಲ ಅಂಶಗಳಲ್ಲಿ ಇವರು ಬರುತ್ತಾರೆ. ಅದರಲ್ಲಿ ಮಹಿಳಾ ಗುಂಪಿನಲ್ಲಿ ಸೇರಿಸುವ ಉದ್ದೇಶವೇನೆಂದರೆ, ಇವರು ಮಹಿಳೆಯ ಲಿಂಗತ್ವ ಮತ್ತು ಲೈಂಗಿಕತೆಯನ್ನು ಒಪ್ಪಿಕೊಂಡು ಮಹಿಳೆಯಾಗಿರಲು ಬಯಸುವುದರಿಂದ,

"ಮೊಲೆ ಮೂಡಿ ಬಂದರೆ ಹೆಣ್ಣೆಂಬರಯ್ಯ
ಗಡ್ಡ ಮೀಸೆ ಬಂದೊಡನೆ ಗಂಡಂಬರಯ್ಯ
ನಡುವೆ ಸುಳಿವಾತ್ಮ ಹೆಣ್ಣು ಅಲ್ಲ ಗಂಡು ಅಲ್ಲ ಕಾಣಾರಾಮನಾಥ"

- ಜೇಡರ ದಾಸಿಮಯ್ಯ

ಈ ಮೇಲಿನ ವಾಕ್ಯದಂತೆ ನಾವು ಲಿಂಗತ್ವ ಮತ್ತು ಲೈಂಗಿಕತೆಯನ್ನು ಕೆಲವು ಚೌಕಟ್ಟಿನಲ್ಲಿ ನೋಡುವುದರಿಂದ ನಾವು ಬೇಗನೆ ಈ ಸಮುದಾಯವನ್ನು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಈ ಸಮುದಾಯವು ಸಮಾಜದ ಚೌಕಟ್ಟಿಗೆ ವಿರುದ್ಧವಾಗಿರುತ್ತದೆ. ಮುಖ್ಯವಾಗಿ ಇವರು ಜೀವನದಲ್ಲಿ ದಂದೆಯೇ ಮುಖ್ಯವಾಗಿರುತ್ತದೆ. ಏಕೆಂದರೆ ಸಮಾಜದಲ್ಲಿ ಅವರನ್ನು ತಿರಸ್ಕರಿಸಿ ಅವರ ಮೂಲಭೂತ ಹಕ್ಕುಗಳನ್ನು ಕಸಿದುಕೊಂಡಿರುತ್ತದೆ. ಇವರಿಗೆ ಕೆಲಸವನ್ನು ಯಾರು ಕೊಡುವುದಿಲ್ಲ, ಕೊಟ್ಟರೂ ಇವರ ಮೇಲೆ ಲೈಂಗಿಕ ಕಿರುಕುಳಗಳು ಜಾಸ್ತಿಯಾಗಿ ಕೆಲಸ ಬಿಡುವ ಪರಿಸ್ಥಿತಿಯು ಬರುವುದರಿಂದ, ಬಹಳ ಜನರು ಲೈಂಗಿಕ ದಂದೆಯಲ್ಲಿ ಮುಂದು ವರೆಸಲು ಇಚ್ಛಿಸುತ್ತಾರೆ. ಇವರಲ್ಲಿಯೂ ಕೂಡ ವರ್ಗಗಳಿದ್ದು ಶ್ರೀಮಂತರು ಲೈಂಗಿಕ ದಂದೆಯಲ್ಲಿರುವ ಮತ್ತು ಅನುಭವಸ್ಥರು ಹವಾಮಾನಗಳಲ್ಲಿ ದಂದೆಯನ್ನು ಮಾಡಿದರೆ, ಸಾಮಾನ್ಯ ಜನರು ಬೀದಿಗಳಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ತಮ್ಮ ಗಿರಾಕಿಗಳನ್ನು ಆಕರ್ಷಿಸುತ್ತಾರೆ. ಇವರು ಗಂಡಾಗಿದ್ದರೂ ಲಿಂಗತ್ವದಲ್ಲಿ ಹೆಂಗಸಿನಂತೆ ಇವರು ಗಂಡುಗಳನ್ನು ಆಕರ್ಷಿಸುತ್ತಾರೆ. ಕೆಲವು ಇವರ ಹತ್ತಿರ ಇಷ್ಟಪಟ್ಟು, ಇವರು ಹಿಜ್ರಾ ಎಂದು ತಿಳಿದಿದ್ದರೂ ಅವರನ್ನು ಇಷ್ಟಪಡುತ್ತಾರೆ. ಇನ್ನು ಕೆಲವರಿಗೆ ಇವರು ಹಿಜ್ರಾ ಎಂದು ತಿಳಿಯದೆ ಹೋಗುತ್ತಾರೆ. ಅವರು ಇವರೊಡನೆ ಲೈಂಗಿಕ ಕ್ರಿಯೆಯಲ್ಲಿ ತೊಡಗುವಾಗ ಕಂಡು ಬಂದರೆ ಅವರು ಗಿರಾಕಿಗಳ ಹಿಂಸೆಗೆ ಗುರಿಯಾಗುತ್ತಾರೆ. ತುಂಬ ಸನ್ನಿವೇಶಗಳಲ್ಲಿ ಅದು ಬೆಳಕಿಗೆ ಬಾರದಂತಹ ತಂತ್ರ ಗಳನ್ನು ಉಪಯೋಗಿಸುತ್ತಾರೆ. ಇವರ ಲೈಂಗಿಕ ದುಡಿಮೆಯ ಹಣ ಬಹಳ ಕಡಿಮೆ, ಅದರಲ್ಲಿ ಇವರು ಪೊಲೀಸರಿಂದ ತಪ್ಪಿಸಿಕೊಳ್ಳುವ ಅವರಿಗೆ ಅದರಲ್ಲಿ ಕೂಡ ಬೇಕಾಗುತ್ತದೆ.

ಇವರ ಮಾನಸಿಕ ಒತ್ತಡವು ಜಾಸ್ತಿಯಾಗಿ ತಾನು ಮಹಿಳೆಯೆಂದು ಸಮಾಜ ಗುರುತಿಸ ಬೇಕೆಂದು ಆಸೆ ಪಡುತ್ತಾರೆ ಮತ್ತು ಅದರಂತೆ ವರ್ತಿಸುತ್ತಾರೆ. ಅದಕ್ಕಾಗಿ ಇವರು ತುಂಬ ಅಲಂಕಾರಕ್ಕೆ ಬೆಲೆಯನ್ನು ನೀಡುತ್ತಾರೆ. ಇವರು ಮದುವೆಯಂತಹ ಸಂಬಂಧದಲ್ಲಿ ಸಂತೋಷ ಪಡುತ್ತಾರೆ. ಎಷ್ಟೋ ಹಿಜ್ರಾಗಳು ಗಂಡಸರನ್ನೆ ಮದುವೆಯಾಗಿದ್ದಾರೆ. ಮಹಿಳಾ ಸಮುದಾಯವು ಇವರನ್ನು ತಮ್ಮ ಸಮುದಾಯದಲ್ಲಿ ಒಪ್ಪಿಕೊಳ್ಳುವುದಿಲ್ಲ. ಇನ್ನು ದಂಥೆ

ಯಲ್ಲಿರುವ ಮಹಿಳೆಯರಿಗೂ ಇವರಿಗೂ ಗಿರಾಕಿಗಳ ವಿಷಯದಲ್ಲಿ ತುಂಬ ಸಾರಿ ಜಗಳ ವಾಗುತ್ತವೆ. ಮೇಲೆ ಯಾರಿಂದಲಾದರೂ ದೌರ್ಜನ್ಯವಾದರೆ ತಮ್ಮ ತಮ್ಮ ವೈಯಕ್ತಿಕ ದ್ವೇಷವನ್ನು ಮರೆತು ಇವರು ಎಲ್ಲರೂ ಒಂದಾಗುತ್ತಾರೆ.

ಒಟ್ಟಾರೆ ಲೈಂಗಿಕ ದಂದೆಯಲ್ಲಿರುವ ಸಮುದಾಯದವನ್ನು ಕಾನೂನು ಮತ್ತು ಸಮಾಜ ಪ್ರೋತ್ಸಾಹಿಸುತ್ತಿಲ್ಲ. ಅವರ ಮಾನವ ಹಕ್ಕುಗಳು ದಿನನಿತ್ಯ ಉಲ್ಲಂಘಟನೆಯಾಗುತ್ತಿದೆ, ನಾವು ಮೇಲೆ ವಿಶ್ಲೇಷಿಸಿದ ಹಲವಾರು ಕಾರಣಗಳು ಈ ಸಮುದಾಯವನ್ನು ಶೋಷಣೆಗೆ ಗುರಿ ಮಾಡುವುದರಿಂದ ಇದು ಸಾಮಾಜಿಕವಾಗಿ ಆರ್ಥಿಕವಾಗಿ ಈ ಸಮುದಾಯದ ಅಭಿವೃದ್ಧಿ ಯಲ್ಲಿ ತೀವ್ರ ಪರಿಣಾಮವನ್ನು ಉಂಟುಮಾಡುತ್ತಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಸಮುದಾಯದಲ್ಲಿ ಹಲವಾರು ಸಂಘಟನೆಗಳು ಹುಟ್ಟಿಕೊಂಡಿವೆ. ಇವುಗಳಲ್ಲಿ ಚಳುವಳಿಗಳ ಪಾತ್ರ ಬಹು ಮಹತ್ತರ ಬದಲಾವಣೆಯನ್ನು ತಂದು ಸಾಕಷ್ಟು ಸಾಮಾಜಿಕ ಮತ್ತು ಕಾನೂನಿನ ವಿರುದ್ಧವಾಗಿ ಹೋರಾಟಗಳನ್ನು ನಡೆಸುತ್ತಿರುವುದನ್ನು ನಾವು ಗಮನಿಸಬಹುದು. ಒಂದು ಸಮುದಾಯದ ಪರಿಗಣನೆಗೆ ಸಂಘಟನೆ ಮತ್ತು ಅದರಿಂದ ಸಾಮಾಜಿಕ ಬದಲಾವಣೆ ಮುಖ್ಯಪಾತ್ರವನ್ನು ವಹಿಸುತ್ತದೆ. ಇದು ಲಿಂಗವ್ಯವಸ್ಥೆಯ ಮೇಲೂ ಈ ರೀತಿಯ ಪರಿಣಾಮ ವನ್ನು ಬೀರುತ್ತದೆ ಎಂದು ಮುಕ್ತಾಯಗೊಳಿಸುತ್ತೇನೆ.

**ಟಿಪ್ಪಣಿಗಳು**

೧. ಕಮ್ಯುನಿಟಿ ಅಂಡ್ ಈಐಡೆಂಟಟಿ - ಸುರಿಂದರ್ ಸ್. ಜೋದಕ.

೨. --"--

೩. ಗಸ್‌ಪಿಲ್ಡ್, ೧೯೫೧, ಪು. ೧.

೪. ಮನುಸ್ಮೃತಿ: ಅನು- ಶೇಷ ನವರತ್ನ - ಅಧ್ಯಾಯ-೩, ವಚನ. ಪು. ೧೩.

೫. ಮನುಸ್ಮೃತಿ: ಅನು: ಶೇಷ ನವರತ್ನ - ಅಧ್ಯಾಯ-೩, ವಚನ. ಪು. ೪.

೬. ಪ್ರಭಾ ಕೋಟೇಶ್ವರನ್ - ಸೀನ್ಹ ಮತ್ತು ಬಾಸು, ಪು. ೧೯೪-೧೯೭

೭. ಸೀನ್ಹ ಮತ್ತು ಬಾಸು (ಕೌಟಿಲ್ಯನಿಂದ) - ಪ್ರಭಾ ಕೋಟೇಶ್ವರನ್.

೮. ಸೊರಿಸ್ ಚಂದ್ರಬೆರ್ನಜಿ ಮತ್ತು ರಾಮಲ ಬ್ಯಾನರ್ಜಿ, 'ದಿ ಕಾಸ್ಟವೇ ಆಫ್ ಇಂಡಿಯನ್ ಸೊಸೈಟಿ', ಪು. ೮೨-೮೩, (೧೯೮೯).

೯. ಅಂಡ್ರೊ ನೋಟ್ ೧೨೧, ಪು. ೧೭-೧೮.

೧೦. ಸೂಸಿಥಾರು ಮತ್ತು ಕೆ. ಲಲಿತಾ. ಇಂಟ್ರೋಡಕ್ಷನ್ ಟು ಉಮೆನ್ ಇನ್ ಇಂಡಿಯಾ ೧ (ಸೂಸಿಥಾರು ಅಂಡ್ ಲಲಿತ ಎಡಸ್...).

೧೧. ಸೂಸ್ಯೆ ತಾರು ಮತ್ತು ಕೆ. ಲಲಿತಾ, ಇಂಟ್ರೋಡಕ್ಷನ್ ಟು ಉಮೆನ್ ಇನ್ ಇಂಡಿಯಾ ೧ (ಸೂಸಿಥಾರು ಅಂಡ್ ಲಲಿತ ಎಡಸ್...).

೧೨. http://en. Wikipedia.org/wiki/labour power (www. Marxisits.org).

೧೩. -------------do------------

೧೪. http;//en. Wikipedia.org/wiki/labour power (www. Marxisits.org).

೧೫. http://en. Wikipedia.org/wiki/labour power (www. Marxisits.org).

೧೬. Redifinding Prostitution on as sexwork on the International agenda. www. walnet.org.

೧೭. www.india together.org.

೧೮. ಅಂತರಲಿಂಗೀಯ ಸಮುದಾಯದವರ ಮಾನವ ಹಕ್ಕುಗಳು ಉಲ್ಲಂಘನೆ ವರದಿ ಪಿ.ಯು.ಸಿ. ಎಲ್, ಕರ್ನಾಟಕ.

# ಬುಡಕಟ್ಟು ಮಹಿಳೆ ಮತ್ತು ಅಭಿವೃದ್ಧಿ

ಸಿದ್ಧಗಂಗಮ್ಮ

ಸಾಮಾಜಿಕ ನ್ಯಾಯ ದೊರಕಿಸಿಕೊಡುವ ನಿಟ್ಟಿನಲ್ಲಿ ಇತ್ತೀಚೆಗೆ ಹೆಚ್ಚು ವ್ಯಾಪಕವಾಗಿ ಬಳಕೆಯಲ್ಲಿರುವ ಪರಿಕಲ್ಪನೆ ಎಂದರೆ ಅಭಿವೃದ್ಧಿ. ಅಭಿವೃದ್ಧಿ ಎಂಬುದು ಒಂದು ವರ ಅಥವಾ ಶಕ್ತಿ. ಜನರನ್ನು ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಶಕ್ತರನ್ನಾಗಿಸುವುದೇ ಅಭಿವೃದ್ಧಿ. ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಅಭಿವೃದ್ಧಿ ಫಲ ದೊರಕಿಸಿ ಕೊಡುವುದೇ ಯೋಜನೆಗಳು ಉದ್ದೇಶವಾಗಿದೆ.

ನಮ್ಮದು ಶ್ರೇಣೀಕೃತ ಜಾತಿ/ವರ್ಗ ವ್ಯವಸ್ಥೆ. ಮೇಲುಕೀಳೆಂಬ ಜಾತೀಯತೆ, ಸ್ತ್ರೀ-ಪುರುಷರೆಂಬ ತಾರತಮ್ಯ, ಹಿಂದುಳಿದವರು ಮುಂದುವರಿದವರು ಎಂಬ ಪ್ರಾದೇಶಿಕ ಅಸಮಾನತೆಗಳಿವೆ. ಜೊತೆಗೆ ಶ್ರೀಮಂತರು, ಮಧ್ಯಮವರ್ಗದವರು, ಬಡವರು ಮತ್ತು ಕಡುಬಡವರೆಂಬ ವರ್ಗಗಳಿವೆ. ಈ ಕಡುಬಡವರ ಗುಂಪಿನಲ್ಲಿ ಬಹುಪಾಲು ಮಹಿಳೆಯರು, ಪರಿಶಿಷ್ಟ ಜಾತಿ, ಬುಡಕಟ್ಟು ಸಮುದಾಯಗಳ ಜನರಿದ್ದಾರೆ. ಕೆಲವೇ ಜನ ಶ್ರೀಮಂತರು ಪ್ರಭುತ್ವವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಇವರು ಬಡವರ ಏಳಿಗೆ ಬಯಸು ವುದಿಲ್ಲ. ಮಧ್ಯಮವರ್ಗದವರ ಮೂಲಕ ಬಡವರನ್ನು ಶೋಷಿಸುತ್ತಾ ವ್ಯವಸ್ಥೆಯನ್ನು ನಿಯಂತ್ರಿಸುತ್ತಿರುತ್ತಾರೆ. ಮಧ್ಯಮವರ್ಗದವರು ಸಹ, ಶ್ರೀಮಂತರೊಂದಿಗೆ ಒಡನಾಟವಿಟ್ಟು ಕೊಂಡಿದ್ದು ಬಡವರನ್ನು ಶೋಷಿಸುತ್ತಾ ತಾವೂ ಶ್ರೀಮಂತರಾಗಲು ಹವಣಿಸುತ್ತಿರುತ್ತಾರೆ. ಬಡವರು ತಮ್ಮ ಅಗತ್ಯಗಳಿಗಾಗಿ ಆಗಾಗ ಪ್ರತಿಭಟನೆ ಪ್ರತಿರೋಧ ವ್ಯಕ್ತಪಡಿಸಿದಾಗ ಅಭಿವೃದ್ಧಿಯ ಹೆಸರಿನಲ್ಲಿ ಒಂದಿಷ್ಟು ಬಿಸಾಕಿ ಸುಮ್ಮನಾಗುತ್ತಾರೆ. ಇನ್ನು ಕಡುಬಡವರು ಸರಕಾರದಿಂದ ಏನನ್ನು ನಿರೀಕ್ಷಿಸದೆ ತಮ್ಮ ಪಾಡಿಗೆ ತಾವಿರುತ್ತಾರೆ. ಹೀಗೆ ವಂಚಿತ ವರ್ಗದ ಬಹುಮಂದಿ ಮಹಿಳೆಯರು ಮತ್ತು ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿ ಪರಿಧಿಯೊಳಗೆ ತಂದು ಪ್ರತ್ಯೇಕ ಯೋಜನೆ ಕಾರ್ಯಕ್ರಮಗಳನ್ನು ರೂಪಿಸುತ್ತಾ ಅವರ ಜೀವನಮಟ್ಟ ಉತ್ತಪಡಿಸುವುದು ಸರಕಾರದ ಮುಂದಿರುವ ದೊಡ್ಡ ಜವಾಬ್ದಾರಿಯಾಗಿದೆ.

ಬುಡಕಟ್ಟು ಸಮುದಾಯಗಳು ಸಾವಿರಾರು ವರ್ಷಗಳಿಂದ ಅರಣ್ಯ ಪ್ರದೇಶಗಳಲ್ಲಿ ನೆಲಸಿದ್ದು, ಬೇಟೆ, ಕಾಡಿನ ಉತ್ಪನ್ನಗಳನ್ನೇ ನಂಬಿ ಬದುಕಿದ್ದ ಜನರು, ಕೈಗಾರಿಕೆ, ಗಣಿಗಾರಿಕೆ, ರಸ್ತೆ ರೈಲು ಮಾರ್ಗಗಳ ನಿರ್ಮಾಣ ಮುಂತಾದವುಗಳಿಂದಾಗಿ ಅರಣ್ಯವನ್ನು ನಾಶ

ಮಾಡಲಾಗುತ್ತಿದೆ. ಜೊತೆಗೆ ಅರಣ್ಯ ನೀತಿಗಳು ಅಲ್ಲಿ ನೆಲಸಿದ್ದ ಬುಡಕಟ್ಟು ಸಮುದಾಯ ಗಳನ್ನು ಒಕ್ಕಲೆಬ್ಬಿಸಿ ಸ್ಥಳಾಂತರಗೊಳಿಸಲಾಗುತ್ತಿದೆ. ಹೀಗೆ ಸ್ಥಳಾಂತರ ಗೊಳಿಸುತ್ತಿರುವ ಬುಡಕಟ್ಟು ಜನರಿಗೆ ಪುನರ್ವಸತಿ, ಉದ್ಯೋಗವಕಾಶ, ಮುಂತಾದ ಯಾವುದೇ ಸೌಲಭ್ಯಗಳನ್ನು ನೀಡದೆ ಕಾಡಿನಿಂದ ಹೊರಹಾಕಲಾಗುತ್ತಿದೆ. ಇದರಿಂದಾಗಿ ಕಾಡನ್ನು ನಂಬಿ ಬದುಕುತ್ತಿದ್ದ ಬುಡಕಟ್ಟು ಜನರ ಬದುಕು ಅತಂತ್ರ ಸ್ಥಿತಿ ತಲುಪುತ್ತಿದೆ.

ಎಪ್ಪತ್ತು, ಎಂಭತ್ತರ ದಶಕಗಳಲ್ಲಿ ಬುಡಕಟ್ಟು ಜನರು ಮತ್ತು ಮಹಿಳೆಯರ ಅಭಿವೃದ್ಧಿ ಕುರಿತಂತೆ ವಿಷಯಗಳು ಚರ್ಚೆಯ ಮುಂಚೂಣಿಗೆ ಬಂದವು. ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಬುಡಕಟ್ಟು ಚಿಂತಕರಲ್ಲಿಯೇ ಭಿನ್ನಾಭಿಪ್ರಾಯಗಳಿವೆ. ಬುಡಕಟ್ಟು ಜನರನ್ನು ಅವರ ಪಾಡಿಗೆ ಅವರನ್ನು ಕಾಡಿನಲ್ಲಿ ಬಿಟ್ಟು ಬಿಡಿ ನೆಮ್ಮದಿಯಿಂದ ಬದುಕಲಿ ಎಂಬುದು ಒಂದು ವರ್ಗದ ಚಿಂತಕರ ಅಭಿಪ್ರಾಯವಾದರೆ, ಅಭಿವೃದ್ಧಿಯ ಲಾಭ ಎಲ್ಲ ವರ್ಗದ ಜನರಿಗೂ ಲಭಿಸುವಂತಾಗಬೇಕು. ಆದ್ದರಿಂದ ಬುಡಕಟ್ಟು ಜನರನ್ನು ಅಭಿವೃದ್ಧಿಯ ವ್ಯಾಪ್ತಿಯೊಳಗೆ ತರಬೇಕೆಂಬುದು ಮತ್ತೊಂದು ವರ್ಗದ ಚಿಂತಕರ ನಿಲುವಾಗಿದೆ. ಬುಡಕಟ್ಟು ಜನರ ಅನನ್ಯತೆ ಉಳಿಸಿಕೊಂಡು ಅಭಿವೃದ್ಧಿ ಸಾಧಿಸಬೇಕೆಂಬುದು ಮತ್ತೊಂದು ಗುಂಪಿನ ಚಿಂತಕರ ಅನಿಸಿಕೆ. ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಪ್ರತ್ಯೇಕವಾದ ನೀತಿ ಇಲ್ಲ, ಕಾರ್ಯಕ್ರಮಗಳಿವೆ. ಬುಡಕಟ್ಟು ಜನರ ಅಭಿವೃದ್ಧಿ ಸಾಮಾನ್ಯ ಅಭಿವೃದ್ಧಿ ಯೋಜನೆಗಳಲ್ಲಿ ಅಂತರ್ಗತವಾಗಿದೆ. ಹಾಗಾಗಿ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಪ್ರತ್ಯೇಕವಾದ ಯೋಜನೆಗಳ ಅಗತ್ಯವಿಲ್ಲ ಎಂಬುದಾಗಿದೆ. ಸರ್ಕಾರ-ಬುಡಕಟ್ಟು ಚಿಂತಕರ ನಿಲುವುಗಳ ಗೊಂದಲದಲ್ಲಿ ಬುಡಕಟ್ಟು ಸಮುದಾಯಗಳ ಬದುಕು ಶೋಷನೀಯ ಸ್ಥಿತಿ ತಲುಪುತ್ತಿದೆ. ಅದರಲ್ಲೂ ಬುಡಕಟ್ಟು ಮಹಿಳೆಯ ಸ್ಥಿತಿ ಇನ್ನೂ ಗಂಭೀರವಾಗುತ್ತಿದೆ.

ನಾಡಿನ ಜನರ ಸಂಪರ್ಕವಿಲ್ಲದೆ ಕಾಡಿನ ಉತ್ಪನ್ನಗಳನ್ನು ನಂಬಿ ಬದುಕುತ್ತಿರುವ ಅನಕ್ಷರಸ್ಥ ಮಹಿಳೆಯರನ್ನು ಸ್ಥಳಾಂತರಗೊಳಿಸಿದಾಗ ಪುನರ್ವಸತಿ ಸೌಲಭ್ಯಗಳಲ್ಲದೆ ದುಡಿಮೆಗೆ ಕೆಲಸವಿಲ್ಲದೆ ಹೊಸ ಪರಿಸರಕ್ಕೆ ಹೊಂದಿಕೊಳ್ಳಲಾಗದೆ ದಿನೇ ದಿನೇ ಅಂಚಿಗೆ ತಳ್ಳಲ್ಪಡುತ್ತಿದ್ದಾರೆ.

ಬುಡಕಟ್ಟು ಮಹಿಳೆಯರನ್ನು ಒಳಗೊಂಡಂತೆ ಪ್ರಪಂಚದ ಎಲ್ಲಾ ದೇಶದಗಳಲ್ಲೂ ಕುಟುಂಬ ನಿರ್ವಹಣೆ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಹಿಳೆಯರ ದುಡಿಮೆ ಅಪಾರವಾದುದು. ಪ್ರಪಂಚದ ಶ್ರಮಶಕ್ತಿಯಲ್ಲಿ ಅರ್ಧದಷ್ಟಿರುವ ಮಹಿಳೆಯರನ್ನು ಹೊರತುಪಡಿಸಿ ಅಭಿವೃದ್ಧಿ ಪ್ರಕ್ರಿಯೆ ಪ್ರಾರಂಭಿಸಿತು. ಅಲ್ಲದೆ ತನ್ನ ಸದಸ್ಯ ರಾಷ್ಟ್ರಗಳು ಮಹಿಳಾ ಅಭಿವೃದ್ಧಿ ಕೈಗೊಳ್ಳುವಂತೆ ಆದೇಶಿಸಿತು. ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾದ ಭಾರತವು ಸಹ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡಿತ್ತು. ಅಭಿವೃದ್ಧಿಯ ಫಲ ಸ್ತ್ರೀಪುರುಷರಿಗೆ ಸಮಪ್ರಮಾಣದಲ್ಲಿ ತಲುಪುತ್ತವೆ ಎಂಬ ನಂಬಿಕೆಯಿಂದ ಸಮುದಾಯ ಅಭಿವೃದ್ಧಿ ಯೋಜನೆ ಭೂ ಸುಧಾರಣೆ ಮುಂತಾದ ಯೋಜನೆಗಳನ್ನು ರೂಪಿಸಲಾಗಿತ್ತು. ಆದರೆ ಈ ಯೋಜನೆಗಳು ಮಹಿಳೆಯರನ್ನು

ತಲುಪದೆ ಹೋದವು. ಮಹಿಳಾ ಯೋಜನೆಗಳು ಸಾಮಾನ್ಯ ಯೋಜನೆಗಳಲ್ಲಿ ಅಂತರ್ಗತ ವಾಗಿದ್ದರಿಂದ ಸ್ತ್ರೀಯರು ಅಭಿವೃದ್ಧಿ ಫಲದಿಂದ ವಂಚಿತರಾಗುವಂತಾಯಿತು. ಪರಿಣಾಮ ಮಹಿಳೆಯರ ಅನಕ್ಷರತೆ, ನಿರುದ್ಯೋಗ ಬಡತನ ಹಾಗೆಯೇ ಮುಂದುವರಿಯ ತೊಡಗಿದವು. ಇದನ್ನರಿತ ಸರಕಾರ ಎಂಭತ್ತರ ದಶಕದಲ್ಲಿ ಮಹಿಳೆಯರಿಗಾಗಿಯೇ ಪ್ರತ್ಯೇಕ ರಾಷ್ಟ್ರೀಯ ಮಹಿಳಾ ಕೋಶ, ಮಹಿಳಾ ಆಯೋಗ ಮುಂತಾದ ಪ್ರತ್ಯೇಕ ವಿಭಾಗಗಳನ್ನು ಅನುಷ್ಠಾನ ಗೊಳಿಸಲಾಯಿತು.

ಇಂತಹ ಮಹಿಳಾ ಪ್ರತ್ಯೇಕ ಕಾರ್ಯಕ್ರಮಗಳು ಸಹ ಎಲ್ಲಾ ವರ್ಗದ ಮಹಿಳೆಯರಿಗೆ ಸಮಪ್ರಮಾಣದಲ್ಲಿ ತಲುಪಿಸಲಾಗಲಿಲ್ಲ. ನಗರ ಪ್ರದೇಶದ ಮಹಿಳೆಯರು ಮತ್ತು ಗ್ರಾಮೀಣ ಪ್ರದೇಶದ ಶಿಕ್ಷಿತ ವರ್ಗದ ಮಹಿಳೆಯರು ಯೋಜನೆ ಫಲ ಪಡೆದುಕೊಂಡು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಸಬಲರಾಗುತ್ತಿದ್ದಾರೆ. ಮಹಿಳಾ ಯೋಜನೆಗಳಲ್ಲಿ ಸಾಕಷ್ಟು ವೈಫಲ್ಯತೆಗಳನ್ನು ಗುರುತಿಸಬಹುದಾದರೂ ಒಂದಿಷ್ಟು ಮಹಿಳೆಯರಿಗಾದರೂ ಯೋಜನೆಯ ಫಲ ತಲುಪಿವೆ. ಆದರೆ ಅಭಿವೃದ್ಧಿಯಿಂದ ವಂಚಿತ ಮಹಿಳೆಯರು ಇನ್ನೂ ಬಹುಪಾಲು ಇದ್ದಾರೆ. ಅವರಲ್ಲಿ ಅತ್ಯಂತ ವಂಚಿತರೆಂದರೆ ಬುಡಕಟ್ಟು ಮಹಿಳಾಸಮುದಾಯ ಒಂದಾಗಿದೆ. ನಿಮ್ನ ವರ್ಗಗಳ ಹೋರಾಟದಿಂದ ದೊರಕಿರುವ ಮೀಸಲಾತಿ ಸೌಲಭ್ಯಗಳು ಬುಡಕಟ್ಟು ಮಹಿಳೆಯರಿಗೆ ತಲುಪೇ ಇಲ್ಲ. ಆಧುನಿಕ ಜಗತ್ತಿನ ಸ್ಪರ್ಧೆ ಎದುರಿಸಲು ಅವರಲ್ಲಿ ಬೌದ್ಧಿಕ ಸಾಮರ್ಥ್ಯವಿಲ್ಲ, ಹಾಗಾಗಿ ಅಭಿವೃದ್ಧಿ ವ್ಯಾಪ್ತಿಯಿಂದ ದೂರ ಸರಿಯುತ್ತಿದ್ದಾರೆ.

ಕರ್ನಾಟಕದ ಬುಡಕಟ್ಟು ಮಹಿಳೆಯರ ಸ್ಥಿತಿ ಇದರಿಂದ ಹೊರತಾಗಿಲ್ಲ. ರಾಜ್ಯವು ಇತ್ತೀಚೆಗೆ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ೧೯೯೭ರಲ್ಲಿ ಪ್ರತ್ಯೇಕ ಇಲಾಖೆ ತೆರೆಯಲಾಗಿದ್ದು ಅವರ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ, ಲ್ಯಾಂಡ್ ಸಹಕಾರ ಸಂಘಗಳು, ಉದ್ಯೋಗ ತರಬೇತಿ ಮುಂತಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತದೆ. ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಮಹಿಳೆಯರಿಗೆ ಶೇ. ೩೩ರಷ್ಟು ಮೀಸಲಾತಿ ನೀಡುತ್ತಿದೆ. ಜೊತೆಗೆ ನರ್ಸರಿ ಮತ್ತು ಮಹಿಳಾ ಕೇಂದ್ರಗಳು ಪ್ರತ್ಯೇಕ ಹೆಣ್ಣುಮಕ್ಕಳ ವಸತಿ ಶಾಲೆಗಳು, ಸ್ತ್ರೀಶಕ್ತಿ ಗುಂಪುಗಳು ಮಹಿಳೆಯರು ಸಶಕ್ತರಾಗಲು ಶ್ರಮಿಸುತ್ತಿವೆ. ಈ ಎಲ್ಲವುಗಳ ಹಿನ್ನೆಲೆಯಲ್ಲಿ ಅನುವಂಶಿಕ ಮಾಹಿತಿ ಆದರಿಸಿ ಅಭಿವೃದ್ಧಿಗೆ ಸಂಬಂಧಿಸಿದ ಕರ್ನಾಟಕದ ಬುಡಕಟ್ಟು ಮಹಿಳೆಯರ ಸ್ಥಿತಿಗತಿ ನೋಡುವ ಒಂದು ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ.

ಬುಡಕಟ್ಟು ಸಮುದಾಯಗಳ ನಿರ್ಮಾಣದಲ್ಲಿ ಬುಡಕಟ್ಟು ಮಹಿಳೆಯರ ಪಾತ್ರ ಪ್ರಧಾನವಾಗಿದೆ. ಆದಿ ಮಾನವರು ಒಂದು ಕಡೆ ನೆಲೆ ನಿಂತಿ ಬದುಕಿರಲಿಲ್ಲ. ಆಹಾರಕ್ಕಾಗಿ ಅವರು ಒಂದು ಕಡೆಯಿಂದ ಮತ್ತೊಂದು ಕಡೆಗೆ ನಿರಂತರವಾಗಿ ಅಲೆಯುತ್ತಲೇ ಇದ್ದರು. ಅಲೆಮಾರಿತ ಘಟ್ಟದಲ್ಲಿ ಸಮಾನ ಪಾತ್ರವಹಿಸುತ್ತಿದ್ದ ಮಹಿಳೆ ಗರ್ಭಿಣಿ ಬಾಣಂತಿಯಂತಹ

ಅನಿವಾರ್ಯ ಸಂದರ್ಭಗಳಲ್ಲಿ ಕೆಲವು ದಿನಗಳ ಕಾಲ ಒಂದು ಕಡೆ ಇರಬೇಕಾಗುತ್ತಿತ್ತು. ಹೀಗೆ ನೆಲೆ ನಿಲ್ಲುತ್ತಿದ್ದ ಮಹಿಳೆಯರು ಕಾಲಾನುಕ್ರಮದಲ್ಲಿ ತಾವು ನೆಲೆಸುತ್ತಿದ್ದ ಸಂದರ್ಭದಲ್ಲಿ ತಮ್ಮ ಪ್ರಚನ್ನ ಶಕ್ತಿಯಿಂದ ಸುತ್ತಮುತ್ತಲಿನ ಭೂಮಿಯನ್ನು ಕಡ್ಡಿಯಿಂದ ಅಗೆದು ಬೀಜಬಿತ್ತಿ ಬೆಳೆ ಬೆಳೆಯುವ ಕಲೆ ಕಲಿತರು. ಮಾನವ ಸಮೂಹ ಒಂದು ಕಡೆ ಬದುಕುವಂತೆ ಮಾಡಿದರು. ಹೀಗೆ ಒಂದು ಕಡೆ ನೆಲೆ ನಿಂತ ಆದಿಮಾನವ ಸಮೂಹಗಳೇ ಬುಡಕಟ್ಟುಗಳು ಕಾಲಾನುಕ್ರಮ ದಲ್ಲಿ ಬುಡಕಟ್ಟುಗಳು ರೂಪಾಂತರಗೊಂಡು ಹಳ್ಳಿ ಪಟ್ಟಣ ನಗರಗಳಾಗಿವೆ. ಇಂದು ಮಾನವ ವಾಸ್ತವ್ಯದ ವಿಕಾಸವನ್ನು ಬುಡಕಟ್ಟು, ಗ್ರಾಮ, ನಗರಗಳೆಂದು ಮೂರು ಹಂತದಲ್ಲಿ ಗುರುತಿಸಬಹುದಾಗಿದೆ.

ಭಾರತದಲ್ಲಿ ಬುಡಕಟ್ಟುಗಳೇ ಇಲ್ಲ ಎಂಬ ವಾದದಿಂದ ಹಿಡಿದು ಅನೇಕ ಬುಡಕಟ್ಟುಗಳ ವಾಸಸ್ಥಾನ ಭಾರತ ಎನ್ನುವವರೆಗೆ ಬುಡಕಟ್ಟು ಜನಾಂಗದ ನಿರ್ವಚನದ ವ್ಯಾಪ್ತಿ ಹರಡಿದೆ. ಬುಡಕಟ್ಟು ಅನಾಗರೀಕ ಸ್ಥಿತಿ ಬಿಟ್ಟುಕೊಟ್ಟು ಆಧುನಿಕ ಸ್ಥಿತಿಗೆ ಪ್ರವೇಶಿಸಲೇಬೇಕಾಗುತ್ತದೆ. ಹಾಗಾಗಿ ಬುಡಕಟ್ಟು ಎನ್ನುವುದು, ನಾಗರೀಕತೆಯ ವಿಕಾಸದಲ್ಲಿ ಒಂದು ಹಂತವಾಗಿದೆ (ಟಿ.ಆರ್. ಚಂದ್ರಶೇಖರ್). ಹಾಗೆ ಬುಡಕಟ್ಟುಗಳು ನಾಗರೀಕತೆಯ ಮೊದಲ ಹಂತವಾಗಿದೆ. ಆದಿಮಾನವ ನಾಗರೀಕ ಬದುಕಿಗೆ ನಾಂದಿ ಹಾಕಿದವಳು ಮಹಿಳೆ. ಹಾಗಾಗಿ ಆಧುನಿಕತೆಯತ್ತ ಮೊದಲ ಹೆಜ್ಜೆ ಇಟ್ಟ ಕೀರ್ತಿ ಮಹಿಳೆಗೆ ಸಲ್ಲಬೇಕು.

ಬುಡಕಟ್ಟು ಜನರನ್ನು ಆದಿವಾಸಿ, ವನವಾಸಿ, ಗಿರಿಜನ, ಪರಿಶಿಷ್ಟ ಪಂಗಡ ಮುಂತಾಗಿ ಕರೆಯುತ್ತಾರೆ. ಬುಡಕಟ್ಟು ಎಂಬುದರ ಬಗೆಗೆ ಎಲ್ಲಿಯು ಸ್ಪಷ್ಟವಾದ ಹೇಳಿಕೆ ಇಲ್ಲ. ಸಂವಿಧಾನದಲ್ಲಿ ಷೆಡ್ಯೂಲ್ಡ್ ಟ್ರೈಬ್ ಎಂದು ಕರೆಯಲಾಗಿದೆ. ವಿದ್ವಾಂಸರು ಬುಡಕಟ್ಟುಗಳ ಬಗ್ಗೆ ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ಅನೇಕ ಶತಮಾನಗಳಿಂದ ಬೆಟ್ಟಗುಡ್ಡ, ಮರಳುಗಾಡು, ಹಿಮಪ್ರದೇಶ ದ್ವೀಪಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳು ಈ ಬುಡಕಟ್ಟುಗಳ ಜನರನ್ನು ತಮ್ಮ ಸಂಸ್ಕೃತಿಯನ್ನು ಪ್ರತ್ಯೇಕವಾಗಿ ಉಳಿಸಿಕೊಂಡು ಬಂದಿರುವುದಂಟು. ಈ ಸಮುದಾಯಗಳಲ್ಲಿ ರಕ್ತಸಂಬಂಧ ಮುಖ್ಯವಾದದ್ದು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಮಾಜದ ಎಲ್ಲರನ್ನು ತಿಳಿದು ಕೊಂಡಿರುತ್ತಾರೆ. ಇವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವ್ಯವಸ್ಥೆ ರಕ್ತಸಂಬಂಧದ ಮೇಲೆ ನಿಂತಿದೆ. ಜನರು ತಮ್ಮದೇ ಆದ ಭಾಷೆ, ಆಚಾರ ವಿಚಾರ ರೂಢಿ ಸಂಪ್ರದಾಯಗಳ ಬಗ್ಗೆ ಬಿಕ್ಕಟ್ಟಾದ ನಿಯಮಗಳನ್ನು ಪಾಲಿಸುತ್ತಾರೆ. ಇವರು ಹೊರಗಿನ ಜನರನ್ನು ಅನುಮಾನ ದಿಂದಲೇ ನೋಡುತ್ತಾರೆ. ಇಂತಹ ಸಾಮಾಜಿಕ ವರ್ಗವನ್ನು ಮಾನವವಿಜ್ಞಾನದಲ್ಲಿ ಬುಡಕಟ್ಟು ಗಳೆಂದು ಕರೆಯುತ್ತಾರೆ (ತಿ.ನಂ. ಶಂಕರನಾರಾಯಣ).

ಗುಡ್ಡಗಾಡು, ಅರಣ್ಯ, ಗುಹೆ, ಕಣಿವೆ ಮತ್ತಿತರ ಪ್ರತ್ಯೇಕ ನೆಲೆಗಳಲ್ಲಿ ಒಟ್ಟಾಗಿ ವಾಸಿಸುವ ಸಮುದಾಯಗಳೇ ಬುಡಕಟ್ಟುಗಳು ಇವರು ಆಹಾರ ಸಂಗ್ರಹಣೆ, ಬೇಟೆ ಮತ್ತು ಕೃಷಿಯನ್ನು ಅವಲಂಬಿಸಿರುವರು. ಬುಡಕಟ್ಟುಗಳು ಗಾತ್ರದಲ್ಲಿ ಚಿಕ್ಕದಾಗಿದ್ದು ಹಿಂದುಳಿದ ತಂತ್ರಜ್ಞಾನ

ಬಳಸುತ್ತವೆ. ಮಾಟ ಮಂತ್ರಗಳಲ್ಲಿ ನಂಬಿಕೆ ಉಳ್ಳವರು (ದೀಬರ್ ವರದಿ ೧೯೬೧) ಉತ್ತರ ಕನ್ನಡದ ಸಿದ್ದಿಗಳಂತೆ ಅಥವಾ ಅಸ್ಸಾಂನ ನಾಗಗಳಂತೆ ಇವರಿಗೆ ವಿಶಿಷ್ಟವಾದ ಶಾರೀರಿಕ ಲಕ್ಷಣಗಳಿರಬಹುದು, ಇಲ್ಲದಿರಬಹುದು. ಇವರು ತಮ್ಮದೇ ಆದ ಭೌಗೋಳಿಕ ನೆಲೆಯಲ್ಲಿ ನೆಲೆಸಿರುತ್ತಾರೆ.

ಸರ್ವಸಮ್ಮತವಾಗಿ ಒಪ್ಪುವಂತಹ ಕೆಲವು ಲಕ್ಷಣಗಳಿಂದ ಬುಡಕಟ್ಟು ಪಂಗಡಗಳನ್ನು ಗುರುತಿಸಬಹುದಾಗಿದೆ. ಸ್ವ ಗುರುತಿಸುವಿಕೆ, ಭಾಷೆ, ವಿಭಿನ್ನ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆ, ಆರ್ಥಿಕವಾಗಿ ಹಿಂದುಳಿದಿರುವಿಕೆ, ಭೌಗೋಳಿಕವಾಗಿ ನೆಲೆಸಿರುವಿಕೆ, ಪ್ರತ್ಯೇಕತೆ ಮುಂತಾದವುಗಳು ಬುಡಕಟ್ಟುಗಳ ಪ್ರಮುಖ ಲಕ್ಷಣಗಳಾಗಿವೆ.

ಸಂವಿಧಾನದಲ್ಲಿ ೩೪೨ನೇ ಅನುಚ್ಛೇದದಲ್ಲಿ ಪರಿಶಿಷ್ಟ ಪಂಗಡಗಳ ಕುರಿತು ವಿವರಣೆ ನೀಡಲಾಗಿದೆ. ಇದರ ಪ್ರಕಾರ ಬುಡಕಟ್ಟುಗಳು, ಬುಡಕಟ್ಟಿನ ಸಮುದಾಯಗಳು ಅವುಗಳ ಭಾಗ ಅಥವಾ ಗುಂಪುಗಳನ್ನು ರಾಷ್ಟ್ರಪತಿಗಳು ಪರಿಶಿಷ್ಟ ಪಂಗಡಗಳ ಅನುಚ್ಛೇದದಡಿ ಸೇರಿಸಲು ಅವಕಾಶವಿದೆ. ಜಗತ್ತಿನಾದ್ಯಂತ ಇಂತಹ ಸಹಸ್ರಾರು ಬುಡಕಟ್ಟುಗಳನ್ನು ಕಾಣಬಹುದು. ಪೆಸಿಫಿಕ್ ಸಾಗರದ ಮಲೇಸಿಯಾ, ಮೈಕ್ರೋನೇಷಿಯ ಪಾಲಿನೇಷಿಯ ಮುಂತಾದ ಬುಡಕಟ್ಟುಗಳು, ಆಫ್ರಿಕಾದ ಕಾಡುಗಳು ಹಾಗೂ ಮರಳು ಗಾಡಿನಲ್ಲಿರುವ ಬುಡಕಟ್ಟುಗಳನ್ನು ನಿದರ್ಶನ ಕೊಡಬಹುದಾಗಿದೆ.

ಆಫ್ರಿಕಾ ಖಂಡ ಬಿಟ್ಟರೆ, ಪ್ರಪಂಚದಲ್ಲೆ ಹೆಚ್ಚು ಬುಡಕಟ್ಟು ಜನರು ಭಾರತದಲ್ಲಿದ್ದಾರೆ. ಪುರಾಣಗಳ ಕಾಲದಿಂದಲೂ ಬುಡಕಟ್ಟು ಜನರನ್ನು ಕಾಣಬಹುದಾಗಿದೆ. ಕಾಡು ವಾಸ್ತವ್ಯದ ಈ ಜನರನ್ನು ಅಸುರ, ದಸ್ಯ, ನಿಷಾದ, ರಾಕ್ಷಸ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಶೂರ್ಪನಕಿ, ಸೀತೆ, ಶಬರಿ ಮುಂತಾದ ಶಕ್ತಿಶಾಲಿ ಹಾಗೂ ಆದರ್ಶ ಬುಡಕಟ್ಟು ಮಹಿಳೆಯರನ್ನು ಕಾಣಬಹುದಾಗಿದೆ.

ಭಾರತವು ಬುಡಕಟ್ಟುಗಳ ತಾಣವಾಗಿದ್ದು, ನಾಗ, ಬಿಲ್, ಬೇಡ ಮುಂತಾದ ಸುಮಾರು ೭.೫ ಕೋಟಿ ಬುಡಕಟ್ಟು ಜನರಿದ್ದಾರೆ. ದೇಶದ ೧೮ ರಾಜ್ಯಗಳಲ್ಲಿ ೬೦೦ಕ್ಕೂ ಹೆಚ್ಚು ಆದಿವಾಸಿ ಪಂಗಡಗಳಿವೆ. ಅವರಲ್ಲಿ ೩೨ ಪಂಗಡಗಳನ್ನು ಮೂಲ ನಿವಾಸಿಗಳು ಎಂದು ಗುರುತಿಸಲಾಗಿದೆ.

ಮೈಸೂರು ಜಿಲ್ಲೆಯ ಕಾಕನಕೋಟೆ, ಹೆಗ್ಗಡದೇವನಕೋಟೆ ಹಾಗೂ ಕೊಡಗು ಜಿಲ್ಲೆಯ ಅನೇಕ ಭಾಗಗಳಲ್ಲಿ ನೆಲೆಸಿರುವ ಜೇನುಕುರುಬರು (೨೯೩೭೧) ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಕೊರಗ (೧೬೩೨೨) ಸಮುದಾಯಗಳನ್ನು ಸಾಂಪ್ರದಾಯಕ ಬುಡಕಟ್ಟುಗಳು ಎಂದು ಪರಿಗಣಿಸಲಾಗಿದೆ.

ಕರ್ನಾಟಕದಲ್ಲಿ ೫೦ರಷ್ಟು ಅಧಿಕೃತ ಬುಡಕಟ್ಟುಗಳನ್ನು ಕಾಣಬಹುದಾಗಿದೆ. ಇವುಗಳಲ್ಲಿ ವಿವಿಧ ಆದಿವಾಸಿ ಪಂಗಡಕ್ಕೆ ಸೇರಿದ ಸುಮಾರು ೨ ಲಕ್ಷಕ್ಕೂ ಅಧಿಕ ಆದಿವಾಸಿಗಳಿದ್ದಾರೆ. ಒಂದು ಸಾವಿರಕ್ಕೂ ಹೆಚ್ಚು ಆದಿವಾಸಿ ಹಳ್ಳಿಗಳಿವೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ.

೬.೫ರಷ್ಟು ಬುಡಕಟ್ಟು ಜನರಿದ್ದಾರೆ. ಈ ಮೂಲನಿವಾಸಿಗಳಿಗೆ ಸುಮಾರು ೫೦ ಸಾವಿರ ವರ್ಷಗಳ ಇತಿಹಾಸವಿದೆ. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಬುಡಕಟ್ಟು ಜನರನ್ನು ಕಾಣಬಹುದಾಗಿದೆ. ಇವುಗಳಲ್ಲಿ ಪ್ರಮುಖ ಬುಡಕಟ್ಟುಗಳೆಂದರೆ ಉತ್ತರ ಕನ್ನಡದ ಸಿದ್ದಿಗಳು, ಕಚ್ಚೆಗೌಳಿಗರು, ಗೊಂಡರು, ಹಾಲಕ್ಕಿ ಒಕ್ಕಲಿಗರು, ಮಕ್ರಿಗಳು, ದಕ್ಷಿಣ ಕನ್ನಡ ಜಿಲ್ಲೆಯ ಕುಡುಬಿ, ಕೊರಗ, ಮಲೆ ಕುಡಿಯ, ಮೇರ, ಹಲಸ ಇತ್ಯಾದಿ - ಮೈಸೂರು ಜಿಲ್ಲೆಯ ಬೆಟ್ಟ ಪ್ರದೇಶಗಳಲ್ಲಿನ ಸೋಲಿಗರು ಜೇನುಕುರುಬ ಕಾಡುಕುರುಬರಿದ್ದಾರೆ. ತುಮಕೂರು, ಚಿತ್ರದುರ್ಗ ಬಳ್ಳಾರಿಗಳಲ್ಲಿ ವಾಲ್ಮೀಕಿ, ಬೇಡ ಸಮುದಾಯಗಳು, ಶಿವಮೊಗ್ಗದ ಗೌಳಿಗರು, ಕೊಡಗು ಜಿಲ್ಲೆಯ ಎರವ ಮತ್ತು ಜೇನುಕುರುಬರು, ಬೆಂಗಳೂರು ಜಿಲ್ಲೆಯ ಇಲ್ಲಿಗರು, ಚಿಕ್ಕಮಗಳೂರು ಜಿಲ್ಲೆಯ ಗೌಡಾಲರು, ಕೋಲಾರ ಜಿಲ್ಲೆಯ ಅಡವಿಚೆಂಚರು ಮತ್ತು ಹೆಳವರು ಪ್ರಮುಖರು.

ರಾಜ್ಯದಲ್ಲಿ ಅಧಿಕೃತ ಬುಡಕಟ್ಟುಗಳಲ್ಲದೆ ಹಲವು ಅಲೆಮಾರಿ ಅರೆ ಅಲೆಮಾರಿ ಜನಾಂಗಗಳು ಇವೆ. ಗೊಲ್ಲ, ಲಂಬಾಣಿ, ಹಕ್ಕಿ ಪಿಕ್ಕಿ, ಕಿನ್ನರ ಜೋಗಿ, ಬುಡಬುಡಕೆ, ಮುರುಗಾ, ದುರುಗಾ, ಹಗಲವೇಶ ಮುಂತಾದವರೆಲ್ಲ ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದರೂ ಬುಡಕಟ್ಟು ಪಟ್ಟಿಯಲ್ಲಿ ಅಧಿಕೃತವಾಗಿ ದಾಖಲಾಗಿಲ್ಲ.

ಹೀಗೆ ನಾಗರೀಕ ಜನರಿಂದ ದೂರವಿದ್ದು ತಮ್ಮದೇ ಆದ ರೀತಿಯ ಪ್ರತ್ಯೇಕ ಬದುಕನ್ನು ನಡೆಸುತ್ತಿದ್ದ ಬುಡಕಟ್ಟು ಸಮುದಾಯಗಳು ಇತ್ತೀಚೆಗೆ ಹಳ್ಳಿ, ಪಟ್ಟಣಗಳಿ ಸಂಪರ್ಕ ಹೊಂದುತ್ತಿವೆ. ಆದರೆ ನಾಡಿನ ಸಂಪರ್ಕವಿಲ್ಲದೆ ಯಾವುದೇ ಬುಡಕಟ್ಟುಗಳಿಲ್ಲವೆಂದು ಹೇಳಬಹುದು. ಸಾಂಪ್ರದಾಯಕ ಬುಡಕಟ್ಟುಗಳೆಂದು ಗುರುತಿಸಿರುವ ಕೊರಗ ಜೇನುಕುರುಬ, ಬುಡಕಟ್ಟುಗಳು ಸಹ ಹಳ್ಳಿ ಪಟ್ಟಣಗಳೊಂದಿಗೆ ಒಡನಾಟವಿಟ್ಟುಕೊಂಡಿರುವುದು ಕಾಣಬಹುದಾಗಿದೆ.

ಬಹುತೇಕ ಎಲ್ಲಾ ಬುಡಕಟ್ಟುಗಳು ತಮ್ಮ ಜೀವನೋಪಾಯಕ್ಕೆ ಬೇಟೆ ಮತ್ತು ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ, ಬದುಕುತ್ತಿದ್ದ ಇವರು ಅರಣ್ಯವನ್ನು ತಮ್ಮ ವಾಸಸ್ಥಾನವನ್ನಾಗಿಸಿಕೊಂಡು ತದನಂತರದಲ್ಲಿ ಕೃಷಿಯನ್ನು ರೂಢಿಸಿಕೊಂಡು ಆಹಾರ ಉತ್ಪಾದನೆಯಲ್ಲಿ ತೊಡಗಿಸಿಕೊಂಡವರು. ಕೃಷಿಗೆ ಬೇಕಾದಷ್ಟು ಭೂಮಿ ಇದ್ದರೂ ಅಗತ್ಯಕ್ಕೆ ತಕ್ಕಷ್ಟು ಭೂಮಿಯನ್ನು ಬಳಸುತ್ತಿದ್ದರು. ಒಂದು ನಿರ್ದಿಷ್ಟ ಭೂಮಿಯಲ್ಲಿ ಎರಡು ಮೂರು ವರ್ಷ ಬೆಳೆ ಬೆಳೆದ ನಂತರ ಫಲವತ್ತತೆಯ ದೃಷ್ಟಿಯಿಂದ ಆ ಭೂಮಿಯನ್ನು ಬಿಟ್ಟು ಮತ್ತೊಂದು ಕಡೆ ವ್ಯವಸಾಯಕ್ಕೆ ಭೂಮಿ ಬಳಸುತ್ತಿದ್ದರು.

ಬುಡಕಟ್ಟು ಕುಟುಂಬಗಳ ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ಪ್ರಧಾನವಾಗಿತ್ತು. ಇವರು ದುಡಿಮೆಯಲ್ಲಿ ಗಂಡಸರಿಗಿಂತ ಕಡಿಮೆ ಇಲ್ಲ. ಇವರ ಗಟ್ಟಿಮುಟ್ಟಾದ ಮೈಕಟ್ಟು ದುಡಿಮೆಗೆ ಸಹಾಯಕವಾಗಿತ್ತು. ಗಂಡಸರಿಗೆ ಬೇಟೆಯಲ್ಲಿ ಸಹಕರಿಸುತ್ತಿದ್ದರಲ್ಲದೆ ಕಾಡಿನ ಉತ್ಪನ್ನಗಳು ಗೆಡ್ಡೆಗೆಣಸು, ಗಿಡಮೂಲಿಕೆ ಸಂಗ್ರಹಣೆ, ಅಲ್ಲದೆ ಮಕ್ಕಳ ಪಾಲನೆ ಪೋಷಣೆ

ಕುಟುಂಬ ನಿರ್ವಹಣೆ ಜೊತೆಗೆ ವ್ಯವಸಾಯದಲ್ಲೂ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿ ಕೊಳ್ಳುತ್ತಿದ್ದರು. ಅರಣ್ಯವನ್ನು ತಮ್ಮ ಸರ್ವಸ್ವವೆಂದು ನಂಬಿ ಭವಿಷ್ಯದ ಕನಸುಕಾಣದೆ, ವರ್ತಮಾನ ಜೀವನಕ್ಕೆ ಹೆಚ್ಚು ಶ್ರಮಿಸುತ್ತಿದ್ದ ಇವರು ನಿಸರ್ಗ ಸಹಜ ಬದುಕು ನಡೆಸುತ್ತಿದ್ದರು.

ಬ್ರಿಟೀಷರ ಆಗಮನದಿಂದಾಗಿ ಏಕ ರೀತಿಯ ಆಡಳಿತ ಕ್ರಮ ಜಾರಿಗೆ ಬಂತು. ಕೈಗಾರಿಕಾ ಕ್ರಾಂತಿಯಿಂದಾಗಿ ಬೃಹತ್ ಕೈಗಾರಿಕೆಗಳ ನಿರ್ಮಾಣ, ಗಣಿಗಾರಿಕೆ, ರೈಲ್ವೆ-ರಸ್ತೆ ನಿರ್ಮಾಣ, ಎಸ್ಟೇಟ್‌ಗಳ ವಿಸ್ತರಣೆ ಮುಂತಾದವುಗಳಿಂದಾಗಿ ಕಾಡನ್ನು ಹೆಚ್ಚು ಹೆಚ್ಚು ಕಡಿಯಲಾಗುತ್ತಿದೆ. ಜೊತೆಗೆ ಬುಡಕಟ್ಟು ಜನರಿಗೆ ಸೇರಿದ ಪರ್ವತ, ಅರಣ್ಯ ಪ್ರದೇಶಗಳನ್ನು ಕಿತ್ತುಕೊಂಡರು. ಇದರಿಂದ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಭೂಮಿ ಇಲ್ಲದಾಯಿತು. ಅರಣ್ಯ ನೀತಿಯಿಂದಾಗಿ ಬೇಟೆ ಮತ್ತು ಕಾಡಿನ ಉತ್ಪನ್ನಗಳ ಲಭ್ಯತೆಯು ಇಲ್ಲದಾಯಿತು. ಕಾಡಿನೊಂದಿಗೆ ನಾಡಿನ ಜನರ ಸಂಪರ್ಕ ಹೆಚ್ಚಾದಂತೆಲ್ಲಾ ಬುಡಕಟ್ಟು ಜನರನ್ನು ಅರಣ್ಯದಿಂದ ಓಡಿಸಲಾಗುತ್ತಿದೆ.

ಸಂರಕ್ಷಿತ ಅರಣ್ಯದಲ್ಲಿ ಒಂದು ಸಸಿಯನ್ನು ನೆಡುವಂತಿಲ್ಲ. ಹಾಗಂತ ಅರಣ್ಯ ಸಂರಕ್ಷಣಾ ಕಾಯ್ದೆ ಹೇಳುತ್ತದೆ. ಮರ ಕಡಿಯುವುದು ಹೇಗೆ ನಿಷಿದ್ಧವೊ ಹಾಗೆಯೇ ಕಾಡಿನಲ್ಲಿ ಸಸಿಗಳನ್ನು ನಡೆಸುವುದೂ ಕೂಡ ನಿಷಿದ್ಧ. ಅರಣ್ಯದಲ್ಲಿ ವನ್ಯಜೀವಿಗಳನ್ನು ಬಿಟ್ಟು ಮಾನವರು ಬದುಕುವುದು ಕೂಡ ಅಪರಾಧ. ಬೇಟೆಯಾಡುವುದು, ಅರಣ್ಯ ಉತ್ಪನ್ನಗಳನ್ನು ಬಳಸುವುದು ಕಾನೂನಿಗೆ ವಿರುದ್ಧ ಎಂದು ಶತಶತಮಾನಗಳಿಂದ ಕಾಡಿನಲ್ಲಿಯೇ ವಾಸಿಸುತ್ತಿದ್ದ ಆದಿವಾಸಿ ಗಳನ್ನು ಅರಣ್ಯ ಸಂರಕ್ಷಣಾ ಕಾಯ್ದೆ, ವನ್ಯಜೀವ ಸಂರಕ್ಷಣೆಗೆ ಕಾಯ್ದೆ, ಭೂ ಸುಧಾರಣೆ ಕಾಯ್ದೆಗಳ ಹೆಸರಿನಲ್ಲಿ ಕಾಡಿನಿಂದ ಹೊರಕ್ಕೆ ಹಾಕಲಾಗುತ್ತದೆ. ಕಳೆದ ಐವತ್ತು ವರ್ಷಗಳಿಂದ ಸುಮಾರು ಒಂದು ಕೋಟಿ ಬುಡಕಟ್ಟು ಜನರನ್ನು ಕಾಡಿನಿಂದ ಹೊರ ಹಾಕಲಾಗಿದೆ. ಸಹಸ್ರಾರು ವರ್ಷಗಳಿಂದ ಕಾಡನ್ನು ರಕ್ಷಿಸಿಕೊಂಡು ಬಂದಿದ್ದ ಸಮುದಾಯಗಳನ್ನು ಕಾಡಿನಿಂದ ಹೊರಹಾಕಿದಾಗ ನೀರಿನಿಂದ ಹೊರಹಾಕಿದ ಮೀನಿನಂತೆ ಒದ್ದಾಡುವಂತಾಗಿದೆ. ಕಾಡಿನಿಂದ ಓಡಿಸಿ ತಂದು ನಾಡಿಗೆ ಬಿಟ್ಟ ಬುಡಕಟ್ಟು ಜನರಿಗೆ ಸೂಕ್ತಪುನರ್‌ವಸತಿ ಕೂಡ ಒದಗಿಸಿಲ್ಲ. ಕೇವಲ ೧೯ ಲಕ್ಷ ಆದಿವಾಸಿಗಳಿಗೆ ಪುನರ್‌ವಸತಿ ಕಲ್ಪಿಸಲಾಗಿದೆ. ಉಳಿದ ಸಮುದಾಯಗಳಿಗೆ ವಸತಿ ಸೌಲಭ್ಯ ಇಲ್ಲದೆ ಬೀದಿ ಪಾಲಾಗಿದ್ದಾರೆ. ಅಲ್ಲದೆ ಅರಣ್ಯ ಕಿರುಉತ್ಪನ್ನಗಳನ್ನು ಬಳಸಬಾರದು. ಅರಣ್ಯದೊಳಗೆ ಹೋಗಬಾರದು ಕಾಡಿನಲ್ಲಿರುವ ದೇವರುಗಳನ್ನು ಸಹ ನೋಡಲು ಹೋಗಬಾರದೆಂಬ ಷರತ್ತು ವಿಧಿಸಿದ್ದು ಅರಣ್ಯವಾಸಿಗಳನ್ನು ಇನ್ನಷ್ಟು ಕೆಂಗೆಡಿಸಿತು.

ಕರ್ನಾಟಕದ ಬುಡಕಟ್ಟು ಜನರ ಸ್ಥಿತಿ ಇದರಿಂದ ಹೊರತಾಗಿಲ್ಲ. ಅಣೆಕಟ್ಟು ನಿರ್ಮಾಣ ಮತ್ತು ರಾಷ್ಟ್ರೀಯ ಉದ್ಯಾನಗಳ ಹೆಸರಿನಲ್ಲಿ ಈವರೆಗೆ ಎಪ್ಪತ್ತೈದು ಸಾವಿರಕ್ಕೂ ಹೆಚ್ಚು ಬುಡಕಟ್ಟು ಜನರನ್ನು ಕಾಡಿನಿಂದ ಹೊರಹಾಕಲಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನದಿಂದ ಇನ್ನಷ್ಟು ಆದಿವಾಸಿಗಳನ್ನು ಹೊರಕ್ಕೆ ಹಾಕುವ ಪ್ರಯತ್ನ ನಡೆಯುತ್ತಿದೆ.

ರಾಜ್ಯದಲ್ಲಿ ಇದುವರೆಗೆ ಅಣೆಕಟ್ಟು ನಿರ್ಮಾಣ ಮತ್ತು ರಾಷ್ಟ್ರೀಯ ಉದ್ಯಾನಗಳ ಹೆಸರಿನಲ್ಲಿ ಸಾಕಷ್ಟು ಅರಣ್ಯವನ್ನು ನಾಶ ಮಾಡಲಾಗುತ್ತಿದೆ. ನಾಗರಹೊಳೆ ರಾಷ್ಟ್ರೀಯ ಉದ್ಯಾನ ೬೪೩ ಚದರ ಕಿಲೋಮೀಟರ್ ಇದ್ದು ಕೊಡಗು ಮತ್ತು ಮೈಸೂರು ಜಿಲ್ಲೆಯಲ್ಲಿ ಹರಡಿಕೊಂಡಿದೆ. ಮೈಸೂರು ಚಾಮರಾಜ ಜಿಲ್ಲೆಗಳಲ್ಲಿ ೮೦೦ ಚದರ ಕಿಲೋಮೀಟರ್ ಬಂಡೀಪುರ ರಾಷ್ಟ್ರೀಯ ಉದ್ಯಾನ ನಿರ್ಮಿಸಲಾಗಿದೆ. ಉಡುಪಿ, ಚಿಕ್ಕಮಗಳೂರು ಜಿಲ್ಲೆಗಳಲ್ಲಿರುವ ಕುದುರೆಮುಖ ರಾಷ್ಟ್ರೀಯ ಉದ್ಯಾನ ೮೫೦ ಚದರ ಕಿಲೋಮೀಟರ್ ಅರಣ್ಯ ವ್ಯಾಪಿಸಿಕೊಂಡಿದೆ. ಇಷ್ಟೆ ಅಲ್ಲದೆ ಕಬಿನಿ, ಹಾರಂಗಿ, ಅಣೆಕಟ್ಟುಗಳು, ವನ್ಯಧಾಮ ಗಳಿಂದ ಭದ್ರಾ, ಬಿಳಿಗಿರಿರಂಗನಬೆಟ್ಟ, ಬ್ರಹ್ಮಗಿರಿ ಮುಂತಾದವುಗಳ ಹೆಸರಿನಲ್ಲಿ ಸಾಕಷ್ಟು ಕಾಡನ್ನು ನಾಶ ಮಾಡಲಾಗಿದೆ.

ಒಂದು ಅಧ್ಯಯನದ ಪ್ರಕಾರ ಭಾರತದಲ್ಲಿ ಶೇ. ೮೦ರಷ್ಟು ಇದ್ದ ಕಾಡು ಇವೆಲ್ಲವುಗಳ ಅವಾಂತರಗಳಿಂದಾಗಿ ಪ್ರಸ್ತುತ ಕಾಡಿನ ಪ್ರಮಾಣ ಶೇ. ೨೭ರಷ್ಟಾಗಿದೆ.

ದೇಶದ ಅಭಿವೃದ್ಧಿ ಯೋಜನೆಗಳಿಂದ ಎಷ್ಟೋ ಬುಡಕಟ್ಟುಗಳು ನೆಲೆ ಕಳೆದುಕೊಂಡು ವಿಲವಿಲನೆ ಒದ್ದಾಡುವಂತಾಗಿದೆ. ನಾಗರೀಕ ಪ್ರಪಂಚದಿಂದ ದೂರವಿದ್ದು ನೆಮ್ಮದಿಯ ಬದುಕು ಸಾಗಿಸುತ್ತಿದ್ದ ಅರಣ್ಯವಾಸಿಗಳು ಸರಕಾರದ ಬೃಹತ್ ಪ್ರಮಾಣದ ಯೋಜನೆ ಗಳಿಂದಾಗಿ ಕಾಡಿನಿಂದ ಹೊರಗಟ್ಟಲ್ಪಟ್ಟ ಬುಡಕಟ್ಟುಗಳಿಗೆ ಪುನರ್ವವಸತಿ ಇಲ್ಲದೆ ಜಮೀನು ಇಲ್ಲದೆ ನಿರ್ಗತಿಕರಾದ ಇವರು ಟೀ, ಕಾಫಿ, ಗಣಿ, ಜೀತದಾಳುಗಳಾಗಿ ಸೇರಿಕೊಂಡರು. ಸ್ಥಿರವಾದ ಕೆಲಸಗಳಿಲ್ಲದೆ ವ್ಯಾಪಾರಿ, ಸಾಹುಕಾರರ ಬಳಿ ಸಾಲ ಮಾಡಿ ತಮ್ಮಲ್ಲಿರುವ ಅಲ್ಪ ಸ್ವಲ್ಪ ಪ್ರಮಾಣದ ವಸ್ತುಗಳನ್ನು ಕಳೆದುಕೊಂಡು ಬಡತನಕ್ಕೆ ದೂಡಲ್ಪಟ್ಟು ಬುಡಕಟ್ಟುಗಳು ತೀವ್ರ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದವು. ಹೀಗೆ ಕಾಡಿನಿಂದ ದೂಡಲ್ಪಟ್ಟ ಬುಡಕಟ್ಟು ಜನರು ಗಣಿ ಕೈಗಾರಿಕೆ, ಎಸ್ಟೇಟ್‌ಗಳಲ್ಲಿ ದುಡಿದು ಬದುಕುತ್ತಿರುವ ಸಮುದಾಯಗಳನ್ನು ಕೂಲಿ ಕಾರ್ಮಿಕರು ಎಂದು ಪರಿಗಣಿಸಲಾಯಿತೆ ಹೊರತು ಅವರು ಕೂಡ ಉತ್ಪಾದಕರು ಎಂಬ ದೃಷ್ಟಿಯಿಂದ ನೋಡಲಿಲ್ಲ ಅಲ್ಲದೆ ಆಧುನಿಕ ಅಭಿವೃದ್ಧಿ ಪರಂಪರೆಯಲ್ಲಿ ಅವರು ಒಂದು ಹೊರೆಯಾಗಿ ಪರಿಣಮಿಸಿದ್ದು ವಿಪರ್ಯಾಸ (ಹಿ.ಚಿ. ಬೋರಲಿಂಗಯ್ಯ).

ಈ ನೌಕರಶಾಹಿಗಳು ಭೂಮಾಲೀಕರು ಮತ್ತು ಬಂಡವಾಳಶಾಹಿಗಳ ಪರವಾಗಿದ್ದ ಕಾರಣ ಕಳೆದ ಐವತ್ತು ವರ್ಷಗಳಲ್ಲಿ ಶೇ. ೫೦ರಷ್ಟು ಅರಣ್ಯ ಕಳೆದುಕೊಂಡೆವು. ಅರಣ್ಯ ಅಷ್ಟೇ ಅಲ್ಲ. ಸಾವಿರಾರು ವರ್ಷಗಳಿಂದ ಅರಣ್ಯವನ್ನು ಕಾಪಾಡಿಕೊಂಡು ಬಂದಿದ್ದ ಬುಡಕಟ್ಟು ಜನರ ಅದರಲ್ಲೂ ಕಾಡಿನ ಉತ್ಪನ್ನ, ಔಷಧಿ ಸಸ್ಯಗಳು, ಗಿಡಮೂಲಿಕೆಗಳು, ಅವುಗಳಿಂದ ಜೀವನ ಸಾಗಿಸುತ್ತಿದ್ದ ಬುಡಕಟ್ಟು ಮಹಿಳೆಯರ ಬದುಕು ಅತಂತ್ರ ಸ್ಥಿತಿ ತಲುಪಿತು. ಬುಡಕಟ್ಟು ಮಹಿಳೆಯರು ಆರ್ಥಿಕವಾಗಿ ಅಲ್ಲದೆ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದಾರೆ. ಆದಿವಾಸಿ ಮಹಿಳೆಯರು ನಿಸರ್ಗದಲ್ಲಿ ನೆಮ್ಮದಿಯಿಂದ ಬದುಕುತ್ತಿದ್ದಾರೆ ಎಂಬುದು ಒಂದು ಮಿಥ್ಯ. ನೇಪಥ್ಯದಲ್ಲಿ ಅವರು ಕನಿಷ್ಟ ಪಕ್ಷ ತಮಗೆ ಅಗತ್ಯದಷ್ಟು ಆಹಾರ ಕೂಡ ಹೊಂದಿರಲಿಲ್ಲ.

ಅನೇಕ ಸಾಂಕ್ರಾಮಿಕ ರೋಗಗಳಿಂದ ಬಳಲುತ್ತಿದ್ದರು. ೧೯ನೇ ಶತಮಾನದ ಆರಂಭದಲ್ಲಿ ನೀಲಗಿರಿ ತೋಡ ಮಹಿಳೆಯರು ಐರೋಪ್ಯರ ಅತಿಕಾಮುಕತೆಗೆ ಬಲಿಯಾಗಿ ಲೈಂಗಿಕ ರೋಗಗಳಿಂದ ಒಂದೇ ಸಮನೆ ಸಾಯತೊಡಗಿದರು. ಮದ್ರಾಸ್ ಸರ್ಕಾರ ಉಚಿತ ವೈದ್ಯಕೀಯ ಸೇವೆಕೊಡಿಸಿ, ಕಷ್ಟಪಟ್ಟು ಬುಡಕಟ್ಟು ಮಹಿಳೆಯರನ್ನು ಉಳಿಸಿಕೊಳ್ಳಬೇಕಾಯಿತು.

ಬುಡಕಟ್ಟು ಮಹಿಳೆಯರ ಶೋಷಣೆ ಇಂದು ನಿನ್ನೆಯದಲ್ಲ. ವೇದ ಪುರಾಣಗಳ ಕಾಲ ದಿಂದಲೂ ಕಾಡಿನಲ್ಲಿದ್ದರೂ ಊರಿನ ಜನರಿಂದ ನಿರಂತರ ಶೋಷಿಸಲ್ಪಡುತ್ತಾ ಬಂದಿದ್ದಾರೆ. ರಾಮಾಯಣದಲ್ಲಿ ಬರುವ ಶೂರ್ಪಣಿಕ ಒಬ್ಬ ಧೈರ್ಯಶಾಲಿ ಬುಡಕಟ್ಟು ಮಹಿಳೆ. ಲಕ್ಷ್ಮಣನ ಬಗ್ಗೆ ಇದ್ದ ತನ್ನ ವಯೋ ಸಹಜ ಪ್ರೀತಿ ವ್ಯಕ್ತಪಡಿಸಿದಾಗ ದಾಯಾಹೀನ ಲಕ್ಷ್ಮಣ ಶೂರ್ಪಣಿಕೆಯ ಮೂಗು ಮುಂದಲೆ ಕುಯ್ಯಲು ಹೇಸಲಿಲ್ಲ. ಅತ್ಯಂತ ಬಲಾಢ್ಯ ಶಕ್ತಿಶಾಲಿ ಬುಡಕಟ್ಟು ಮಹಿಳೆ ತಾರಕ ಎಂಬ ರಾಕ್ಷಸಿಯನ್ನು ರಾಮಾಯಣದಲ್ಲಿ ಅತ್ಯಂತ ಕ್ರೂರವಾಗಿ ಚಿತ್ರಿಸಲಾಗಿದೆ. ಅಲ್ಲದೆ ಪಂಚಪತಿವ್ರತೆಯಲ್ಲಿ ಒಬ್ಬಳಾಗಿದ್ದ ಸೀತೆಯ ಶೀಲವನ್ನು ಶಂಕಿಸಿ ಗರ್ಭಿಣಿಯನ್ನು ಕಾಡಿಗೆ ಕಳಿಸಿದ್ದ ಶ್ರೀರಾಮನನ್ನು ಅತ್ಯಂತ ಪರಾಕ್ರಮಶಾಲಿ ಎಂದು ಬಿಂಬಿಸಲಾಗುತ್ತಿದೆ. ಹೀಗೆ ಕಥೆ ಪುರಾಣಗಳಿಂದ ಇಲ್ಲಿಯವರೆಗೆ ಕಾಡಿನಲ್ಲಿದ್ದರೂ ನಾಡಿನ ಜನರಿಂದ ಶೋಷಿಸುತ್ತಲೇ ಬಂದಿರುವ ಬುಡಕಟ್ಟು ಮಹಿಳೆಯರ ಅಭಿವೃದ್ಧಿಯ ಬಗ್ಗೆ ಸರಕಾರವಾಗಲಿ, ಸಂಶೋಧಕರು ಲೇಖಕರಾಗಲಿ ಗಮನಹರಿಸಲೇ ಇಲ್ಲ.

ಆದಿವಾಸಿಗಳ ಪ್ರಂಜಾಲ ಜಗತ್ತಿನ ದುರಂತ ಹಾಗೂ ಹೀನಾಯ ಶೋಷಣೆಯನ್ನು ತಮ್ಮ ಕಾದಂಬರಿಗಳ ಮೂಲಕ ಗಟ್ಟಿಧ್ವನಿಯಲ್ಲಿ ಪ್ರತಿರೋಧಿಸುತ್ತಾ ಬಂದಿರುವ ಸೃಜನಶೀಲ ಲೇಖಕಿ ಮಹಾಶ್ವೇತಾದೇವಿಯವರು ಕೂಡ ಬುಡಕಟ್ಟು ಮಹಿಳೆಯರ ಬಗ್ಗೆ ಕಿಂತಿಷ್ಟು ಚಿಂತಿಸಿದಂತೆ ಕಾಣುವುದಿಲ್ಲ. ಈಶಾನ್ಯ ಭಾರತದ ರಾಜ್ಯಗಳಲ್ಲಿನ ಆದಿವಾಸಿಗಳ ಜೊತೆ ನಿರಂತರ ಒಡನಾಟವಿದ್ದುಕೊಂಡಿದ್ದ ಇವರು ಬುಡಕಟ್ಟುಗಳ ಮೇಲೆ ನಡೆಯುವ ಕ್ರೌರ್ಯ ಮತ್ತು ಹಿಂಸೆಗಳ ಹಿಂದಿರುವ ಆರ್ಥಿಕ, ರಾಜಕೀಯ ಹುನ್ನಾರಗಳನ್ನು ಕಟು ವ್ಯಂಗ ಹಾಗೂ ಆಕ್ರೋಶಗಳಿಂದಲೇ ವಿಶ್ಲೇಷಿಸುತ್ತಾ ಬಂದರು. ಆದಿವಾಸಿಗಳ ಅಭಿವೃದ್ಧಿ ಕುರಿತು ಚಿಂತನೆ ಯನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಬುಡಕಟ್ಟು ಮಹಿಳೆಯರ ಬಗ್ಗೆ ಚಿಂತನೆ ಕಟ್ಟಿ ಕೊಡುತ್ತಿಲ್ಲ.

ಎಪ್ಪತ್ತು ಎಂಭತ್ತರ ದಶಕದಲ್ಲಿ ಬುಡಕಟ್ಟು ಜನರ ಹಾಗೂ ಮಹಿಳೆಯರ ಅಭಿವೃದ್ಧಿ ಕುರಿತು ವಿಷಯಗಳು ಚರ್ಚೆಯ ಮುಂಚೂಣಿಗೆ ಬಂದವು. ಬುಡಕಟ್ಟು ಮತ್ತು ಮಹಿಳಾ ಅಭಿವೃದ್ಧಿ ಯೋಜನೆಗಳು ಸಹ ಬುಡಕಟ್ಟು ಮಹಿಳೆಯರನ್ನು ಪರಿಗಣಿಸಲಿಲ್ಲ.

ಜೀವನೋಪಾಯಕ್ಕೆ ಬೇಟೆ, ವ್ಯವಸಾಯ ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ ನಾಗರೀಕ ಜನರ ಸಂಪರ್ಕವಿಲ್ಲದೆ. ಶತಶತಮಾನಗಳ ಕಾಲ, ಕಾಡಿನಲ್ಲೇ ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳ ಬಗ್ಗೆ ಭಾರತದ ರಾಜ ಮನೆತನಗಳಾಗಲಿ, ಮುಸ್ಲಿಂ ಆಳ್ವಿಕೆಗಳಾಗಲಿ ಗಮನಹರಿಸಲೇ ಇಲ್ಲ. ಬ್ರಿಟೀಷರ ಆಗಮನ ಬುಡಕಟ್ಟು ಜನಗಳ ಮೇಲೆ ನಕಾರಾತ್ಮಕ

ಪರಿಣಾಮ ಬಿದ್ದಷ್ಟು ಸಕಾರತ್ಮ ಪರಿಣಾಮ ಬೀರಿದೆ. ನಮ್ಮ ದೇಶವನ್ನು ಪರಕೀಯರು ಆಳುತ್ತಿದ್ದಾರೆ. ನಾವು ಅವರ ಗುಲಾಮರಾಗಿದ್ದೇವೆ ಎಂಬ ಭಾವನೆಯೇ ಬುಡಕಟ್ಟು ಜನರಲ್ಲಿ ಮೂಡಿರಲಿಲ್ಲ. ದೇಶ ಸ್ವಾತಂತ್ರ ಪಡೆದುಕೊಂಡಾಗ ಬುಡಕಟ್ಟು ಜನರು ಸ್ವಾತಂತ್ರ ಕಳೆದುಕೊಂಡರು. ಬ್ರಿಟಿಷರ ಆಡಳಿತ ಸಂದರ್ಭದಲ್ಲಿ ಗಣಿಗಾರಿಕೆ, ರೈಲು ಸಂಪರ್ಕ, ಎಸ್ಟೇಟ್ ನಿರ್ಮಾಣ ಮುಂತಾದವುಗಳಿಂದಾಗಿ ಬುಡಕಟ್ಟುಗಳ ಬದುಕು ಸುಖ್ಯವಿರಲಿಲ್ಲ. ಆದರೆ ಬ್ರಿಟೀಷರು ದೇಶಬಿಟ್ಟು ಹೋದ ಮೇಲೆ ಬುಡಕಟ್ಟು ಜನರ ಬದುಕು ಹಸನಾಯಿತೆ? ಸರಕಾರದ ಅನೇಕ ಅಭಿವೃದ್ಧಿ ಯೋಜನೆಗಳಿಂದಲೇ ಬುಡಕಟ್ಟುಗಳು ನೆಲೆ ಕಳೆದುಕೊಂಡವು. ಅಲ್ಲದೆ ಸರ್ಕಾರದ ಬೃಹತ್ ಪ್ರಮಾಣದ ಯೋಜನೆಗಳ ಕೆಳಗೆ ಸಿಕ್ಕಿ ಒದ್ದಾಡ ತೊಡಗಿದವು. ಪರಂಗಿಯರ ಆಗಮನದಿಂದಾಗಿ ಬುಡಕಟ್ಟು ಜನರ ಮೇಲೆ ಒಂದಿಷ್ಟು ಬೆಳಕು ಚೆಲ್ಲಲಾಯಿತು. ಪರಕೀಯರ ಆಗಮನದಿಂದಾಗಿ ಭಾರತದಲ್ಲಿ ಏಕರೀತಿಯ ಆಳ್ವಿಕೆ ಕ್ರಮ ಜಾರಿಗೆ ಬಂತು. ಕೈಗಾರಿಕಾ, ಕ್ರಾಂತಿಯಿಂದಾಗಿ ಕೈಗಾರಿಕೆ, ಗಣಿಗಾರಿಕೆ ರೈಲು ಸಂಪರ್ಕ, ರಸ್ತೆ ಮಾರ್ಗಗಳು ಕಾಡು ಮತ್ತು ನಾಡಿನ ಜನರ ಮಧ್ಯೆ ಸಂಪರ್ಕ, ಸೇತುವೆ ನಿರ್ಮಿಸಿದವು. ಸಂಪರ್ಕ ಸಾಧನಗಳು ಹೆಚ್ಚಿದಂತೆಲ್ಲಾ ಬುಡಕಟ್ಟು ಜನರ ತಮ್ಮ ಅಸ್ತಿತ್ವ ಕಳೆದುಕೊಂಡೋ ಅಥವಾ ಕೆಲಸ ಹುಡುಕಿಕೊಂಡೋ ನಾಡ ಜನರೊಂದಿಗೆ ಬೆರೆಯುವ ಅನಿವಾರ್ಯತೆ ಉಂಟಾಯಿತು. ಹೀಗೆ ನಾಗರೀಕ ಜನರೊಂದಿಗೆ ಒಡನಾಟ ಹೆಚ್ಚಿದಂತೆ ಬುಡಕಟ್ಟು ಜನ ಅರಿವಿನ ಗವಾಕ್ಷಿಗಳು ತೆರೆದಂತೆಲ್ಲಾ ತಾವು ಕಳೆದುಕೊಂಡಿದ್ದನ್ನು ಪಡೆದುಕೊಳ್ಳಲು ಸಂಘಟಿತರಾಗಿ ಹೋರಾಟಕ್ಕೆ ತೊಡಗಿರುವುದನ್ನು ಕಾಣಬಹುದಾಗಿದೆ.

ಸಹಸ್ರಾರು ವರ್ಷಗಳಿಂದ ನೆಲೆಸಿರುವ ಆದಿವಾಸಿಗಳೇ ಈ ದೇಶದ ಮೂಲನಿವಾಸಿಗಳು. ಅರಣ್ಯವನ್ನು ನಂಬಿ ಬದುಕುತ್ತಿರುವ ನಮಗೆ ಅರಣ್ಯ ಹಕ್ಕು ನೀಡಬೇಕೆಂದು; ಬುಡಕಟ್ಟು ನಂಬಿ ಬದುಕುತ್ತಿರುವ ನಮಗೆ ಅರಣ್ಯದ ಹಕ್ಕು ನೀಡಬೇಕೆಂದು ಬುಡಕಟ್ಟು ಜನಾಂಗದವರು ಕಳೆದ ಒಂದು ಶತಮಾನದಿಂದಲೂ ಹೋರಾಟ ನಡೆಸುತ್ತಿದ್ದಾರೆ. ಆದಿವಾಸಿಗಳ ಪರ ಕೆಲಸ ಮಾಡುತ್ತಿದ ಕೆಲವು ಸಂಸ್ಥೆಗಳು ಹೋರಾಟಕ್ಕೆ ಕೈ ಜೋಡಿಸಿದವು. ದೇಶಾದ್ಯಂತ ನಿರಂತರ ಚಳುವಳಿಗಳು ನಡೆಯುತ್ತಿವೆ. ಕರ್ನಾಟಕದ ೬೦ ಹಳ್ಳಿಗಳಲ್ಲಿ ಆಗಸ್ಟ್ ೧೫ ರಂದು ಆದಿವಾಸಿಗಳು ರಾಷ್ಟ್ರಧ್ವಜ ಆರೋಹಣ ಮಾಡಿ ಧರಣಿ ನಡೆಸಿದರು. ದೇಶದ ೧೮ ರಾಜ್ಯಗಳಿಂದ ಆದಿವಾಸಿಗಳು ದೆಹಲಿಯಲ್ಲಿ ೨೦ ದಿನಗಳ ಕಾಲ ಧರಣಿ ನಡೆಸಿದರು. ಕರ್ನಾಟಕದಿಂದಲೂ ಸುಮಾರು ೨೦೦ ಜನ ಆದಿವಾಸಿಗಳು ದೆಹಲಿಗೆ ತೆರಳಿ ಧರಣಿ ನಡೆಸಿದರು. ಹೀಗೆ ಆದಿವಾಸಿ ಜನಗಳು ತಮ್ಮ ಉಳಿವು ಮತ್ತು ಕಾಡಿನ ರಕ್ಷಣೆಗಾಗಿ ಹೋರಾಡುತ್ತಾ ಬಂದಿದ್ದಾರೆ. ಮಹಿಳೆಯರು ಸಹ ಚಿಪ್ಕೋ ಅಥವಾ ಅಪ್ಪಿಕೋ ಚಳುವಳಿ ಮುಂತಾದ ಚಳುವಳಿಗಳಲ್ಲಿ ಪಾಲ್ಗೊಂಡು ಕಾಡಿನ ರಕ್ಷಣೆಗಾಗಿ ಹೋರಾಡಿರುವುದು ಕಾಣಬಹುದು. ಆದಿವಾಸಿಗಳ ನಿರಂತರ ಹೋರಾಟ ಹಾಗೂ ಸಂಘಸಂಸ್ಥೆಗಳ ಕಾರ್ಯ ಚಟುವಟಿಕೆಗಳು ಸರಕಾರ ಹಾಗೂ ಜನ ಸಾಮಾನ್ಯರ ಗಮನ ಸೆಳೆದವು.

ಎಪ್ಪತ್ತರ ದಶಕದಲ್ಲಿ ಬುಡಕಟ್ಟು ಅಭಿವೃದ್ಧಿಗೆ ಸಂಬಂಧಿಸಿದಂತೆ ವಿಷಯಗಳು ಚರ್ಚೆಯ ಮುಂಚೂಣೆಗೆ ಬಂದವು. ಬುಡಕಟ್ಟು ಜನರು ಮುಖ್ಯವಾಹಿನಿಗೆ ಬರಬೇಕೆ ಅಥವಾ ಬೇಡವೆ ಎಂಬುದಾಗಿತ್ತು. ಬುಡಕಟ್ಟು ಜನರಿಗೆ ಸಂಬಂಧಿಸಿದಂತೆ ಈ ಪ್ರಶ್ನೆಗಳು ಚರ್ಚೆಗೆ ಬರಲು ಸರ್ಕಾರದ ಆರ್ಥಿಕ ವಿಷಯಗಳು, ಅರಣ್ಯ ಇಲಾಖೆಯವರು ಅಡ್ಡಿ ಆತಂಕವಿಲ್ಲದೆ ಬುಡಕಟ್ಟು ಜನರನ್ನು ನಿರ್ವಹಿಸುವುದು, ಮುಖ್ಯ ಕಾರಣವಾಗಿತ್ತು. ಜೊತೆಗೆ ಕಾನೂನು ಶಿಸ್ತು ಕಾಪಾಡುವ ದೃಷ್ಟಿಯಿಂದಲೂ ಅಗತ್ಯವಾಗಿತ್ತು. ಬುಡಕಟ್ಟು ಜನರು, ಮುಖ್ಯವಾಹಿನಿಗೆ ಬರಬೇಕು, ಬೇಡ ಎಂದು ನಿಖರವಾಗಿ ಹೇಳುವುದು ಅಷ್ಟು ಸುಲಭವಲ್ಲ (ಚಂದ್ರ ಪೂಜಾರಿ ಎಂ.). ಈ ವಿಷಯ ಕುರಿತಂತೆ ಬುಡಕಟ್ಟು ಚಿಂತಕರಲ್ಲಿಯೇ ಭಿನ್ನತೆಯನ್ನು ಕಾಣಬಹುದಾಗಿದೆ.

ಬುಡಕಟ್ಟು ಜನರನ್ನು ಅವರ ಪಾಡಿಗೆ ಅವರನ್ನು ಕಾಡಿಗೆ ಬಿಟ್ಟುಬಿಡಿ, ನೆಮ್ಮದಿಂದ ಬದುಕಲಿ ಎಂಬುದು ಒಂದು ಗುಂಪಿನವರ ವಾದ. ಬುಡಕಟ್ಟು ಜನರು ಕಾಡಿನಲ್ಲಿರಲಿ ನಾಡಿನಲ್ಲಿರಲಿ ಅವರು ಈ ದೇಶದ ಪ್ರಜೆಗಳು, ಅಭಿವೃದ್ಧಿಯ ಫಲಗಳು ಸಮಾಜದ ಕಟ್ಟುಕಡೆಯ ವ್ಯಕ್ತಿಗೂ ತಲುಪಬೇಕೆಂಬುದೇ ಯೋಜನೆಯ ಉದ್ದೇಶ. ಹಾಗಾಗಿ ಬುಡಕಟ್ಟು ಜನರು ಮುಖ್ಯವಾಹಿನಿಯ ವ್ಯಾಪ್ತಿಯಲ್ಲಿ ಬರಬೇಕೆಂಬುದು ಮತ್ತೊಂದು ಗುಂಪಿನವಾದ. ಇನ್ನು ಬುಡಕಟ್ಟು ಜನರ ಅನನ್ಯತೆಯನ್ನು ಉಳಿಸಿಕೊಂಡು ಅವರ ಅಭಿವೃದ್ಧಿ ಸಾಧಿಸಬೇಕೆಂದು ಹಿ.ಚಿ. ಬೋರಲಿಂಗಯ್ಯನವರಂತಹ ಚಿಂತಕರ ವಾದ.

ಮೊದಲ ಗುಂಪಿನ ವಿದ್ವಾಂಸರ ಚಿಂತನೆಗಳು ಮಂಥನ ಮಾಡುವಂತ ವಿಷಯಗಳು ಎಂದರೆ ಈಗಾಗಲೇ ಕಾಡಿನಿಂದ ಹಿಡಿದು ತಂದು ನಾಡಿಗೆ ಬಿಟ್ಟಿರುವ ಬುಡಕಟ್ಟು ಸಮುದಾಯ ಗಳಿಗೆ ಪುನರ್ವಸತಿಯನ್ನು ಕಲ್ಪಿಸದೆ ಅವರ ಅಭಿವೃದ್ಧಿಯತ್ತ ನಿರ್ಲಕ್ಷ ತೋರುತ್ತಿರುವುದು. ದೇಶದ ಸ್ವಾತಂತ್ರ್ಯ ನಂತರದಲ್ಲಿ ಸ್ಥಳಾಂತರಗೊಂಡ ಒಂದು ಕೋಟಿ ಆದಿವಾಸಿಗಳಲ್ಲಿ ಎಂಭತ್ತೊಂದು ಲಕ್ಷಕ್ಕೂ ಹೆಚ್ಚು ಆದಿವಾಸಿಗಳಿಗೆ ಪುನರ್ವಸತಿ ಕಲ್ಪಿಸದೇ ಇರುವುದು. ಕರ್ನಾಟಕದಲ್ಲಿ ಅಣೆಕಟ್ಟು, ರಾಷ್ಟ್ರೀಯ ಉದ್ಯಾನ, ಗಣಿಗಾರಿಕೆ ಹೆಸರಿನಲ್ಲಿ ಎಪ್ಪತ್ತೈದು ಸಾವಿರಕ್ಕೂ ಹೆಚ್ಚು ಜನರನ್ನು ಕಾಡಿನಿಂದ ಓಡಿಸಲಾಗಿದೆ. ಆದರೆ ಅವರಲ್ಲಿ ಶೇ. ೮೦ರಷ್ಟು ಜನರಿಗೆ ಪುನರ್ವಸತಿ ಕಲ್ಪಿಸಿಲ್ಲ. ಜಮೀನು ಸಹ ನೀಡಿಲ್ಲ. ಬಂಡೀಪುರ ರಾಷ್ಟ್ರೀಯ ಉದ್ಯಾನದಿಂದ ದೂಡಿದ ಮೂರು ಸಾವಿರ ಕುಟುಂಬಗಳಿಗೆ ಯಾವುದೇ ಪುನರ್ವಸತಿ ಸೌಲಭ್ಯ ನೀಡಿಲ್ಲ. ಹೀಗಾಗಿ ಕಾಡಿನಿಂದ ನಾಡಿಗೆ ಬಂದು ಬೀದಿ ಪಾಲಾಗುವುದಕ್ಕಿಂತ ಬುಡಕಟ್ಟುಗಳು ಅರಣ್ಯದಲ್ಲೇ ಇರುವುದು ಸೂಕ್ತ ಎಂಬುದು ವಿದ್ವಾಂಸರ ನಿಲುವಾಗಿದೆ.

ಕಾಡಿನ ಮೇಲೆ ಸರಕಾರದ ಸಾಮ್ಯ ಹೆಚ್ಚಿದಂತೆಲ್ಲಾ ಅರಣ್ಯದಿಂದ ಬುಡಕಟ್ಟು ಜನರನ್ನು ಊರಿಗೆ ತಂದು ಬಿಡಲಾಗುತ್ತದೆ. ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದ ಬುಡಕಟ್ಟು ಸಮುದಾಯಗಳು ಮತ್ತೆ ಕಾಡಿಗೆ ಓಡಿ ಹೋಗಲು ತವಕಿಸುತ್ತಿವೆ (ಇಂದಿರಾ ಎಂ.). ನಿಸರ್ಗದಲ್ಲಿ ನಿಶ್ಚಿಂತೆಯಿಂದ ಬದುಕುತ್ತಿದ್ದ ಬುಡಕಟ್ಟು ಜನರನ್ನು ಕಾಡಿನಿಂದ ಹೊರ ಹಾಕಿದಾಗ ನೀರಿನಿಂದ ತೆಗೆದು ಹೊರ ಹಾಕಿದ ಮೀನಿನಂತಾಗಿದ್ದು ಜನರು ಆರಂಭದಲ್ಲಿ

ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದೆ ಓಡ ಬೇಕೆನಿಸುವುದು ಸಹಜ. ಉದಾ:- ಉನ್ನತ ಶಿಕ್ಷಣಕ್ಕೆಂದು ಹಳ್ಳಿಗಳಿಂದ, ನಗರಗಳಿಗೆ ಬಂದು ವಸತಿ ಶಾಲೆಗಳಲ್ಲಿ ನೆಲೆಸಿದಾಗ ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಲಾಗದೆ, ಓದು ಬರಹ ಯಾವುದು ಬೇಡ; ಹಳ್ಳಿಗೆ ಓಡಿ ಹೋಗ ಬೇಕೆನಿಸುತ್ತಿತ್ತು. ತದನಂತರದಲ್ಲಿ ವಸತಿ ಶಾಲೆ ಬಿಟ್ಟು ಹೋಗುವುದೇ ಕಷ್ಟವಾಗುತ್ತಿತ್ತು. ಹೊಂದಿಕೊಳ್ಳಲಾಗದೆ ಇರುವುದನ್ನು ಮುಂದು ಮಾಡಿ ಬುಡಕಟ್ಟು ಜನರನ್ನು ಕಾಡಿಗೆ ತಳ್ಳುವುದು ಸರಿಯಲ್ಲ.

ಬುಡಕಟ್ಟು ಜನರಿಗೆ ಅವರದೇ ಆದ ಬದುಕಿದೆಯೆಂದು ಅವರ ಪಾಡಿಗೆ ಅವರನ್ನು ಬಿಟ್ಟುಬಿಟ್ಟರೆ ಕಾಡಿನಲ್ಲಿ ನೆಮ್ಮದಿಯಿಂದ ಬದುಕಲು ಈಗ ಸಾಧ್ಯವೆ. ಹಿಂದೆ ಅಪಾರವಾದ ಕಾಡಿತ್ತು ಬುಡಕಟ್ಟು ಜನರ ಪ್ರಮಾಣವು ಕಡಿಮೆ ಇತ್ತು. ಬೇಟೆಗೆ ಕಾಡು ಪ್ರಾಣಿಗಳಿದ್ದವು. ಕಾಡಿನ ಉತ್ಪನ್ನಗಳ ಸಂಗ್ರಹಣೆಗೆ ದಟ್ಟವಾದ ಕಾಡು ಇತ್ತು. ಮಹಿಳೆಯರು ಗೆಡ್ಡೆಗೆಣಸು ವನಸ್ಪತಿ ಮುಂತಾದ ಗಿಡಮೂಲಿಕೆಗಳನ್ನು ಸಂಗ್ರಹಿಸುತ್ತಿದ್ದರು. ಜೊತೆಗೆ ವ್ಯವಸಾಯಕ್ಕೆ ಅಪಾರವಾದ ಭೂಮಿ ಇತ್ತು. ಹಾಗಾಗಿ ಬುಡಕಟ್ಟು ಜನರು ಹೇಗೋ ಜೀವನ ನಡೆಸುತ್ತಿದ್ದರು. ಆದರೆ ನಾಡಿನ ಜನಸಂಖ್ಯೆ ಹೆಚ್ಚಿದಂತೆಲ್ಲಾ ವ್ಯವಸಾಯ ಮತ್ತಿತರ ಉಪಯೋಗಕ್ಕೆ ಭೂಮಿಯನ್ನು ಹೆಚ್ಚಾಗಿ ಬಳಸಲಾಗುತ್ತದೆ. ಅರಣ್ಯದೊಳಗೂ ಬುಡಕಟ್ಟು ಜನರ ಸಂಖ್ಯೆ ಹೆಚ್ಚುತ್ತಿದೆ. ಕಾಡು ಕಡಿಮೆಯಾಗುತ್ತದೆ. ಹಾಗಾಗಿ ಹೆಚ್ಚುತ್ತಿರುವ ಬುಡಕಟ್ಟು ಜನಸಂಖ್ಯೆಗೆ ಕೃತಕ ಅರಣ್ಯ ಸ್ಥಾಪಿಸಿ ಬೇಟೆಗೆಂದು ಪ್ರಾಣಿ ಪಕ್ಷಿಗಳನ್ನು ಸಾಕಲು ಸಾಧ್ಯವೆ? ಕೂತು ಉಣ್ಣುವವನಿಗೆ ಕುಡಿಕೆ ಹೊನ್ನಿದ್ದರೂ ಸಾಲದು ಎನ್ನುವಂತೆ. ಕೃತಕ ಅರಣ್ಯದಿಂದಲೇ ಹೆಚ್ಚುತ್ತಿರುವ ಬುಡಕಟ್ಟು ಕುಟುಂಬದ ನಿರ್ವಹಣೆ ಅಸಾಧ್ಯ. ಹಾಗಾಗಿ ಬದಲಿ ವ್ಯವಸ್ಥೆ ಅಗತ್ಯವಾಗಿದೆ.

ಇನ್ನು ಬುಡಕಟ್ಟು ಸಮುದಾಯಗಳ ಅನನ್ಯತೆಯನ್ನು ಉಳಿಸಿಕೊಂಡು ಅಭಿವೃದ್ಧಿ ಸಾಧಿಸಬೇಕು ಎಂಬುದು ಬಹಳ ಕ್ಲಿಷ್ಟಕರವಾದದ್ದು. ಇದೊಂದು ರೀತಿ ಉಸಿರಾಟದಲ್ಲಿ ಆಮ್ಲಜನಕ+ಇಂಗಾಲದ ಡೈ ಆಕ್ಸೈಡ್ ಇದ್ದಾಗೆ. ಒಂದನ್ನು ಪಡೆಯಬೇಕಾದರೆ ಮತ್ತೊಂದು ಬಿಡಲೇಬೇಕು. ಬುಡಕಟ್ಟುಗಳ ಅನನ್ಯತೆ ಎಂಬುದು ನಿಂತಂತೆ ಕಂಡರೂ ಚಲನಶೀಲ ವಾಗಿರುತ್ತದೆ. ಅಂದರೆ ನಿಂತಂತೆ ಚಲಿಸುತ್ತಿರುತ್ತದೆ. ಎಷ್ಟೋ ಬುಡಕಟ್ಟುಗಳ ರೂಢಿ ಸಂಪ್ರದಾಯಗಳು ಕಾಲಚಕ್ರದ ಬದಲಾವಣೆ ಸಿಕ್ಕಿ ನಿಧಾನವಾಗಿ ಕರಗಿ ಹೋಗುತ್ತಿವೆ. ಉದಾ:- ಎತ್ತಪ್ಪ ಜುಂಬಪ್ಪ ಮನೆ ದೇವರುಗಳನ್ನು ಹೊಂದಿರುವ ನಮ್ಮೂರಿನ ಕಾಡಗೊಲ್ಲರ ಹೆಂಗಸರು ಹೆರಿಗೆ, ಬಾಣತಿ, ಮುಟ್ಟು ಮೊದಲಾದ ಸಂದರ್ಭಗಳಲ್ಲಿ ವಾರ ತಿಂಗಳುಗಟ್ಟಲೆ ಊರ ಹೊರಗಿರುತ್ತಿದ್ದರು. ಆದರೆ ಇತ್ತೀಚೆಗೆ ಇಂತಹ ರೂಢಿ ಸಂಪ್ರದಾಯಗಳಿಗೆ ಗೊಲ್ಲರ ಹೆಂಗಸರು ಸಡ್ಡು ಹೊಡೆಯುತ್ತಿರುವುದು ಕಂಡು ಬರುತ್ತಿದೆ.

ಬೇಟೆಯನ್ನೇ ಮೂಲ ವೃತ್ತಿಯನ್ನಾಗಿಸಿಕೊಂಡಿದ್ದ ಬೇಡರು ಅನಿವಾರ್ಯತೆಯ ಬದಲಾವಣೆಗೆ ಹೊಂದಿಕೊಂಡು ಇಂದು ಶಿವರಾತ್ರಿ, ಯುಗಾದಿ ಹಬ್ಬಗಳ ದಿನ ಸಾಂಕೇತಿಕವಾಗಿ

ಬೇಟೆಗೆ ಹೋಗುತ್ತಿದ್ದಾರೆ. ನಗರ ಗ್ರಾಮಗಳ ಸಂಪರ್ಕವಿಲ್ಲದ ಯಾವ ಬುಡಕಟ್ಟುಗಳೇ ಇಲ್ಲ ಎಂದು ಹೇಳಬಹುದು. ನಿಧಾನಗತಿಯಲ್ಲಿ ಎಲ್ಲಾ ಬುಡಕಟ್ಟುಗಳು ಬದಲಾವಣೆಯತ್ತ ಮುಖ ಮಾಡುತ್ತಿವೆ. ಅನನ್ಯತೆಗಳು ಅಭಿವೃದ್ಧಿಯೊಂದಿಗೆ ಸಂಧಾನ ಮಾಡಿಕೊಂಡು ಮುಂದುವರಿಯುವುದು ಅನಿವಾರ್ಯವಾಗಿದೆ.

ಬುಡಕಟ್ಟು ಜನರ ತಂಟೆಗೆ ಹೋಗದೆ ಅವರನ್ನು ಪಾರಂಪರಿಕ ವೃತ್ತಿಗೆ ಅನುಗುಣವಾಗಿ ಬಿಡಬೇಕೆಂದುದು ಗಾಂಧೀಜಿಯವರ ಗ್ರಾಮೀಣ ಬದುಕಿನ ಸೂತ್ರಗಳಿಂದ ಪ್ರಭಾವಿತರಾದ ಎಲ್ವಿನ್ ತರಹದ ಅನೇಕ ಸಂಶೋಧಕರ ನಿಲುವು. ಗಾಂಧೀಜಿಯವರ ಗ್ರಾಮ ಬದುಕಿನ ಸೂತ್ರಗಳಾದ ಜಾತಿ ಪಾರಂಪರಿಕ ವೃತ್ತಿಗಳಿಗೆ ಒತ್ತು ನೀಡುವುದಾದರೆ ರೈತನ ಮಗ ರೈತ, ಬಡಗಿ ಮಗ ಬಡಗಿ, ಚಮ್ಮಾರನ ಮಗ ಚಮ್ಮಾರ, ಡಾಕ್ಟರ್ ಮಗ ಡಾಕ್ಟರ್ ಆಗುವ ಹಾಗೆ ಬುಡಕಟ್ಟು ಜನರ ಬೇಟೆ, ಕಾಡಿನ ಉತ್ಪನ್ನಗಳ ಅವಲಂಬಿಸಿ ಕಾಡುತನದಲ್ಲೇ ಮುಂದುರಿಯ ಬೇಕೆ?

ದೇಶದಲ್ಲಿ ಬೌದ್ಧಿಕ ಶಕ್ತಿಗೆ ಕೊಟ್ಟ ಪ್ರಾಮುಖ್ಯತೆ ದೈಹಿಕ ಶ್ರಮಶಕ್ತಿಗೆ ಕೊಡಲಿಲ್ಲ. ದೈಹಿಕ ಶ್ರಮಶಕ್ತಿಯ ಕೆಲಸ ಮಾಡುವ ಜನರನ್ನು ಕೀಳು ಮನೋಭಾವನೆಯಿಂದ ಕಾಣುವ ಪರಂಪರೆ ಮೊದಲಿನಿಂದಲೂ ಬೆಳೆದು ಬಂದಿದೆ. ಜನರು ಯಾವ ಯಾವ ಕೆಲಸ ಮಾಡುತ್ತಾರೆ ಎಂಬುದರ ಆಧಾರದ ಮೇಲೆಯೇ ಸಾಮಾಜಿಕ ಮನ್ನಣೆಗಳು ದೊರೆಯುತ್ತದೆ. ದೈಹಿಕ ಪರಿಶ್ರಮದಿಂದಲೇ ತಮ್ಮ ಬದುಕು ನೂಕುತ್ತಿರುವ ಬುಡಕಟ್ಟು ಮಹಿಳೆಯರು ಇದರಿಂದ ಹೊರತಾಗಿಲ್ಲ. ನಾಗರೀಕ ಜಗತ್ತು ಹೊಸದಾಗಿ ಅವಿಷ್ಕಾರಗೊಂಡ ತಂತ್ರಜ್ಞಾನ ಬಳಕೆ ಅವಕಾಶ ಬುಡಕಟ್ಟು ಮಹಿಳೆಯರಿಗೆ ನೀಡಬಾರದೆ?

ಭಾರತದಲ್ಲಿ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳಿವೆ. ವಿನಾ ಅಭಿವೃದ್ಧಿ ನೀತಿ ಇಲ್ಲ. ನೀತಿ ಬೇರೆ, ಕಾರ್ಯಕ್ರಮ ಬೇರೆ. ನೀತಿ ಅಂದರೆ ಪ್ರಜ್ಞಾಪೂರ್ವವಾಗಿ ರೂಪಿಸಿದ ಉದ್ದೇಶಗಳನ್ನು ಒಳಗೊಂಡ ಒಂದು ಕಾಯಕಲ್ಪ. ಈ ಕಾರ್ಯಕಲ್ಪದ ಉದ್ದೇಶಗಳನ್ನು ಈಡೇರಿಸಲು ಇರುವ ಚಟುವಟಿಕೆಗಳೇ ಕಾರ್ಯಕ್ರಮ. ಬುಡಕಟ್ಟು ಜನರನ್ನು ಗಮನದಲ್ಲಿಟ್ಟು ಕೊಂಡು ಅವರ ಸಾಂಸ್ಕೃತಿಕ ಅನನ್ಯತೆ, ಅವರ ಕಾರ್ಯಕ್ಷೇತ್ರ, ಕಸುಬು ಇವುಗಳ ಹಿನ್ನೆಲೆಯಲ್ಲಿ ಅವರ ಅಭಿವೃದ್ಧಿ ಪರಿಭಾವಿಸಿಕೊಳ್ಳುವ ಕ್ರಮ ಅಭಿವೃದ್ಧಿ ಮೀಮಾಂಸೆಯಲ್ಲಿ ಇಲ್ಲ. ಅಭಿವೃದ್ಧಿಯನ್ನು ಕುರಿತು ನೀತಿ ಇದೆ. ಆದ್ದರಿಂದ ಬುಡಕಟ್ಟು ಅಭಿವೃದ್ಧಿಯೆನ್ನುವುದು ಅಭಿವೃದ್ಧಿಯ ಒಂದು ಭಾಗವೇ ಹೊರತು ನೀತಿಯಲ್ಲ. ಇಡೀ ರಾಷ್ಟ್ರದ ಅಭಿವೃದ್ಧಿಯಲ್ಲಿ ಬುಡಕಟ್ಟುಗಳು ಅಂತರ್ಗತವಾಗಿರುವುದರಿಂದ ಅವುಗಳ ಪ್ರತ್ಯೇಕ ಅಸ್ತಿತ್ವವನ್ನು ಒಪ್ಪಿ ಕೊಳ್ಳುವುದು ಸಾಧ್ಯವಿಲ್ಲ (ಬಿ.ಆರ್. ಚಂದ್ರಶೇಖರ್).

ಜಾತಿ ಮತ್ತು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಅಭಿವೃದ್ಧಿಯ ಲಾಭಗಳು ಮೊದಲು ಮೇಲ್ಜಾತಿಯ/ಮೇಲ್ವರ್ಗದ ಜನರು ಕಬಳಿಸಿ ಬಿಡುತ್ತಾರೆ. ಕೊನೆಗೆ ಏನಾದರೂ ಉಳಿದರೆ, ಅದು ಸಮಾಜದ ಅತ್ಯಂತ ಕೆಳಗಿನವರಿಗೆ ಸಿಗುತ್ತದೆ. ಇದು ಇಂದು ನಿನ್ನೆಯ ಪ್ರಕ್ರಿಯೆಯಲ್ಲ ಸಮಾಜದುದ್ದಕ್ಕೂ ಸಾಗಿಬರುತ್ತಿರುವುದಾಗಿದೆ.

ಭಾರತೀಯ ಸಂವಿಧಾನದಲ್ಲಿ ಅನುಚ್ಛೇದ ೧೫ರಂತೆ ಜಾತಿ, ಧರ್ಮ ಜನಾಂಗ, ಲಿಂಗ ಅಥವಾ ಹುಟ್ಟಿದ ಸ್ಥಳ ಆಧಾರಿತ ತಾರತಮ್ಯ ನಿಷೇಧಿಸಲಾಗಿದೆ. ಸರಕಾರ ಎಲ್ಲಾ ಪ್ರಜೆಗಳಿಗೂ ಸಮಾನ ಸೇವೆಯನ್ನು ನೀಡಬೇಕು (ಅನುಚ್ಛೇದ ೪೯) ಎಂದಿದೆ. ಹಾಗಾಗಿ ಅಭಿವೃದ್ಧಿಯ ಲಾಭದಿಂದ ವಂಚಿತರನ್ನು ಅವರಷ್ಟಕ್ಕೆ ಬಿಡದೆ ಅವರಿಗೆ ಪ್ರತ್ಯೇಕ ಯೋಜನೆಗಳನ್ನು ಹಾಕಿಕೊಳ್ಳುವುದು ಅನಿವಾರ್ಯ. ಅವಕಾಶ ವಂಚಿತರ ಅಭಿವೃದ್ಧಿಗಾಗಿ ಪ್ರತ್ಯೇಕ ಯೋಜನೆಗಳನ್ನು ರೂಪಿಸುವ ಅವಕಾಶ ಇರುವುದರಿಂದ ಕಾಡಿನಿಂದ ಹೊರತಂದು ಬಿಡುತ್ತಿರುವ ಬುಡಕಟ್ಟು ಜನರಿಗೆ ಪ್ರತ್ಯೇಕ ನೀತಿ ರೂಪಿಸುವುದು ಅಗತ್ಯವಾಗಿದೆ.

ಬುಡಕಟ್ಟು ಜನರ ಅಭಿವೃದ್ಧಿ ಕುರಿತು ನೆಹರು ಒಬ್ಬ ಸಮಾಜಶಾಸ್ತ್ರಜ್ಞರಂತೆ ಚಿಂತಿಸಿದ್ದಾರೆ. ಆದಿವಾಸಿಗಳನ್ನು ಅಭಿವೃದ್ಧಿಪಡಿಸಲೆಂದೇ ಒತ್ತಾಯದಿಂದ ಏನನ್ನು ಹೇರಬಾರದು. ಹಾಗೆಂದು ಸ್ಪೆಷಿಮೆನ್‌ಗಳ ತರಹ ಅವರಷ್ಟಕ್ಕೆ ಬಿಡಬಾರದು ಅವರ ಅಭಿವೃದ್ಧಿಗೆ ಒಂದು ಸುವರ್ಣ ಸೂತ್ರ ಕಂಡುಕೊಳ್ಳಬೇಕು. ಈ ದೇಶದ ಭವ್ಯತೆಯನ್ನು ಇನ್ನಷ್ಟು ಶ್ರೀಮಂತಗೊಳಿಸಲು ಆದಿವಾಸಿಗಳು ಈ ದೇಶದ ಸೌರ್ವಭೌಮತ್ವವನ್ನು ಒಪ್ಪಿಕೊಳ್ಳಬೇಕೆಂಬುದು ನೆಹರು ಅವರ ಆಸೆಯಾಗಿತ್ತು. ಸರಕಾರವು ನೆಹರು ಅವರ ಅಭಿಲಾಷೆಯಂತೆ ಬುಡಕಟ್ಟುಗಳ ಪಾರಂಪರಿಕ ಹಕ್ಕುಗಳನ್ನು ಮನ್ನಿಸಿ ಅದಕ್ಕೆ ಅನುಗುಣವಾದ ಯೋಜನೆಗಳ ಜಾರಿಗೆ ತಂದಿದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಬುಡಕಟ್ಟು ಜನರ ಅಭಿವೃದ್ಧಿಗಾಗಿ ಪ್ರತ್ಯೇಕ ಯೋಜನೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಾ ಬಂದಿದೆ.

ಕರ್ನಾಟಕ ರಾಜ್ಯವು ಪರಿಶಿಷ್ಟ ಪಂಗಡದವರ ಸರ್ವತೋಮುಖ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯ ಅಡಿ ಸುಮಾರು ೨೮ ಅಭಿವೃದ್ಧಿ ಇಲಾಖೆ ನಿಗಮ ಮಂಡಳಿಗಳನ್ನು ತೆರೆಯಲಾಗಿದ್ದು ರಾಜ್ಯದ ಆಯವ್ಯಯದಲ್ಲಿ ಹೆಚ್ಚು ಪರಿಶಿಷ್ಟ ಪಂಗಡಗಳಿಗೆ ಮೀಸಲಿಡಲಾಗಿದೆ. ಜಿಲ್ಲಾ ಪಂಚಾಯತ್ ತಾಲ್ಲೂಕ್ ಪಂಚಾಯ್ತಿಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಇದರ ಮೇಲೆ ಉಸ್ತುವಾರಿ ನೋಡಿಕೊಳ್ಳಲು ೧೯೯೯ರಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ತೆರೆಯಲಾಗಿದೆ. ರಾಜ್ಯದಲ್ಲಿ ಪರಿಶಿಷ್ಟ ಪಂಗಡದವರನ್ನು ಅಭಿವೃದ್ಧಿಪಡಿಸುವಲ್ಲಿ ಇರುವ ಯೋಜನೆಗಳಲ್ಲಿ ಗಿರಿಜನ ಉಪಯೋಜನೆ ಮತ್ತು ಲ್ಯಾಂಪ್ಸ್ ಅತಿಮುಖ್ಯ ಕಾರ್ಯಕ್ರಮಗಳಾಗಿವೆ.

ಗಿರಿಜನ ಉಪಯೋಜನೆಯನ್ನು ೧೯೭೬-೭೭ರಲ್ಲಿ ಪ್ರಾರಂಭಿಸಲಾಯಿತು. ಪ್ರಾರಂಭದಲ್ಲಿ ಈ ಉಪ ಯೋಜನೆಯನ್ನು ಮೈಸೂರು ಚಾಮರಾಜನಗರ, ಚಿಕ್ಕಮಗಳೂರು, ಕೊಡಗು, ದಕ್ಷಿಣ ಕನ್ನಡ ಉಡುಪಿ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಯಿತು. ನಂತರ ೧೯೯೨ರಲ್ಲಿ ಉಪಯೋಜನೆಯ ಕಾರ್ಯಕ್ರಮವನ್ನು ರಾಜ್ಯದ ಎಲ್ಲಾ ಜಿಲ್ಲೆಗಳು ವಿಸ್ತರಿಸಲಾಯಿತು. ಕೇಂದ್ರ ಸರ್ಕಾರವು ಯೋಜನೆಯ ಅನುಷ್ಠಾನಕ್ಕೆ ರಾಜ್ಯ ಸರಕಾರಗಳಿಗೆ ಅನುದಾನ ಬಿಡುಗಡೆ ಮಾಡುತ್ತಿದೆ. ಈ ಅನುದಾನದಲ್ಲಿ ಬುಡಕಟ್ಟು ಜನರ ಅಗತ್ಯಗಳ ಅಭಿವೃದ್ಧಿಗೆ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಈ ಉದ್ದೇಶಕ್ಕಾಗಿ ೨೦೦೨-೦೩ರಲ್ಲಿ ೨೮೦ ಕೋಟಿ ರೂ.

ಬಿಡುಗಡೆ ಮಾಡಲಾಗಿದೆ. ಈ ಯೋಜನೆಯ ಧ್ಯೇಯೋದ್ದೇಶಗಳು. ಪರಿಶಿಷ್ಟ ವರ್ಗದ ಬಡತನರೇಖೆ ಕೆಳಗಿರುವ ಕುಟುಂಬಗಳ ಜೀವನವನ್ನು ಉತ್ತಮಪಡಿಸುವುದು, ಕಲೆ, ಸಂಸ್ಕೃತಿ, ನೀತಿ ನಿಯಮ ಜಾರಿಗೊಳಿಸುವುದು, ಹಾಡಿಗಳಿಗೆ ಕನಿಷ್ಟ ಮೂಲಭೂತ ಸೌಲಭ್ಯಗಳು ಹಾಗೂ ಆರ್ಥಿಕ ಮತ್ತು ಶೈಕ್ಷಣಿಕ ಸೌಲಭ್ಯ ಒದಗಿಸುವುದಾಗಿದೆ.

ರಾಜ್ಯದಲ್ಲಿ ೩೯ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯಗಳು, ೩೮ ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು, ಕೃಷಿ ತೋಟಗಾರಿಕೆ ಪಶುಸಂಗೋಪನೆ, ಸಣ್ಣ ಕೈಗಾರಿಕೆ, ರೇಷ್ಮೆ ಕೃಷಿ, ಗ್ರಾಮೀಣಾಭಿವೃದ್ಧಿ ಮುಂತಾದ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ. ಇಲ್ಲಿ ಮಹಿಳೆಯರಿಗೆ ಪ್ರತ್ಯೇಕವಾದ ಯಾವುದೇ ಕಾರ್ಯಕ್ರಮ ರೂಪಿಸ ಲಾಗಲಿಲ್ಲ. ಎಲ್ಲಾ ಕಾರ್ಯಕ್ರಮಗಳಲ್ಲಿ ಮಹಿಳೆಯರ ಕಾರ್ಯಕ್ರಮಗಳು ಅಂತರ್ಗತ ಗೊಂಡಪ್ಪವು. ಇತ್ತೀಚೆಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮದಡಿ ಸ್ತ್ರೀಶಕ್ತಿ ಯೋಜನೆ, ಬಾಲಕಿಯರ ಹಾಜರಾತಿ ಹೆಚ್ಚಿಸಲು ಶಾಲಾ ವಿದ್ಯಾರ್ಥಿವೇತನ, ಮಕ್ಕಳಿಗೆ ಪೌಷ್ಟಿಕ ಆಹಾರ ನೀಡಿಕೆ, ಮಹಿಳೆಯರ ಕೌಶಲ್ಯ ಅಭಿವೃದ್ಧಿಗೆ ವೃತ್ತಿ ತರಬೇತಿ, ಉದ್ಯೋಗ ಯೋಜನೆ ಮುಂತಾದವುಗಳಿಗೆ ಆರ್ಥಿಕ ಸಹಾಯಧನ ನೀಡಲಾಗುವುದು.

ಸಮಗ್ರ ಗಿರಿಜನ ಅಭಿವೃದ್ಧಿಗಾಗಿ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ, ಉಡುಪಿ, ಚಿಕ್ಕಮಂಗಳೂರು ಉತ್ತರ ಕನ್ನಡ ಜಿಲ್ಲೆಗಳಲ್ಲಿ ದೊಡ್ಡ ಪ್ರಮಾಣದ ೨೧ ವಿವಿದೋದ್ದೇಶ ಸಹಕಾರ ಸಂಸ್ಥೆಗಳು (ಲ್ಯಾಂಪ್ಸ್) ಸ್ಥಾಪಿಸಲಾಯಿತು. ಈ ಸಂಘಗಳಲ್ಲಿ ೬೨೩೩೬ ಜನರು ಸದಸ್ಯರಾಗಿದ್ದು ಸವಲತ್ತುಗಳನ್ನು ಒದಗಿಸಲಾಗಿದೆ. ಸದಸ್ಯರು ಸಂಗ್ರಹಿಸುವ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಮಾಡಿದ ಲಾಭಾಂಶವನ್ನು ಸದಸ್ಯರಿಗೆ ವಿತರಿಸ ಲಾಗುವುದು.

**ಲ್ಯಾಂಪ್ಸ್**

ಸಮಗ್ರ ಗಿರಿಜನ ಅಭಿವೃದ್ಧಿಗಾಗಿ ಸಹಕಾರಿ ತತ್ವದ ಮೇಲೆ ವಿವಿದೋದ್ದೇಶ ೨೧ ಸಹಕಾರಿ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಮಹಿಳೆಯರನ್ನು ಒಳಗೊಂಡಂತೆ ೬೨೩೩೬ ಜನ ಸದಸ್ಯರನ್ನು ಒಳಗೊಂಡಿದ್ದು ಅವರಿಗೆ ವಿವಿಧ ಸವಲತ್ತುಗಳನ್ನು ಒದಗಿಸಲಾಗುತ್ತಿದೆ. ಸದಸ್ಯರು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳನ್ನು ಸ್ಪರ್ಧಾತ್ಮಕ ಬೆಲೆಗೆ ಮಾರಾಟ ಮಾಡಿ ಲಾಂಭಾಂಶವನ್ನು ಸದಸ್ಯರಿಗೆ ವಿತರಿಸಲಾಗುತ್ತದೆ. ಅವಶ್ಯವಿರುವ ಸದಸ್ಯರಿಗೆ ಸಂಘಗಳು ಸಾಲ ನೀಡುತ್ತದೆ. ಚಾಮರಾಜನಗರ ಜಿಲ್ಲೆಯ ಶೇ. ೫೦ರಷ್ಟು ಸೋಲಿಗರ ವರಮಾನವು ಸಣ್ಣ ಪ್ರಮಾಣದ ಅರಣ್ಯ ಉತ್ಪನ್ನಗಳಿಂದಲೇ ಬರುತ್ತದೆ. ಬುಡಕಟ್ಟು ಜನರು ಆಯ್ದು ತಂದ ಅರಣ್ಯದ ವಸ್ತುಗಳಿಗೆ ಮಾರುಕಟ್ಟೆ ವ್ಯವಸ್ಥೆಯನ್ನು ಒದಗಿಸಲು ಹಾಗೂ ಆ ವಸ್ತುಗಳಿಗೆ ಸರಿಯಾದ ಬೆಲೆಯನ್ನು ದೃಢಪಡಿಸುವಲ್ಲಿ ಲ್ಯಾಂಪ್ ಸಹಕಾರಿ ಸಂಘಗಳು ಮಿಶ್ರ ಫಲಿತಾಂಶ ಹೊಂದಿದೆ. ವಸ್ತುಗಳಿಗೆ ಬೆಲೆ ನಿರ್ಧರಿಸಲು ಮಾಲೀಕರಿಗೆ ಅವಕಾಶ ನೀಡುವುದಿಲ್ಲ. ಬುಡಕಟ್ಟು ಜನರಿಂದ ಪಡೆಯುವ ವಸ್ತುಗಳಿಗೆ ಕಡಿಮೆ ಬೆಲೆ ನಿರ್ಧರಿಸಲಾಗುತ್ತದೆ.

ಮಹಿಳೆಯರು ವೈಯಕ್ತಿಕ ಅಪಾಯಗಳನ್ನು ಲೆಕ್ಕಿಸದೆ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ತಂದರೂ ಕಡಿಮೆ ಬೆಲೆಯಿಂದಾಗಿ ಅವರ ಆರ್ಥಿಕ ಸ್ಥಿತಿ ಸುಧಾರಿಸುವಲ್ಲಿ ಈ ಸಂಘಗಳು ಅಸಮರ್ಥನೀಯವಾಗಿವೆ.

## ಮಹಿಳಾ ಅಭಿವೃದ್ಧಿ ಯೋಜನೆಗಳು

ಜಾಗತಿಕ ಮಟ್ಟದಲ್ಲಿ ವಿಶ್ವಸಂಸ್ಥೆ ಪ್ರಾರಂಭಿಸಿದ ಮಹಿಳಾ ಅಭಿವೃದ್ಧಿ ಪ್ರಕ್ರಿಯೆ ನಂತರ ರಾಷ್ಟ್ರ ಹಾಗೂ ರಾಜ್ಯಗಳಿಗೆ ಹರಿದು ಬಂದಿರುವುದನ್ನು ಕಾಣಬಹುದಾಗಿದೆ. ಮಹಿಳೆಯರ ಪರ ಮೊದಲು ಧ್ವನಿ ಎತ್ತಿದ್ದ ಈ ಖ್ಯಾತಿ ವಿಶ್ವಸಂಸ್ಥೆಗೆ ಸಲ್ಲಬೇಕು. ವಿಶ್ವಸಂಸ್ಥೆಯು ಮಹಿಳೆಯರ ಅಭಿವೃದ್ಧಿಗಾಗಿ ಅನೇಕ ಯೋಜನೆ, ಕಾರ್ಯ ನೀತಿಗಳನ್ನು ರೂಪಿಸುತ್ತಿದೆ.

೧೯೪೮ ಮಾನವ ಹಕ್ಕುಗಳ ಘೋಷಣೆ, ೧೯೭೫ರ ಅಂತಾರಾಷ್ಟ್ರೀಯ ಮಹಿಳಾ ವರ್ಷವೆಂದು, ೧೯೭೬-೮೫ ಮಹಿಳಾ ದಶಕ ವರ್ಷವೆಂದು ಘೋಷಿಸಿತು. ಮಹಿಳಾ ಅಭಿವೃದ್ಧಿಗೆ ಧನ ಸಹಾಯ ಮಾಡಲು ಯುನೈಟೈಡ್‌ನೇಷನ್ ಡೆವಲಪ್‌ಮೆಂಟ್ ಎಂಬ ಘಟಕವನ್ನು ಸ್ಥಾಪಿಸಿ ಮಹಿಳಾ ಅಭಿವೃದ್ಧಿಗೆ ವಿಶ್ವಮಟ್ಟದಲ್ಲಿ ಶ್ರಮಿಸುತ್ತಿದೆ. ಅಲ್ಲದೆ ತನ್ನ ಸದಸ್ಯ ರಾಷ್ಟ್ರಗಳು ಮಹಿಳೆಯರ ಸ್ಥಿತಿಗತಿ ತಿಳಿಯಲು ಸರಕಾರಗಳ ಮೂಲಕ ಕ್ಷೇತ್ರಾಧ್ಯಯನ ನಡೆಸಿ ವರದಿಗಳನ್ನು ತಯಾರಿಸುವಂತೆ ತಿಳಿಸಿದೆ. ಭಾರತವು ಇಂತಹ ಕ್ಷೇತ್ರಾಧ್ಯಯನ ನಡೆಸಿ, ೧೯೭೪ರಲ್ಲಿ ಟುವರ್ಡ್ಸ್ ಈಕ್ವಾಲಿಟಿ ಎಂಬ ವರದಿಯನ್ನು ಸಲ್ಲಿಸಲಾಯಿತು. ಸದಸ್ಯ ರಾಷ್ಟ್ರವಾದ ಭಾರತವು ವಿಶ್ವಸಂಸ್ಥೆಯ ಎಲ್ಲಾ ಒಡಂಬಡಿಕೆಗಳನ್ನು ಅಳವಡಿಸಿಕೊಂಡು ಅಭಿವೃದ್ಧಿ ಯೋಜನೆಗಳನ್ನು ರೂಪಿಸುತ್ತಿದೆ. ಸ್ವಾತಂತ್ರನಂತರದ ದಿನಗಳಲ್ಲಿ ರೂಪಿಸಿದ ಸಮುದಾಯ ಅಭಿವೃದ್ಧಿ ಭೂಸುಧಾರಣೆ ಮುಂತಾದ ಯೋಜನೆಗಳು ಮಹಿಳೆಯರು ಸೇರಿದಂತೆ ಎಲ್ಲಾ ವರ್ಗದ ಅಭಿವೃದ್ಧಿ ಸಾಧಿಸಬಹುದೆಂದು ನಂಬಲಾಗಿತ್ತು. ಆದರೆ ಅಭಿವೃದ್ಧಿಯ ಲಾಭ ಎಲ್ಲಾ ವರ್ಗದವರೂ ಸಮಾನವಾಗಿ ತಲುಪಲಿಲ್ಲ. ಮಹಿಳೆಯರು ಯೋಜನೆಯ ಫಲದಿಂದ ದೂರ ಉಳಿದರು.

ಮಹಿಳಾ ಅಭಿವೃದ್ಧಿ ಯೋಜನೆಗಳು ಸಾಮಾನ್ಯ ಯೋಜನೆಗಳಲ್ಲಿ ಅಂತರ್ಗವಾಗಿದ್ದರಿಂದ ಯೋಜನೆಯ ಫಲ ಮಹಿಳೆಯರಿಗೆ ದೊರಕಲಿಲ್ಲ. ಹಾಗಾಗಿ ಅವರನ್ನು ನಿರುದ್ಯೋಗ, ಅನಕ್ಷರತೆ ಹಾಗೂ ಅನಾರೋಗ್ಯದಿಂದ ಮುಕ್ತಗೊಳಿಸಲು ಮಹಿಳೆಯರಿಗಾಗಿಯೇ ಪ್ರತ್ಯೇಕ ವಾದ ಯೋಜನೆ ರೂಪಿಸುವ ಸಂವಿಧಾನಾತ್ಮಕ ಹಕ್ಕು ಮತ್ತು ವಿಶೇಷ ಅನುಕೂಲಗಳನ್ನು ನೀಡಿದೆ. ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಸ್ತ್ರೀಪುರುಷರಿಗೆ ಸಮಾನ ಅವಕಾಶ ಕಲ್ಪಿಸಿಕೊಟ್ಟಿದೆ, ಸಮಾನ ಕೆಲಸಕ್ಕೆ ಸಮಾನವೇತನ, ಸಾರ್ವಜನಿಕ ನೇಮಕಾತಿಯಲ್ಲಿ ಸಮಾನ ಅವಕಾಶ ನೀಡಲಾಗಿದೆ. ಮಹಿಳೆಯರನ್ನು ಸಾಮಾಜಿಕ ಪಿಡುಗಿನಿಂದ ಮುಕ್ತಗೊಳಿಸಲು ವರದಕ್ಷಣೆ ೧೯೬೧ ಕಾಯ್ದೆ ಹಿಂದು ವಿವಾಹ ಕಾಯ್ದೆ ೧೯೫೫, ಅನೈತಿಕ ವ್ಯವಹಾರ ನಿಗ್ರಹಣ ಕಾಯ್ದೆ (೧೯೫೬) ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳೆಯರಿಗೆ ಹೆರಿಗೆ ಸೌಲಭ್ಯ ಕಾಯಿದೆ-೧೯೬೧ ಮುಂತಾದ ಕಾಯ್ದೆಗಳನ್ನು

ಜಾರಿಗೊಳಿಸಲಾಗಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಅಭಿವೃದ್ಧಿಗೆ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ೧೯೫೩ರಲ್ಲಿ ಕೇಂದ್ರ ಸಮಾಜಕಲ್ಯಾಣ ಮಂಡಳಿ ಸ್ಥಾಪಿಸಲಾಯಿತು. ನಿರ್ಗತಿಕ ಅಂಗವಿಕಲ ಮಹಿಳೆಯರಿಗಾಗಿ ಆದಾಯ ಉತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳಲು ಸ್ವಯಂ ಸೇವಾ ಸಂಸ್ಥೆಗಳಿಗೆ ಹಣ ಸಹಾಯ ಮಾಡ ಲಾಗುತ್ತಿದೆ.

ಮೂರು ನಾಲ್ಕು ಯೋಜನೆಗಳಲ್ಲಿ ಗ್ರಾಮಮಟ್ಟದಲ್ಲಿ ಮಹಿಳಾ ಅಭಿವೃದ್ಧಿ ಕೇಂದ್ರಗಳನ್ನು ತೆರೆಯಲಾಯಿತು. ಉತ್ತಮ ತಾಯಿ ಹಾಗೂ ಗೃಹಿಣಿಯಾಗಿ ತಮ್ಮ ಪಾತ್ರ ನಿರ್ವಹಿಸುವಂತೆ ಮಹಿಳೆಯರಿಗೆ ತರಬೇತಿ ಕೊಡಲಾಯಿತು. ಮಕ್ಕಳಿಗೆ ಪೌಷ್ಟಿಕ ಆಹಾರ ನೀಡುವ ಯೋಜನೆ ಯನ್ನು ಪ್ರಾರಂಭಿಸಲಾಯಿತು. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ಇದುವರೆಗಿದ್ದ ಕಲ್ಯಾಣ ಕಾರ್ಯಕ್ರಮವನ್ನು ಅಭಿವೃದ್ಧಿ ಯೋಜನೆಯಾಗಿ ಪರಿವರ್ತಿಸಲಾಯಿತು. ಈ ಯೋಜನೆಯಲ್ಲಿ ಮಹಿಳೆ ಮತ್ತು ಮಕ್ಕಳ ಆರೋಗ್ಯಕ್ಕೆ ಆದ್ಯತೆ ನೀಡಲಾಯಿತು. ಗ್ರಾಮಮಟ್ಟದ ಮಕ್ಕಳ ಮತ್ತು ಮಹಿಳೆಯರ ಆರೋಗ್ಯ ಉತ್ತಮಪಡಿಸಲು ಬಾಲ ವಿಕಾಸ ಯೋಜನೆ ರೂಪಿಸಲಾಯಿತು.

ಆರನೇ ಪಂಚವಾರ್ಷಿಕ ಯೋಜನೆ ಮಹಿಳಾ ಇತಿಹಾಸದಲ್ಲಿ ಒಂದು ಮೈಲುಗಲ್ಲು ಮಹಿಳಾ ಅಭಿವೃದ್ಧಿ ಎಂಬ ಪ್ರತ್ಯೇಕ ಅಧ್ಯಯನವನ್ನು ತೆರೆಯಲಾಯಿತು. ಮಹಿಳೆಯರ ಶಿಕ್ಷಣ ಉದ್ಯೋಗಕ್ಕೆ ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಏಳನೇ ಯೋಜನೆಯಲ್ಲಿ ಮಹಿಳೆಯರನ್ನು ಮುಖ್ಯವಾಹಿನಿಗೆ ತರುವಲ್ಲಿ ಮಹಿಳೆಯರಿಗೆ ಯೋಜನೆ ಲಾಭ ದೊರಕುವಂತಾಗಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಭಾಗ ತೆರೆಯಲಾಯಿತು. ಎಂಟನೇ ಯೋಜನೆಯಲ್ಲಿ ಮಹಿಳೆಯರನ್ನು ಪಾಲುಗಾರರನ್ನಾಗಿ ನೋಡುವ ಪರಿಪಾಟ ಬೆಳೆದು ಅಭಿವೃದ್ಧಿಯಿಂದ ಸಶಕ್ತೀಕರಣ ಪರ್ಯಟಿಸಲಾಯಿತು. ಮಹಿಳಾ ಅಭಿವೃದ್ಧಿ ಯೋಜನೆ, ಇಂದಿರಾ ಮಹಿಳಾ ಯೋಜನೆ, ರಾಷ್ಟ್ರೀಯ ಮಹಿಳಾ ಕೋಶ ತೆರೆಯಲಾಯಿತು. ಒಂಬತ್ತನೇ ಯೋಜನೆಯಲ್ಲಿ ಮಹಿಳಾ ಸಶಕ್ತತೆಗೆ ಪ್ರಥಮ ಆದ್ಯತೆ ನೀಡಲಾಗಿತ್ತು. ಮಹಿಳೆಯರು ಮನೆಯ ಒಳಗೆ ಹೊರಗೆ ಪುರುಷರಿಗೆ ಸಮಾನವಾದ ಸ್ವತಂತ್ರವನ್ನು ಅನುಭವಿಸುವ ವಾತಾವರಣ ನಿರ್ಮಿಸಲಾಯಿತು. ಹತ್ತನೇ ಯೋಜನೆಯಲ್ಲಿ ಸ್ತ್ರೀಪುರುಷರ ನಡುವಿನ ಅಸಮಾನತೆ ಕಡಿಮೆ ಮಾಡಲು, ಮಕ್ಕಳ ಮತ್ತು ತಾಯಿ ಮರಣ ಪ್ರಮಾಣ ಕಡಿಮೆಗೊಳಿಸುವುದು ಮುಂತಾದ ಗುರಿಯನ್ನು ಹೊಂದಿದವು.

ಮಹಿಳೆಯರಿಗಾಗಿಯೇ ರೂಪಿತವಾದ ಯೋಜನೆಗಳು ಸಹ ಸಾಮಾನ್ಯ ಮಹಿಳೆಯರು ಹಾಗೂ ಗ್ರಾಮೀಣ ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ರೂಪಿಸಿದ ಯೋಜನೆ ಗಳಾದವು. ಬುಡಕಟ್ಟು ಮಹಿಳೆಯರಿಗಾಗಿ ಯಾವುದೇ ಪ್ರತ್ಯೇಕ ಯೋಜನೆ ರೂಪಿಸಲಿಲ್ಲ. ಮಹಿಳಾ ಯೋಜನೆಗಳಲ್ಲಿ ಬುಡಕಟ್ಟು ಮಹಿಳಾ ಯೋಜನೆಗಳು ಅಂತರ್ಗಗೊಂಡಿದ್ದವು. ಬುಡಕಟ್ಟು ಅಭಿವೃದ್ಧಿಗಾಗಿ ಕೇಂದ್ರ-ರಾಜ್ಯ ಸರಕಾರಗಳು ರೂಪಿಸಿರುವ ಯೋಜನೆಗಳಲ್ಲಿ

ಬುಡಕಟ್ಟು ಮಹಿಳೆಯರಿಗೆ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಮಹಿಳಾ ಮಕ್ಕಳ ಅಭಿವೃದ್ಧಿ, ನರ್ಸರಿ ಮತ್ತು ಮಹಿಳಾ ಕೇಂದ್ರಗಳು, ನವಚೇತ ವೃತ್ತಿ ತರಬೇತಿ ಕಾರ್ಯಕ್ರಮ, ಗಿರಿಜನ ಉಪಯೋಜನೆ, ಕೃಷಿ, ಪಶುಸಂಗೋಪನಾ, ಗ್ರಾಮೀಣ ಸಣ್ಣ ಕೈಗಾರಿಕೆಗಳು, ಲ್ಯಾಂಪ್ ಸಹಕಾರ ಸಂಘಗಳು ಮುಂತಾದವುಗಳಲ್ಲಿ ಶೇ. ೩೦ರಷ್ಟು ಅವಕಾಶಗಳು ಮಹಿಳೆಯರಿಗೆ ನೀಡಲಾಗುತ್ತದೆ. ಜೊತೆಗೆ ಸ್ವಯಂ ಸೇವಾ ಸಂಸ್ಥೆಗಳು ಬುಡಕಟ್ಟು ಮಹಿಳಾ ಅಭಿವೃದ್ಧಿಗೆ ಶ್ರಮಿಸುತ್ತಿವೆ.

ಬುಡಕಟ್ಟು ಮಹಿಳೆಯರ ಅಭಿವೃದ್ಧಿಗಿರುವ ಕಾರ್ಯಕ್ರಮಗಳು ಹೆಚ್ಚು ಪರಿಣಾಮಕಾರಿಯಾಗಿಲ್ಲ. ಈಗಲೂ ಅನೇಕ ಬುಡಕಟ್ಟು ಕುಟುಂಬಗಳು ಕಡುಬಡವರಾಗಿದ್ದು ತಮ್ಮ ಶಿಕ್ಷಣ, ಆರೋಗ್ಯ ಆರ್ಥಿಕ ಸ್ಥಿತಿ ಸುಧಾರಿಸುವುದಕ್ಕೆ ಬೇಕಾದ ಸಂಪನ್ಮೂಲ ಪಡೆಯುವಲ್ಲಿ ವಂಚಿತರಾಗಿದ್ದಾರೆ. ಪರಿಶಿಷ್ಟ ಪಂಗಡದ ಮಹಿಳೆಯರ ಸ್ಥಾನಮಾನವು ರಾಜ್ಯದ ಉಳಿದ ಮಹಿಳೆಯರ ಸ್ಥಾನಕ್ಕೆ ಹೋಲಿಸಿದಾಗ ಒಂದು ದಶಕಕ್ಕಿಂತ ಹಿಂದೆ ಉಳಿದಿದ್ದಾರೆ. ಮಾನವ ಅಭಿವೃದ್ಧಿ ವರದಿ ೨೦೦೧ ಅತ್ಯಂತ ಹಾಗೂ ಅತ್ಯಧಿಕ ಪ್ರಮಾಣದಲ್ಲಿ ಕಡೆಗಣಿಸಲ್ಪಟ್ಟವೆಂದು ಹೇಳಬಹುದಾಗಿದೆ.

**ಕರ್ನಾಟಕ ಬುಡಕಟ್ಟು ಮಹಿಳೆಯರ ಸ್ಥಾನಮಾನ**

ಮಹಿಳೆಯರ ಸ್ಥಾನಮಾನ ನಿರ್ಧರಿಸುವಲ್ಲಿ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳು ಮಹತ್ವದ ಪಾತ್ರವಹಿಸುತ್ತವೆ. ಸಾಮಾಜಿಕವಾಗಿ ಮಹಿಳೆಯರ ಸ್ಥಾನಮಾನ ಪುರುಷರ ಸ್ಥಾನಮಾನಗಳಿಗಿಂತ ಕೆಳದರ್ಜೆಯಾಗಿರುವುದು ಸರ್ವವಿದಿತ. ದೇಶದ ಎಲ್ಲಾ ಸಂಸ್ಕೃತಿಗಳಲ್ಲೂ ಪುರುಷರಿಗೆ ಮೊದಲ ಸ್ಥಾನವಿದ್ದು ಮಹಿಳೆಯರಿಗೆ ನಂತರದ ಸ್ಥಾನವಿದೆ. ಆದರೆ ಮಹಿಳಾ ಲೋಕದಲ್ಲಿನ ಮಹಿಳೆಯರ ಸ್ಥಾನಮಾನವೂ ಏಕರೂಪವಾದುದಲ್ಲ. ಶೋಷಣೆಯ ನೆಲೆಯಲ್ಲಿ ಎಲ್ಲಾ ಮಹಿಳೆಯರನ್ನು ದಲಿತರೆಂದು ಪರಿಭಾವಿಸಲಾಗಿದೆ. ನಮ್ಮದು ಶ್ರೇಣೀಕೃತ ಜಾತಿ ವ್ಯವಸ್ಥೆ. ಮಹಿಳೆಯರ ಸ್ಥಾನಮಾನಗಳು ಆಯಾ ಜಾತಿ ಸ್ತರಗಳಿಗೆ ಅನುಸಾರ ಹಂಚಿಹೋಗಿವೆ. ಜಾತಿಗೆ ಸಂಬಂಧಿಸಿದಂತೆ ಪ್ರತಿ ಮಹಿಳೆಯ ಆಯಾ ಜಾತಿ ಪುರುಷರು ಮತ್ತು ಮಹಿಳೆಯರಿಂದ ಶೋಷಣೆ ಇಲ್ಲ. ಕೆಳ ಜಾತಿ ಮಹಿಳೆಯರಿಗೆ ಮೇಲ್ಜಾತಿ ಪುರುಷರು ಮಹಿಳೆಯ ಹಾಗೂ ಸ್ವಜಾತಿ ಪುರುಷರಿಂದ ಶೋಷಣೆ ಉಂಟು. ಹಾಗಾಗಿ ಸಾಮಾಜಿಕ ಸ್ಥಾನಮಾನದಲ್ಲಿ ಪರಿಶಿಷ್ಟ ಜಾತಿ/ಬುಡಕಟ್ಟು ಮಹಿಳೆಯರು ಕಟ್ಟಕಡೆಯ ಸ್ಥಾನದಲ್ಲಿ ನಿಲ್ಲುತ್ತಾರೆ.

ಬುಡಕಟ್ಟು ಮಹಿಳೆಯರ ಜೀವನ ನಾಡಿನ ಮಹಿಳೆಯರ ಬದುಕಿಗಿಂತ ಭಿನ್ನವಾಗಿದ್ದು ಬಹುತೇಕ ಇವರದೆಲ್ಲಾ ಕಾಡು, ಕಾಡಂಚಿನ ವಾಸ. ಇವರ ವಾಸಿಸುವ ಸ್ಥಳಗಳನ್ನು ಪೋಡು ಕೊಪ್ಪ, ಹಟ್ಟಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಬುಡಕಟ್ಟು ಮಹಿಳೆಯರು ಸಹ ಹಿಂದು, ಮುಸ್ಲಿಂ, ಕ್ರಿಶ್ಚಿಯನ್ ಧರ್ಮಗಳಲ್ಲಿ ಹಂಚಿ ಹೋಗಿದ್ದಾರೆ. ಪ್ರತಿ ಬುಡಕಟ್ಟು ಸಮುದಾಯಗಳಲ್ಲೂ ಜಾತಿ, ಕೀಳರಿಮೆ ಕಾಣಬಹುದು. ಈ ಸಮುದಾಯಗಳು ತಮ್ಮ

ಭಾಷೆಯ ಜೊತೆಗೆ ಇತರ ಭಾಷೆಯನ್ನು ಮಾತಾಡುತ್ತಾರೆ. ಇಲ್ಲಿನ ಬುಡಕಟ್ಟು ಜನ ತಮಿಳು ಭಾಷೆಗೆ ಜೊತೆಗೆ ಕನ್ನಡ ಉಪಭಾಷೆ ಹೊಂದಿದ್ದಾರೆ. ರೂಢಿ ಸಂಪ್ರದಾಯವನ್ನು ಚಾಚು ತಪ್ಪದೆ ಪಾಲಿಸುವವರು. ವಿವಾಹ ಪದ್ಧತಿಯಲ್ಲಿ ಹಿರಿಯರ ಆಯ್ಕೆ ಮದುವೆ, ಹೊಂದಾಣಿಕೆ ಮದುವೆ, ಬಲತ್ಕಾರ ಮದುವೆ, ಪಲಾಯನ ಮದುವೆ ರೂಢಿಯಲ್ಲಿದೆ. ದೇವರು ಧರ್ಮಗಳಲ್ಲಿ ಅಪಾರವಾದ ನಂಬಿಕೆವುಳ್ಳವರಾಗಿದ್ದು ಪ್ರಕೃತಿಯ ಆರಾಧಕರು ಗಿಡಮರ ಭೂಮಿ ಮೇಲೆ ಅಪಾರ ಭಕ್ತಿ. ಸಾಂಪ್ರದಾಯಕ ಉಡುಪು ತೊಡುತ್ತಾರೆ. ಕಪ್ಪು ಮಿಶ್ರಿತ ಗಟ್ಟುಮುಟ್ಟಾದ ಮೈಕಟ್ಟು, ನೃತ್ಯ, ಹಾಡು ಕಲೆಯಲ್ಲಿ ಹಿಂದೆ ಬಿದ್ದಿಲ್ಲ. ಸಿದ್ಧಿ ಹೆಣ್ಣು ಮಕ್ಕಳು ಪುಗಡಿ ನೃತ್ಯ ವಿಶೇಷವಾಗಿದ್ದು. ಹೆಣ್ಣು ಮಕ್ಕಳು ಕೋಲು ಹಿಡಿಯುತ್ತಾ ಕುಣಿಯುತ್ತಾರೆ. ಕಾಡಿನ ಬಗ್ಗೆ ಇವರಿಗೆ ಎಲ್ಲಿಲ್ಲದ ಪ್ರೀತಿ. ಮರಗಿಡಗಳನ್ನು ದೇವರು ಎಂದು ಪೂಜಿಸುತ್ತಾರೆ. ಮಕ್ಕಳಿಗೆ ಮರ ಗಿಡ ಬೆಟ್ಟಗಳ ಹೆಸರು ಇಡುತ್ತಾರೆ. ಬಹುತೇಕರು ಅನಕ್ಷರಸ್ಥರು ನಡೆಸುವ ಇವರಲ್ಲಿ ನಿಸರ್ಗ ಸರಳ ಬದುಕು.

ಶಿಕ್ಷಣ

ಶಿಕ್ಷಣವು ವ್ಯಕ್ತಿಯ ಅದರಲ್ಲೂ ಮಹಿಳೆಯರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಬೆಳೆಸುವ ಮತ್ತು ಪ್ರೌಢಗೊಳಿಸುವ ಶಕ್ತಿಯಾಗಿದೆ. ಸ್ತ್ರೀಶಿಕ್ಷಣವು ಕುಟುಂಬದ ರಾಜ್ಯದ ಮತ್ತು ದೇಶದ ಅಭಿವೃದ್ಧಿಗೆ ಬುನಾದಿಯಾಗಿದೆ. ಮಹಿಳೆಯರು ಅಭಿವೃದ್ಧಿ ಪರ ಚಟುವಟಿಕೆಗಳಲ್ಲಿ ಭಾಗವಹಿಸುವುದಕ್ಕೆ ಒಂದು ಸಾಧನವಾಗಿದೆ. ಶಿಕ್ಷಣವನ್ನು ಮಾನವಹಕ್ಕೆಂದು ಒಪ್ಪಿಕೊಂಡಿರು ವುದಾಗಿದೆ. ಹಾಗಾಗಿ ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿಯನ್ನು ಸಮಗ್ರ ದೃಷ್ಟಿಯಿಂದ ನೋಡಬೇಕಾಗಿದೆ.

ಭಾರತದಲ್ಲಿ ಮಹಿಳೆಯರ ಔಪಚಾರಿಕ ಶಿಕ್ಷಣವನ್ನು ನೂರು ವರ್ಷಗಳ ಹಿಂದೆ ಪ್ರಾರಂಭಿಸ ಲಾಯಿತು. ಸಾಮಾಜಿಕ ಸುಧಾರಣೆಗೆ ಹೆಣ್ಣು ಮಕ್ಕಳ ಶಿಕ್ಷಣವು ಒಂದು ಪ್ರಮುಖ ಗುರಿಯೆಂದು ಭಾವಿಸಿ ಹಲವಾರು ಕ್ರಮಗಳನ್ನು ಕೈಗೊಳ್ಳಲಾಯಿತು. ಆದರೂ ಪರಿಶಿಷ್ಟ ಜಾತಿ ಮತ್ತು ಪಂಗಡದ ಮಹಿಳೆಯರ ಸಾಕ್ಷರತೆ ಸುಧಾರಣೆ ಆಶಾದಾಯಕವಾಗಿಲ್ಲ. ಸ್ವಾತಂತ್ರ್ಯನಂತರ ಮಹಿಳಾ ಸಾಕ್ಷರತೆ ಸಾಕಷ್ಟು ಪ್ರಗತಿ ಕಂಡಿದೆ. ಆದರೂ ಬುಡಕಟ್ಟು ಮಹಿಳೆಯರ ಶಿಕ್ಷಣ ಪ್ರಮಾಣ ಮಾತ್ರ ಪುರುಷರು ಹಾಗೂ ಮಹಿಳೆಯರ ಸಾಕ್ಷರತೆ ಪ್ರಮಾಣಕ್ಕಿಂತ ಕಡಿಮೆ ಮಟ್ಟದಲ್ಲಿಯೇ ಮುಂದುವರಿಯುತ್ತಿರುವುದನ್ನು ಕಾಣಬಹುದಾಗಿದೆ.

ಭಾರತ ಸರ್ಕಾರವು ೧೯೯೨ರ ವರ್ಷವನ್ನು ಹೆಣ್ಣುಮಕ್ಕಳ ವರ್ಷ ಎಂದು ಘೋಷಿಸಿತು. ಎಲ್ಲಾ ರಾಜ್ಯಗಳು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ವಿಶೇಷ ಕಾಳಜಿ ವಹಿಸುತ್ತಿವೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರವು ಪ್ರತ್ಯೇಕ ಕ್ರಿಯಾ ಯೋಜನಾ ಸಮಿತಿಯನ್ನು ರಚಿಸಿದ್ದು ಮಹಿಳಾ ಶಿಕ್ಷಣಕ್ಕೆ ಹೆಚ್ಚು ಶ್ರಮಿಸುತ್ತದೆ.

## ಕರ್ನಾಟಕದಲ್ಲಿ ಮಹಿಳಾ ಶಿಕ್ಷಣ ಪ್ರಮಾಣ

| ಜಿಲ್ಲೆಗಳು | ಒಟ್ಟು | ನಗರ | ಗ್ರಾಮೀಣ | ಬುಡಕಟ್ಟು | ಎಸ್.ಸಿ. |
|---|---|---|---|---|---|
| ಬೆಂಗಳೂರು | ೭೭.೪೮ | ೭೯.೭೦ | ೬೦.೭೮ | ೬೪.೮ | ೬೧.೮ |
| ಬೆಂಗಳೂರು ಗ್ರಾಮೀಣ | ೫೪.೯೯ | ೬೯.೯೭ | ೫೦.೯೫ | ೪೬ | ೪೪.೫೬ |
| ಕೋಲಾರ | ೫೨.೨೩ | ೭೪.೨೭ | ೪೪.೯೯ | ೩೬.೨ | ೪೨.೦೯ |
| ತುಮಕೂರು | ೫೬.೯೪ | ೭೬.೩೫ | ೫೨.೨೯ | ೪೮.೭೦ | ೪೩.೩೯ |
| ಶಿವಮೊಗ್ಗ | ೬೬.೮೮ | ೭೮.೫೦ | ೬೦.೬೬ | ೫೨.೫ | ೪೬.೪೦ |
| ಚಿತ್ರದುರ್ಗ | ೫೩.೭೮ | ೭೪.೭೪ | ೪೯.೧೨ | ೪೧.೫ | ೪೦.೯೨ |
| ದಾವಣಗೆರೆ | ೫೮.೦೪ | ೭೧.೮೯ | ೫೨.೦೨ | ೪೩ | ೩೮.೧೬ |
| ಮೈಸೂರು | ೫೫.೮೧ | ೭೮.೧೨ | ೪೨.೩೧ | ೩೭.೫ | ೪೫.೫೨ |
| ಚಾಮರಾಜನಗರ | ೪೨.೪೮ | ೬೩.೮೬ | ೩೮.೫೯ | ೩೨.೮ | ೪೨.೨೨ |
| ಮಂಡ್ಯ | ೫೧.೫೩ | ೭೨.೨೬ | ೪೭.೬೫ | ೪೫.೪ | ೪೬.೨೫ |
| ಹಾಸನ | ೫೯.೦೦ | ೭೯.೩೫ | ೫೪.೭೨ | ೪೫.೬ | ೪೩.೧೪ |
| ಚಿಕ್ಕಮಗಳೂರು | ೬೪.೦೧ | ೭೭.೭೮ | ೬೦.೭೦ | ೪೯.೪ | ೫೫.೭೬ |
| ಕೊಡಗು | ೭೨.೨೬ | ೮೬.೧೧ | ೭೦.೧೦ | ೩೪.೬ | ೫೬.೫೬ |
| ದಕ್ಷಿಣ ಕನ್ನಡ | ೭೭.೨೧ | ೮೪.೪೭ | ೭೨.೬೯ | ೬೫.೭ | ೫೮.೩೬ |
| ಉಡುಪಿ | ೭೫.೧೯ | ೮೫.೩೧ | ೭೨.೯೭ | ೨೯.೫ | ೬೨.೧೮ |
| ಬೆಳಗಾವಿ | ೫೨.೩೨ | ೭೨.೫೩ | ೪೫.೮೦ | - | ೪೧.೬೩ |
| ಬಿಜಾಪುರ | ೪೩.೪೭ | ೬೪.೮೯ | ೩೭.೩೨ | ೩೧.೯ | ೩೧.೯೫ |
| ಬಾಗಲಕೋಟೆ | ೪೩.೫೬ | ೬೦.೮೭ | ೩೬.೩೩ | ೨೮.೫ | ೨೮.೭೫ |
| ಧಾರವಾಡ | ೬೧.೯೨ | ೭೩.೨೮ | ೪೭.೭೦ | ೪೨.೦ | ೪೯.೨೬ |
| ಗದಗ | ೫೨.೫೨ | ೬೩.೮೮ | ೪೬.೨೮ | ೪೨.೧ | ೩೩.೬೯ |
| ಹಾವೇರಿ | ೫೭.೩೭ | ೬೮.೧೭ | ೫೪.೫೨ | ೪೫.೨ | ೩೬.೯೪ |
| ಉತ್ತರ ಕನ್ನಡ | ೬೮.೪೭ | ೮೦.೫೯ | ೬೩.೫೨ | ೫೩.೬ | ೫೫.೫೫ |
| ಗುಲ್ಬರ್ಗಾ | ೩೭.೯೦ | ೬೦.೪೯ | ೨೯.೪೩ | ೨೦.೮ | ೨೭.೦೨ |
| ಬಳ್ಳಾರಿ | ೪೫.೨೮ | ೬೦.೬೯ | ೩೬.೮೨ | ೨೮.೮ | ೨೭.೦೨ |
| ರಾಯಚೂರು | ೩೫.೯೩ | ೫೬.೫೪ | ೨೮.೮೬ | ೧೬.೯ | ೨೬.೦೯ |
| ಕೊಪ್ಪಳ | ೩೯.೬೧ | ೫೮.೩೪ | ೩೫.೮೧ | ೨೬.೫ | ೨೫.೬೨ |
| ಬೀದರ್ | ೪೮.೮೧ | ೬೬.೪೭ | ೪೩.೬೪ | ೧೬.೯ | ೪೦.೨೨ |
| ದಕ್ಷಿಣ ಕರ್ನಾಟಕ | ೬೩.೦೨ | - | ೫೩.೬೮ | - | - |
| ಉತ್ತರ ಕರ್ನಾಟಕ | ೪೮.೩೦ | - | ೪೯.೧೫ | - | - |
| ಕರ್ನಾಟಕ | ೫೬.೯೦ | ೭೪.೧೩ | ೪೮.೦೧ | ೩೬ | ೪೧.೭೨ |

ಕರ್ನಾಟಕವು ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ಮಾಡುತ್ತಿದೆ. ರಾಜ್ಯದ ಒಟ್ಟು ಶಿಕ್ಷಣ ಪ್ರಮಾಣ ೬೬.೬%ರಷ್ಟಿದೆ (೨೦೦೧) ಪುರುಷರ ಸಾಕ್ಷರತೆ ಪ್ರಮಾಣ ಶೇ. ೭೬.೧ರಷ್ಟಿದೆ. ಮಹಿಳೆಯರ ಸಾಕ್ಷರತೆ ಪ್ರಮಾಣ ೫೯.೯ರಷ್ಟಿದೆ. ಇಲ್ಲಿ ಪುರುಷ ಮತ್ತು

ಸ್ತ್ರೀಯರ ನಡುವೆ, ಗ್ರಾಮೀಣ ನಗರ ಪ್ರದೇಶಗಳ ನಡುವೆ ಶಿಕ್ಷಣದ ಅಸಮಾನತೆ ಕಾಣಬಹುದಾಗಿದೆ. ನಗರ ಪ್ರದೇಶದ ಶಿಕ್ಷಣ ಶೇ. ೮೦ರಷ್ಟಿದೆ. ಗ್ರಾಮೀಣ ಪ್ರದೇಶದ ಶಿಕ್ಷಣ ಪ್ರಮಾಣ ಶೇ. ೫೯.೩೩ರಷ್ಟಿದೆ. ರಾಜ್ಯವು ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿರುವುದಾದರೂ ಸ್ತ್ರೀಪುರುಷರ ಶಿಕ್ಷಣ ಪ್ರಮಾಣದಲ್ಲಿ ಅಸಮಾನತೆ ಕಾಣಬಹುದಾಗಿದೆ ಅಲ್ಲದೆ ಮಹಿಳಾ ಸಾಕ್ಷರತೆ ಪ್ರಮಾಣದಲ್ಲಿ ಅಸಮಾನತೆಗಳು ಮುಂದುವರಿಯುತ್ತಿರುವುದು ಕಂಡುಬರುತ್ತಿದೆ.

ರಾಜ್ಯದ ಒಟ್ಟಾರೆ ಮಹಿಳಾ ಶಿಕ್ಷಣ ಪ್ರಮಾಣ ಶೇ. ೫೬.೯೦ರಷ್ಟಿದೆ. ಇದರಲ್ಲಿ ನಗರ ಪ್ರದೇಶ (೭೪.೧೩) ಮಹಿಳೆಯರ ಶಿಕ್ಷಣ ಪ್ರಮಾಣ ಗ್ರಾಮೀಣ (೪೮%) ಪರಿಶಿಷ್ಟ ಜಾತಿ (೪೧.೭೨) ಪರಿಶಿಷ್ಟ ಪಂಗಡ ಮಹಿಳೆಯರು (೩೬.೫೭) ಪ್ರಮಾಣದ ಅಂತರ ಅಸಮಾನತೆಗಳನ್ನು ಕಾಣಬಹುದಾಗಿದೆ. ಒಟ್ಟಾರೆ ಮಹಿಳಾ ಶಿಕ್ಷಣ ಪ್ರಮಾಣ ನೋಡಿದಾಗ ಪ್ರಾದೇಶಿಕವಾಗಿ ಜಾತಿಯ ಸ್ಥಾನಗಳಿಗೆ ಅನುಗುಣವಾಗಿ ಶಿಕ್ಷಣದ ಅಂತರಗಳು ಮುಂದುವರಿಯುತ್ತಿರುವುದು ಕಾಣಬಹುದಾಗಿದೆ. ನಗರ ಪ್ರದೇಶದ ಮಹಿಳೆಯರ ಶಿಕ್ಷಣ ಪ್ರಮಾಣ (೭೪.೧೩%) ಬುಡಕಟ್ಟು ಮಹಿಳೆಯರ (೩೬.೧೩%) ಶಿಕ್ಷಣ ಪ್ರಮಾಣಕ್ಕೆ ಹೋಲಿಸಿ ನೋಡಿದರೆ ಶೇ. ೫೦%ಕ್ಕಿಂತಲೂ ಹೆಚ್ಚಿನ ಅಂತರವನ್ನು ಕಾಣಬಹುದಾಗಿದೆ.

ಸರಕಾರವು ಶೈಕ್ಷಣಿಕವಾಗಿ ಹಿಂದುಳಿದಿರುವ ಬುಡಕಟ್ಟು ಸಮುದಾಯಗಳು ಅದರಲ್ಲೂ ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಹಲವಾರು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಶ್ರಮಿಸುತ್ತಿದೆ. ಪರಿಶಿಷ್ಟ ವರ್ಗದ ಮಕ್ಕಳು ಚಿಕ್ಕ ವಯಸ್ಸಿನಲ್ಲೆ ಶಾಲೆಗೆ ಹೋಗುವ ಅಭ್ಯಾಸ ರೂಢಿಸಲು ೩೮ ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು ೧೨೨ ಆಶ್ರಮ ಶಾಲೆಗಳನ್ನು ತೆರೆಯಲಾಗಿದ್ದು, ಅವುಗಳಲ್ಲಿ ೧೮೦೦ ಮಕ್ಕಳು ಮತ್ತು ೯೭೦೦ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ. ಈ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ಪ್ರತಿ ಕೇಂದ್ರದಲ್ಲಿ ಒಬ್ಬ ಮಹಿಳಾ ಸಂಚಾಲಕಿ ಹಾಗೂ ಒಬ್ಬ ನಿರ್ವಾಹಕಿಯರಿದ್ದು ಅಕ್ಷರಭ್ಯಾಸ, ನೀತಿಕಥೆ ಹಾಗೂ ಅವರ ಚಿಂತನಾಕ್ರಮ ಬೆಳೆಸಲು ಅಗತ್ಯವಾದ ಪಠ್ಯವನ್ನು ಬೋಧಿಲಾಗುತ್ತಿದೆ. ಮಕ್ಕಳಿಗೆ ಉಚಿತ ಊಟ, ವಸತಿ, ಸಮವಸ್ತ್ರ ಪುಸ್ತಕ, ಲೇಖನಿ ಸಾಮಗ್ರಿಗಳನ್ನು ನೀಡಲಾಗುತ್ತಿದೆ.

ಮೆಟ್ರಿಕ್ ಪೂರ್ವ ಬಾಲಕರಿಗಾಗಿ ೭೪ ಮತ್ತು ೫೯ ಬಾಲಕಿಯರಿಗಾಗಿ ವಿದ್ಯಾರ್ಥಿನಿಲಯಗಳನ್ನು ತೆರೆಯಲಾಗಿದೆ. ಇದರಲ್ಲಿ ೩೪೨೦ ವಿದ್ಯಾರ್ಥಿಗಳು ಸೌಲಭ್ಯ ಪಡೆಯುತ್ತಿದ್ದಾರೆ. ಮೆಟ್ರಿಕ್ ನಂತರದ ೧೧ ವಿದ್ಯಾರ್ಥಿನಿಲಯಗಳಿಗೆ ಅನುದಾನ ನೀಡಲಾಗುತ್ತಿದೆ. ಎಂ.ಫಿಲ್. ಪಿಎಚ್.ಡಿ. ವಿದ್ಯಾರ್ಥಿಗಳಿಗೆ - ವಿದೇಶಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಧನ ಸಹಾಯ ನೀಡಲಾಗುತ್ತಿದೆ. ಜೊತೆಗೆ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ನಗದು ಬಹುಮಾನ ನೀಡಿ ಪ್ರೋತ್ಸಾಹ ನೀಡಲಾಗುತ್ತಿದೆ. ಹೀಗೆ ಬುಡಕಟ್ಟು ಮಹಿಳೆಯರನ್ನು ಶೈಕ್ಷಣಿಕವಾಗಿ ಸಮರ್ಥರನ್ನಾಗಿಸಿ ಆರ್ಥಿಕವಾಗಿ ಸಬಲರನ್ನಾಗಿಸಲು ಸರಕಾರ ಶ್ರಮಿಸುತ್ತಿದೆ. ಆದರೂ ಬುಡಕಟ್ಟು ಮಹಿಳೆಯರ ಶಿಕ್ಷಣ ಪ್ರಮಾಣ ತೃಪ್ತಿದಾಯಕವಾಗಿಲ್ಲ.

## ಆರ್ಥಿಕತೆ

ಐತಿಹಾಸಿಕವಾಗಿ ಬುಡಕಟ್ಟು ಜನರು ಜೀವನೋಪಯೋಗಕ್ಕೆ ಬೇಟೆ ಮತ್ತು ಕಾಡಿನ ಉತ್ಪನ್ನಗಳನ್ನು ನಂಬಿ ಬದುಕುತ್ತಿದ್ದ ಇವರು ಭೂಮಿಯನ್ನು ಸಂಪನ್ಮೂಲ ಎಂದು ಪರಿಗಣಿಸಿದ್ದರೂ ವ್ಯವಸಾಯಕ್ಕೆ ಹೆಚ್ಚು ಭೂಮಿಯ ಬಳಸುತ್ತಿರಲಿಲ್ಲ. ಅಗತ್ಯದಷ್ಟು ಭೂಮಿಯನ್ನು ಬೆಳಸಿ ೨-೩ ವರ್ಷಗಳು ಬೆಳೆ ಬೆಳೆದ ನಂತರ ಬೇರೆಡೆಗೆ ಸ್ಥಳಾಂತಿಸುತ್ತಿದ್ದರು. ಇಂತಹ ಬೇಟೆ ಕೃಷಿ ಬದುಕಿನಲ್ಲಿ ಬುಡಕಟ್ಟು ಮಹಿಳೆಯರದು ಪ್ರಧಾನ ಪಾತ್ರ ಕುಟುಂಬದ ನಿರ್ವಹಣೆ, ವ್ಯವಸಾಯ, ಮಕ್ಕಳ ಪಾಲನೆ ಪೋಷಣೆ, ಕಾಡಿನ ಉತ್ಪನ್ನಗಳ ಸಂಗ್ರಹಣೆಯಲ್ಲಿ ತೊಡಗಿದ್ದು, ಅಲ್ಲದೆ ಗಂಡಸರೊಟ್ಟಿಗೆ ಬೇಟೆಯಲ್ಲಿ ಸಹಕರಿಸುತ್ತಿದ್ದರು. ಆಣೆಕಟ್ಟು, ಅರಣ್ಯನೀತಿ, ಗಣಿಗಾರಿಕೆ, ತೋಟಗಾರಿಕೆಗಳು ದೊಡ್ಡ ಪ್ರಮಾಣದ ಅರಣ್ಯನಾಶ ಮಾಡಲಿದ್ದು ಅರಣ್ಯನೀತಿಗಳು ಮಹಿಳೆಯರನ್ನು ಬೀದಿಪಾಲು ಮಾಡಿದವು. ಗಣಿಗಳಲ್ಲಿ, ಕೃಷಿಯಲ್ಲಿ ಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಿದ್ದಾರೆ. ಕೆಳಮಟ್ಟದ ಸಾಕ್ಷರತೆ, ವೃತ್ತಿ ಕೌಶಲ್ಯದ ಕೊರತೆ ಅವರನ್ನು ಕಡಿಮೆ ಸಂಭಾವನೆ ತರುವಂತಹ ಕೆಲಸಗಳಿಗೆ ತಳ್ಳುತ್ತಿದೆ. ಅಧಿಕ ಪ್ರಮಾಣ ಮಹಿಳೆಯರು (೫ ಲ.೮೯%) ಗೃಹ ಸಂಬಂಧಿ ಕೈಗಾರಿಕೆಗಳಲ್ಲಿ ಮತ್ತು ಕೃಷಿ ಕಾರ್ಮಿಕರಾಗಿದ್ದಾರೆ (೫೭.೯೦). ಕೇವಲ ಶೇ. ೨೯ ಮಹಿಳೆಯರು ಸಾಗುವಳಿದಾರರಾಗಿದ್ದಾರೆ. ಬಹಳಷ್ಟು ಬುಡಕಟ್ಟುಗಳು ಕಡಿಮೆ ಉತ್ಪಾದನೆಯಲ್ಲಿ ಸಣ್ಣ ಘಟಕಗಳನ್ನು ಹೊಂದಿದ್ದು ಅವು ಆರ್ಥಿಕವಾಗಿ ಲಾಭದಾಯಕವಾಗಿಲ್ಲ. ಆದ್ದರಿಂದ ಹಿಡುವಳಿದಾರರು ತಮ್ಮ ಜೀವನ ನಿರ್ವಹಣೆಗಾಗಿ ಕೂಲಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ರಾಜ್ಯ ಸರ್ಕಾರವು ಬಡಕುಟುಂಬ ಮಹಿಳೆಯರ ಆರ್ಥಿಕ ಸ್ಥಿತಿ ಉತ್ತಮಪಡಿಸಲು ಹಲವಾರು ಕಾರ್ಯಕ್ರಮಗಳು ಅನುಷ್ಠಾನಗೊಳಿಸುತ್ತದೆ. ಅವುಗಳಲ್ಲಿ ಲ್ಯಾಂಪ್ ಮತ್ತು ಸ್ತ್ರೀ ಶಕ್ತಿ ಉದ್ಯೋಗ, ಸ್ವರ್ಣ ಜಯಂತಿ ಯೋಜನೆಗಳು ಅತ್ಯಂತ ಪ್ರಮುಖವಾದ ಅಂಶವಾಗಿದೆ.

ಸಮಗ್ರ ಗಿರಿಜನ ಅಭಿವೃದ್ಧಿಗಾಗಿ ಗಿರಿಜನ ಉಪಯೋಜನೆಯನ್ನು ೧೯೭೬-೭೭ರಲ್ಲಿ ಪ್ರಾರಂಭಿಸಲಾಗಿದೆ. ಈ ಯೋಜನೆಯನ್ನು ಚಾಮರಾಜನಗರ, ಮೈಸೂರು, ಚಿಕ್ಕಮಗಳೂರು ಕೊಡಗು ದಕ್ಷಿಣ ಕನ್ನಡ ಮತ್ತು ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತವೆ.

೧೯೯೨ರಲ್ಲಿ ಈ ಕಾರ್ಯಕ್ರಮವನ್ನು ಎಲ್ಲಾ ಜಿಲ್ಲೆಗಳಿಗೂ ವಿಸ್ತರಿಸಲಾಗಿದೆ. ಪರಿಶಿಷ್ಟ ವರ್ಗದ ಕುಟುಂಬಗಳನ್ನು ಸಹ ಬಡತನರೇಖೆ ಮೇಲೆತ್ತುವುದು, ಅವರ ಕಲೆ ಸಂಸ್ಕೃತಿ ಕಾಪಾಡುವುದು ಕನಿಷ್ಟ ಮೂಲಭೂತ ಸೌಲಭ್ಯ ಒದಗಿಸುವುದು ಆರ್ಥಿಕ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸಲಾಗಿದೆ.

ಪರಿಶಿಷ್ಟ ಪಂಗಡದವರ ಅಭಿವೃದ್ಧಿಗೆ ಆರ್ಥಿಕ ಸಹಾಯ, ಉದ್ಯೋಗ ಮತ್ತು ಜೀವನಮಟ್ಟವನ್ನು ಸುಧಾರಿಸಲು ಸ್ವರ್ಣಜಯಂತಿ ಶಹರಿ ರೋಜ್‌ಗಾರ್‌ಯೋಜನೆ ಎಸ್.ಜಿ.ಆರ್.ವೈ., ಸಮಗ್ರ ಗ್ರಾಮೀಣ ವಸತಿ ಯೋಜನೆ, ಪ್ರಧಾನಮಂತ್ರಿ ರೋಜ್‌ಗಾರ್ ಯೋಜನೆ ಮುಂತಾದ ಯೋಜನೆಗಳನ್ನು ಮಾಡಲಾಗುತ್ತದೆ.

ಮಹಿಳೆಯರಿಗೆ ಸ್ತ್ರೀಶಕ್ತಿ ಯೋಜನೆ ವಿಧವೆಯರಿಗೆ ಆರ್ಥಿಕ ಸೌಲಭ್ಯ ಒದಗಿಸಲು ನವಜೀವನ ಕಾರ್ಯಕ್ರಮ, ಕೌಶಲ್ಯ ಅಭಿವೃದ್ಧಿಗೆ ತರಬೇತಿ ಉದ್ಯೋಗ ಯೋಜನೆಯಡಿ ಆರ್ಥಿಕ ಅಭಿವೃದ್ಧಿಗೆ ಸಹಾಯಧನ ನೀಡಲಾಗುತ್ತದೆ.

**ಸ್ತ್ರೀಶಕ್ತಿ ಯೋಜನೆ**

ಬುಡಕಟ್ಟು ಮಹಿಳೆಯರನ್ನು ಸಶಕ್ತಿಗೊಳಿಸುವಲ್ಲಿ ಸ್ತ್ರೀಗುಂಪುಗಳು ಮಹತ್ವದ ಪಾತ್ರ ವಹಿಸುತ್ತಿವೆ. ರಾಜ್ಯದಲ್ಲಿ ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಸ್ತ್ರೀಶಕ್ತಿಗುಂಪುಗಳಿದ್ದು ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿವೆ. ರಾಜ್ಯದಲ್ಲಿ ೯೫ ಸಾವಿರ ಬುಡಕಟ್ಟು ಮಹಿಳೆಯರು ಸ್ತ್ರೀಶಕ್ತಿ ಗುಂಪುಗಳನ್ನು ರಚಿಸಿಕೊಂಡು ಆ ಮೂಲಕ ತಮ್ಮ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳುವಲ್ಲಿ ತೊಡಗಿದ್ದಾರೆ. ತಮ್ಮ ಉಳಿತಾಯದ ಹಣದ ಜೊತೆಗೆ ಬ್ಯಾಂಕಿನಿಂದ ಪಡೆದ ಸಾಲದಿಂದ ಹಸು-ಎಮ್ಮೆಗಳನ್ನು ಸಾಕುವುದು, ಹಪ್ಪಳ-ಉಪ್ಪಿನಕಾಯಿ, ಊದುಬತ್ತಿ ತಯಾರಿಸುವುದು, ಅಲ್ಲದೆ ವೈಯಕ್ತಿಕವಾಗಿ ಸಾಲ ಪಡೆದು ತರಕಾರಿ ಮಾರಾಟ, ಬಳೆ ಅಂಗಡಿಗಳು, ರೆಡಿಮೇಡ್ ಬಟ್ಟೆ ತಯಾರಿಸುವುದು ಮುಂತಾದ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಅಲ್ಲದೆ ಸಾಮಾಜಿಕ ಸುಧಾರಣೆ ಕೆಲಸದಲ್ಲೂ ತೊಡಗಿದ್ದಾರೆ.

ಉದಾ:- ಮೂಡುಗೆರೆ ಕಸ್ಪಾಪುರದ ಅಕ್ಷಯ ಸ್ತ್ರೀಶಕ್ತಿಗುಂಪು-ಬುಡಕಟ್ಟು ಮಹಿಳೆಯರನ್ನು ಒಳಗೊಂಡ ಸಂಘ. ಇಲ್ಲಿನ ಮಂಜುನಾಥ ಎಂಬ ಹುಡುಗ ಸುನೀತ ಎಂಬ ಹುಡುಗಿಯನ್ನು ಮದುವೆಯಾಗುವುದಾಗಿ ಆಕೆಯನ್ನು ನಂಬಿಸಿ, ನಂತರ ಕಣ್ಮರೆಯಾಗಿದ್ದ, ಅಕ್ಷಯ ಸ್ತ್ರೀಶಕ್ತಿ ಗುಂಪು ಹುಡುಗನನ್ನು ಹುಡುಕಿ ತಂದು ಸುನೀತಾಳ ಜೊತೆ ಮದುವೆ ಮಾಡಿಸುವುದರ ಮೂಲಕ ಮಹಿಳೆಯರ ಸಮಸ್ಯೆಗಳಿಗೆ ಸ್ಪಂದಿಸುತ್ತಿವೆ. ಜೊತೆಗೆ ಹೆಂಡದಂಗಡಿಗಳನ್ನು ಮುಚ್ಚಿಸುವುದು, ಗುಟಕಾ, ಇಸ್ಪೇಟ್ ಒಂದಂಕಿ ಆಟ ಮುಂತಾದವುಗಳ ನಿರ್ಮೂಲನೆ ಮಾಡುವಲ್ಲಿ ತೊಡಗಿಸಿಕೊಂಡಿವೆ. ಕುಡಿಯುವ ನೀರು, ನೈರ್ಮಲ್ಯದ ಬಗ್ಗೆ ಹೆಚ್ಚು ಗಮನ ನೀಡುತ್ತಿದ್ದು ಆರೋಗ್ಯ ಸುಧಾರಿಸುವತ್ತ ದಾಪುಗಾಲು ಹಾಕುತ್ತಿವೆ.

**ಆರೋಗ್ಯ**

ಮಹಿಳೆ ಮತ್ತು ಆರೋಗ್ಯ ಸ್ಥಿತಿಯು ಆ ದೇಶದ ಅಭಿವೃದ್ಧಿಯ ಸೂಚಕವಾಗಿದೆ. ದೇಶ ಎಲ್ಲಾ ಪ್ರಜೆಗಳಿಗೂ ಆರೋಗ್ಯ ಸೌಲಭ್ಯ ಒದಗಿಸುವುದು. ಸರಕಾರದ ಕರ್ತವ್ಯವಾಗಿದೆ. ಸರಕಾರವು ಸರಕಾರೇತರ ಸಂಸ್ಥೆಗಳೊಡನೆ ಜನರಿಗೆ ಆರೋಗ್ಯ ಅನ್ಯೋನ್ಯ ಸಂಬಂಧವಿದೆ. ಪೌಷ್ಠಿಕ ಆಹಾರ ಲಭ್ಯವಾದರೆ ಆರೋಗ್ಯ ಸುಸ್ಥಿತಿಯಲ್ಲಿರುತ್ತದೆ. ಗ್ರಾಮೀಣ, ಬುಡಕಟ್ಟು ಕೊಳಚೆ ಪ್ರದೇಶಗಳ ಸ್ತ್ರೀ ಮತ್ತು ಮಕ್ಕಳಿಗೆ ಸೂಕ್ತ ಪೌಷ್ಠಿಕ ಆಹಾರ ಸಿಗುತ್ತಿಲ್ಲ. ಬುಡಕಟ್ಟು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಮತ್ತಿತರ ಕೆಲಸ ಮಾಡುವಾಗ ಬಿಸಿಲು ಮಳೆ ಚಳಿಯಲ್ಲಿ ಹೊಲಗದ್ದೆಗಳಲ್ಲಿ ದುಡಿಯುತ್ತಾರೆ. ಇಂತಹ ಅಪಾಯಕಾರಿ ಕೆಲಸ ನಿರ್ವಹಿಸು

ತ್ತಿರುವ ಬುಡಕಟ್ಟು ಮಹಿಳೆಯರ ಆರೋಗ್ಯ ಕುರಿತಾದ ಅಂಕಿಅಂಶಗಳ ಲಭ್ಯತೆಯು ಒಂದು ಪ್ರಮುಖ ತೊಂದರೆಯಾಗಿದೆ. ಮಾದರಿ ಸಮೀಕ್ಷೆ ಅಂಕಿ ಅಂಶಗಳ ಅಂದಾಜಿನಂತೆ ಬುಡಕಟ್ಟು ಜನರ ಜನ (೨೨.೯೭%) ಮರಣ ಪ್ರಮಾಣ (೮.೫೦%) ಇದು ರಾಜ್ಯದ ಜನನ (೨೧.೮%) ಪ್ರಮಾಣ ಮರಣ (೭.೫%) ಪ್ರಮಾಣಕ್ಕಿಂತ ಅಧಿಕವಿದೆ. ಆರೋಗ್ಯದ ಬಗ್ಗೆ ತಿಳುವಳಿಕೆ ಇಲ್ಲದಿರುವುದು ಹಾಗೂ ವೈದ್ಯಕೀಯ ಕೊರತೆಯಿಂದಾಗಿ ಬುಡಕಟ್ಟು ಮಹಿಳೆಯರು ಅನಾರೋಗ್ಯದಿಂದ ಬಳಲುತ್ತಿದ್ದಾರೆ.

ಬುಡಕಟ್ಟು ಸಮುದಾಯಗಳಲ್ಲಿ ಶಿಶುಮರಣ ಪ್ರಮಾಣ ಶೇ. ೬೪.೩೭ರಷ್ಟಿದ್ದು ಇದು ರಾಜ್ಯ ಸರಾಸರಿ (೫.೨)ಕ್ಕಿಂತಲೂ ಬಹಳ ಅಧಿಕವಾಗಿದೆ. ಗಂಡು ಶಿಶು ಮರಣ ಪ್ರಮಾಣ ಶೇ. ೭೫.೪೮ರಷ್ಟಿದ್ದರೆ, ಹೆಣ್ಣು ಶಿಶು ಮರಣ ಪ್ರಮಾಣ ದರ ೫೪.೪೮ರಷ್ಟು ಇದೆ. ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿ ಗಂಡು ಮಕ್ಕಳ ಅಪೇಕ್ಷೆ ಹೆಚ್ಚಾಗಿದ್ದರಿಂದ ಹೆಣ್ಣು ಶಿಶುಮರಣ ಪ್ರಮಾಣ ಕಡಿಮೆ ಇರುವುದಕ್ಕೆ ಕಾರಣವಿರಬಹುದು. ರಾಜ್ಯದಲ್ಲಿ ಪ್ರತಿ ೧,೦೦,೦೦ ಜೀವಂತ ಹೆರಿಗಳಾದರೆ ೧೯೫ ತಾಯಂದಿರು ಸಾವನ್ನು ಅಪ್ಪುತ್ತಾರೆ. ಪ್ರತಿ ದಿನ ಆರು ತಾಯಂದಿರು ನಿಧರಾಗುತ್ತಿದ್ದಾರೆ. ಇದಕ್ಕೆ ಕಾರಣ ತೀವ್ರ ರಕ್ತಸ್ರಾವ (೩೨%) ರಕ್ತಹೀನತೆ (೧೩) ಸೆಪ್ಸಿನ್ (೮%) ನಂಜು (೧೦%) ಗರ್ಭಸ್ರಾವ ಸೋಂಕು (೧%) ಮಲೇರಿಯಾ, ಲೈಂಗಿಕತೆಯಿಂದ ಕೂಡಿದ ರೋಗ ಅಲ್ಲದೆ ಏಡ್ಸ್‌ನಂತಹ ಮಾರಕ ರೋಗಗಳು ಬುಡಕಟ್ಟು ಮಹಿಳೆಯರನ್ನು ಕಾಡುತ್ತಿವೆ. ಬುಡಕಟ್ಟು ಮಹಿಳೆಯರು ಮತ್ತು ಮಕ್ಕಳಿಗೆ ಆರೋಗ್ಯ ಕೇಂದ್ರಗಳು ಬುಡಕಟ್ಟು ಹಾಡುಗಳಲ್ಲಿ ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಗಿದೆ. ಈ ಕೇಂದ್ರಗಳ ಮೂಲಕ ಗರ್ಭಿಣಿ ಬಾಣಂತಿಯರಿಗೆ ಪೌಷ್ಠಿಕ ಆಹಾರ ರೋಗ್ಯ ಸೌಲಭ್ಯ ಒದಗಿಸಲಾಗುತ್ತಿದೆ. ಅಲ್ಲದೆ ಐ.ಪಿ.ಪಿ. ೯ ಯೋಜನೆಯಡಿ ಆರೋಗ್ಯ ಇಲಾಖೆ ಮತ್ತು ಸರಕಾರೇತರ ಸಂಸ್ಥೆಗಳು ಬುಡಕಟ್ಟಿನ ಹೆಣ್ಣುಮಕ್ಕಳಿಗೆ ಎ.ಎನ್.ಎಂ.ಗಳ ತರಬೇತಿ ನೀಡಿ ಅವರನ್ನು ಬುಡಕಟ್ಟು ಪ್ರದೇಶಗಳಲ್ಲಿನ ಆರೋಗ್ಯ ಉಪಕೇಂದ್ರಗಳಿಗೆ ನೇಮಿಸಲಾಗಿದೆ. ಈ ಸಂಸ್ಥೆಗಳು ಮಕ್ಕಳಿಗೆ ಉತ್ತಮ ಆರೋಗ್ಯ ಸೌಲಭ್ಯ ಒದಗಿಸುತ್ತದೆ. ಅಲ್ಲದೆ ಬಿ.ಆರ್. ಬೆಟ್ಟಗಳಲ್ಲಿ ವಿ.ಜಿ.ಕೆ.ಕೆ. ಎಂಬ ಸಂಸ್ಥೆಯು ಬುಡಕಟ್ಟುಗಳ ಸಾಂಪ್ರದಾಯಕ ರಕ್ಷಣೆ ವ್ಯವಸ್ಥೆಯನ್ನು ಆಧುನಿಕ ಔಷಧಿಗಳೊಂದಿಗೆ ಸಮಗ್ರೀಕರಿಸಿದೆ. ನೈಸರ್ಗಿಕ ಔಷಧಿಗಳ ಕುರಿತು ಬುಡಕಟ್ಟುಗಳಿಗಿರುವ ಜ್ಞಾನವನ್ನು ಅಭಿವೃದ್ಧಿಗೊಳಿಸುತ್ತದೆ. ಹೀಗೆ ಸರ್ಕಾರ ಸರ್ಕಾರೇತರ ಸಂಸ್ಥೆಗಳು ಬುಡಕಟ್ಟು ಜನರ ಆರೋಗ್ಯಕ್ಕೆ ಶ್ರಮಿಸುತ್ತಿದ್ದರೂ ಅವರ ಆರೋಗ್ಯ ಸ್ಥಿತಿಗಳು ಗಣನೀಯವಾಗಿ ಸುಧಾರಣೆಯಾಗಿಲ್ಲ. ಅಪೌಷ್ಟಿಕತೆಯ ಜೊತೆಗೆ ಕುಡಿಯುವ ನೀರು ನೈರ್ಮಲ್ಯ ಕೊರತೆ ಕಾರಣವಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಉಂಟಾಗುವ ಶೇ. ೮೦ರಷ್ಟು ಕಾಯಿಲೆಗಳು ನೀರು ನೈರ್ಮಲ್ಯ ಕೊರತೆಯಿಂದ ಉಂಟಾಗುತ್ತವೆ.

ಬುಡಕಟ್ಟು ಜನರು ಕುಡಿಯುವ ನೀರು ನೈರ್ಮಲ್ಯ ವಸತಿ, ವಿದ್ಯುತ್ ಮುಂತಾದ ಮೂಲಭೂತ ಸೌಲಭ್ಯಗಳನ್ನು ಪಡೆಯುವಲ್ಲಿ ಅಸಮರ್ಥರಾಗಿದ್ದಾರೆ. ಶೇ. ೭೪ರಷ್ಟು

ಕುಟುಂಬಗಳು ಕುಡಿಯುವ ನೀರಿನ ಸೌಲಭ್ಯ ಹೊಂದಿದ್ದರೆ ಶೇ. ೨೫.೪೭ರಷ್ಟು ಕುಟುಂಬಗಳು ಕುಡಿಯುವ ನೀರಿನ ಸೌಲಭ್ಯ ಹೊಂದಿಲ್ಲ. ಕೈಪಂಪುಗಳು (೬೫%) ಕೊಳವೆಬಾವಿ, ಕಿರುನೀರು ಯೋಜನೆ (೫೩%) ಅಡಿಯಲ್ಲಿ ನೀರಿನ (೫೮%) ಮೂಲಗಳಿಂದ ನೀರಿನ ಸೌಲಭ್ಯ ಪಡೆಯಲಾಗುತ್ತದೆ. ಬೇಸಿಗೆಯಲ್ಲಿ ನೀರಿನ ಕೊರತೆ ಹೆಚ್ಚಾಗುತ್ತದೆ. ನೀರಿನ ಕೊರತೆಯಿಂದಾಗಿ ಅನೈರ್ಮಲ್ಯ ಹೆಚ್ಚಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಶೇ. ೯೦ರಷ್ಟು ಹಾಗೂ ನಗರ ಪ್ರದೇಶಗಳ ಶೇ. ೪೦ರಷ್ಟು ಬುಡಕಟ್ಟು ಕುಟುಂಬಗಳು ಶೌಚಾಲಯ ಸೌಲಭ್ಯ ಹಾಗೂ ಶೆ. ೫೮ರಷ್ಟು ಕುಟುಂಬಗಳು ಸ್ನಾನದ ಮನೆ ಹೊಂದಿಲ್ಲ. ಶೇ. ೮ರಷ್ಟು ಕುಟುಂಬಗಳ ಚರಂಡಿ ವ್ಯವಸ್ಥೆ ಹೊಂದಿದೆ. ಓೀಗೆ ಮೂಲಭೂತ ಸೌಲಭ್ಯ ಕೊರತೆಯಿಂದಾಗಿ, ಮಹಿಳೆಯರು ಅನಾರೋಗ್ಯದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

**ರಾಜಕೀಯ**

ಬುಡಕಟ್ಟು ಜನರಿಗೆ ತಮ್ಮ ಸಮುದಾಯಗಳಿಗೆ ತಮ್ಮದೇ ಆದ ಸ್ಥಳೀಯ ಪಂಚಾಯಿತಿ ನ್ಯಾಯಾಲಯಗಳಿವೆ. ಅವುಗಳಿಗೆ ನ್ಯಾಯ ಪಂಚಾಯಿತಿ ಅಥವಾ ಕಟ್ಟೆಮನೆ, ದೈವದ ಮನೆ, ದೈವದ ಚಾವಡಿ, ಪಂಚಾಯಿತಿ ಕಟ್ಟೆ ಹೀಗೆ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಈ ಪಂಚಾಯಿತಿಗಳು ತಮ್ಮ ಸಮುದಾಯದಲ್ಲಿ ಉಂಟಾಗುವ ಸಮಸ್ಯೆಗಳಿಗೆ ನ್ಯಾಯ ತೀರ್ಮಾನ ಮಾಡುತ್ತಿದ್ದರು. ಪಂಚಾಯತ್ ರಾಜ್ಯ ವ್ಯವಸ್ಥೆ ಜಾರಿಗೆ ಬಂದಿದ್ದರೂ ಇನ್ನೂ ಅನೇಕ ಬುಡಕಟ್ಟುಗಳು ತಮ್ಮದೇ ಪದ್ಧತಿ ಅನುಸರಿಸುತ್ತಿದೆ. ಕೆಲವು ಕಡೆ ಬುಡಕಟ್ಟು ನ್ಯಾಯ ಪಂಚಾಯಿತಿಗಳು ಕೆಲಸ ಮಾಡಲು ಪೂರಕ ವ್ಯವಸ್ಥೆ ಇದ್ದು, ಚುನಾಯಿತ ಪ್ರತಿನಿಧಿಗಳಿಂದ ಪಂಚಾಯಿತಿ ಆಡಳಿತ ನಿರ್ವಹಿಸುತ್ತಿದ್ದರೆ, ಇನ್ನೂ ಕೆಲವು ಬುಡಕಟ್ಟುಗಳು ಪಂಚಾಯತ್ ರಾಜ್ಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಣೆ ರೂಪಿಸಿಕೊಳ್ಳಬೇಕಾಗಿದೆ. ಪುರುಷ ಪ್ರಾಬಲ್ಯದಿಂದ ಕೂಡಿದ ಬುಡಕಟ್ಟು ಸಮುದಾಯಗಳಲ್ಲಿ ಮಹಿಳೆಯರಿಗೆ ಪಂಚಾಯಿತಿಗಳಲ್ಲಿ ಅವಕಾಶವಿರಲಿ ಆ ಕಡೆ ತಿರುಗಿ ನೋಡುವುದು ಕೂಡ ಅಪರಾಧವಂತಿತ್ತು. ಭಾರತೀಯ ಸಂವಿಧಾನ ೭೩ನೇ ತಿದ್ದುಪಡಿ ತರುವ ಮೂಲಕ ದೊರಕಿದ ರಾಜಕೀಯ ಮೀಸಲಾತಿ ಬುಡಕಟ್ಟು ಮಹಿಳೆಯರನ್ನು ಪಂಚಾಯಿತಿಗಳತ್ತ ಮುಖ ಮಾಡುವಂತೆ ಮಾಡಿದೆ. ಇಂದು ಬುಡಕಟ್ಟು ಮಹಿಳೆಯರು ತಮ್ಮ ಮೀಸಲಾತಿಗನುಸಾರ ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯಿತಿಗಳಿಗೆ ಆಯ್ಕೆಯಾಗಿ ಗ್ರಾಮಾಡಳಿತ ನಡೆಸುತ್ತಿದ್ದಾರೆ. ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ಚುನಾಯಿತ ಪ್ರತಿನಿಧಿಗಳಿಗೆ ತರಬೇತಿ ನೀಡಿ ಆಡಳಿತದಲ್ಲಿ ಅವರನ್ನು ಸಶಕ್ತರನ್ನಾಗಿಸುತ್ತಿವೆ. ಇಂತಹ ತರಬೇತಿ ಪಡಿದ ಶೇ. ೮೮.೯ರಷ್ಟು ಬುಡಕಟ್ಟು ಮಹಿಳೆಯರು ಅಧಿಕಾರಿಗಳನ್ನು ಸಂಪರ್ಕಿಸಿ, ಚರ್ಚಿಸುತ್ತಾರೆ. ಕುಡಿಯುವ ನೀರು ನೈರ್ಮಲ್ಯ ಮಕ್ಕಳ ಶಿಕ್ಷಣ ಮುಂತಾದವುಗಳ ಬಗ್ಗೆ ಆಸಕ್ತಿವಹಿಸುತ್ತಿದ್ದಾರೆ. ಆದರೂ ಇನ್ನೂ ಅನೇಕ ಪ್ರತಿನಿಧಿಗಳ ಆಡಳಿತ ನಿರ್ವಹಣೆ ಪುರುಷರನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಬುಡಕಟ್ಟು ಮಹಿಳೆಯರಿಗೂ

ಕೌಶಲ್ಯವರ್ಧನೆಯ ತರಬೇತಿ ಕೊಡುವ ಮೂಲಕ ಕೆಲಸ ಮಾಡುವ ವಾತಾವರಣ ಕಲ್ಪಿಸಿಕೊಟ್ಟಲ್ಲಿ ಉತ್ತಮ ಆಡಳಿತ ನೀಡಬಲ್ಲರು.

೨೦ನೇ ಶತಮಾನದಲ್ಲಿ ಅತ್ಯಂತ ಕರಾಳ ದಿನಗಳು ಕಂಡ ಆದಿವಾಸಿಗಳ ಮುಖದಲ್ಲಿ ನಿಟ್ಟುಸಿರಿಸಿರು ಬಿಡುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಈಗ ಆಡಳಿತಗಾರರಿಗೂ ಜ್ಞಾನೋದಯವಾಗಿದೆ. ಅರಣ್ಯವಾಸಿಗಳು ಇರುವ ಕಡೆ ಮಾತ್ರ ಅರಣ್ಯ ಉಳಿದಿದೆ ಎಂಬ ಸತ್ಯ ಅವರಿಗೂ ಮನವರಿಕೆಯಾಗಿದೆ. ಬ್ರಿಟೀಷರ ಕಾಲದಿಂದ ಇಲ್ಲಿಯವರೆಗೆ ಮೂಲ ನಿವಾಸಿಗಳಿಗೆ ಅರಣ್ಯದ ಹಕ್ಕು ನೀಡಿಲ್ಲ. ರಾಷ್ಟ್ರೀಯ ಅರಣ್ಯವಾಗಲಿ, ಸಂರಕ್ಷಿತ ಅರಣ್ಯವಾಗಲಿ ಅದರಲ್ಲಿನ ಕಿರು ಉತ್ಪನ್ನಗಳನ್ನು ಬೆಳೆಸಿಕೊಳ್ಳುವ, ಅರಣ್ಯವನ್ನು ರಕ್ಷಿಸುವ ಹಕ್ಕು ಆದಿವಾಸಿಗಳಿಗೆ ಕೊಡಬೇಕೆಂಬ ಹೋರಾಟಕ್ಕೆ ಮಣಿದ ಸರ್ಕಾರ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಿತು. ಈಗ ಲೋಕಸಭೆಯಲ್ಲಿ ಮಸೂದೆಯನ್ನು ಅಂಗೀಕರಿಸಲಾಗಿದೆ. ಅಲ್ಲದೆ ಹೊರಹಾಕಲಾಗಿದ್ದ ಶೇ. ೨೦ರಷ್ಟು ಮಂದಿಗೆ ಜನತಾ ಮನೆಗಳು ೧-೨ ಎರಕೆ ಜಮೀನು ನೀಡಿ ಪುನರ್ವಸತಿ ಕಲ್ಪಿಸಲಾಗಿದೆ. ಕರ್ನಾಟಕದಲ್ಲಿ ನಾಗರಹೊಳೆ ಅರಣ್ಯದಿಂದ ಹೊರಹಾಕಿದ ಆದಿವಾಸಿಗಳಲ್ಲಿ ೨೫೦ ಕುಟುಂಬಗಳಿಗೆ ಹೊಣಸೂರು ತಾಲ್ಲೂಕು ಬೆಟ್ಟದ ಕಾಡು ಪ್ರದೇಶದಲ್ಲಿ ಪುನರ್ವಸತಿ ಕಲ್ಪಿಸಲಾಗಿದೆ. ಕಬಿನಿ ಜಲಾಶಗಳಿಂದ ಸ್ಥಳಾಂತರಗೊಂಡ ೧೫೦ ಆದಿವಾಸಿ ಕುಟುಂಬಗಳಿಗೆ ಸೊಳ್ಳೆಪುರದಲ್ಲಿ ಪುನರ್‌ವಸತಿ ನೀಡಲಾಗಿದೆ.

ಬುಡಕಟ್ಟು ಜನರ ಅಭಿವೃದ್ಧಿಗಾಗಿ ೧೯೭೯ರಲ್ಲಿ ಪ್ರತ್ಯೇಕ ನಿರ್ದೇಶನಾಲಯವನ್ನು ತೆರೆಯಲಾಯಿತು. ಐದು ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಘಟಕಗಳನ್ನು ಸ್ಥಾಪಿಸಿದೆ. ಈ ಘಟಕಗಳ ಮೂಲಕ ಗಿರಿಜನ ಉಪಯೋಜನೆ, ಕೃಷಿ, ತೋಟಗಾರಿಕೆ ಪಶುಸಂಗೋಪನೆ, ಮುಂತಾದ ಎಲ್ಲಾ ಕಾರ್ಯಕ್ರಮಗಳಲ್ಲಿ ಮಹಿಳೆ ಶೇ. ೩೩ರಷ್ಟು ಮೀಸಲಾತಿ ಸೌಲಭ್ಯ ಒದಗಿಸಲಾಗಿದೆ. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಯೋಜನೆಯಡಿ ನರ್ಸರಿ ಮಹಿಳಾ ಕಲ್ಯಾಣ ಕೇಂದ್ರಗಳ ಸ್ತ್ರೀ ಶಕ್ತಿಗಳಿಗೆ ಸಹಾಯಧನ ನೀಡುವುದು ಪಂಚಾಯಿತಿ ಸದಸ್ಯರ ತರಬೇತಿ ಆಶ್ರಯ ಶಾಲೆ ಮುಂತಾದ ಹಲವಾರು ಕಾರ್ಯಕ್ರಮಗಳ ಮೂಲಕ ಮಹಿಳೆಯರು ಬದುಕಿನಲ್ಲಿ ಬದಲಾವಣೆಗಳು ಕಂಡುಬರುತ್ತಿದೆ. ೧೯೯೧ರಲ್ಲಿ ಬುಡಕಟ್ಟು ಮಹಿಳೆಯರ ಶಿಕ್ಷಣ ಪ್ರಮಾಣ ಶೇ. ೨೩ರಷ್ಟು ಇದ್ದದ್ದು ೨೦೦೧ರಲ್ಲಿ ೩೬%ರಷ್ಟು ಹೆಚ್ಚಳ ಕಂಡಿದೆ. ಅಲ್ಲದೆ ಸ್ತ್ರೀ ಶಕ್ತಿ ಗುಂಪುಗಳು ಇಂದು ಬುಡಕಟ್ಟು ಮಹಿಳೆಯರ ಆರ್ಥಿಕ ಬದುಕಿನಲ್ಲಿ ಪ್ರಗತಿಪರ ಬದಲಾವಣೆ ಉಂಟುಮಾಡಿದೆ. ಪಂಚಾಯತ್‌ರಾಜ್ಯ ವ್ಯವಸ್ಥೆಯ ಮೀಸಲಾತಿ ಯಿಂದಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುವಂತಾಗಿದೆ. ಅಲ್ಲದೆ ವಿವೇಕಾನಂದ, ಪೀಪ್ ಮುಂತಾದ ಸಂಸ್ಥೆಗಳು ಬುಡಕಟ್ಟು ಜನರ ಆರೋಗ್ಯ ಸುಧಾರಣೆ ತರುತ್ತವೆ. ಬುಡಕಟ್ಟು ಜನರಿಗೆ ವಸತಿ, ಕುಡಿಯುವ ನೀರು ನೈರ್ಮಲ್ಯ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಒಟ್ಟಾರೆ, ಬುಡಕಟ್ಟು ಮಹಿಳೆಯರ ಸ್ಥಿತಿಗತಿಗಳಲ್ಲಿ ಬದಲಾವಣೆಗಳು ಉಂಟಾಗುತ್ತವೆ. ಆದರೂ ನಿರೀಕ್ಷಿದ ಗುರಿ ತಲುಪಿಲ್ಲ. ಸಾಮಾನ್ಯ ಮಹಿಳೆಯರ ಸ್ಥಾನಕ್ಕೆ ಹೋಲಿಸಿದರೆ

ಬುಡಕಟ್ಟು ಮಹಿಳೆಯರ ಸ್ಥಿತಿಗತಿ ತುಂಬಾ ಕೆಳದರ್ಜೆಯಲ್ಲಿದೆ. ನಗರ ಮಹಿಳೆಯರ ಶಿಕ್ಷಣ ಪ್ರಮಾಣ ೭೪% ಗ್ರಾಮೀಣ ಮಹಿಳೆಯರ ಶಿಕ್ಷಣ ಪ್ರಮಾಣ (೩೬.೭) ಹೋಲಿಸಿದಾಗ ಅಂತರವಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಆರ್ಥಿಕ, ರಾಜಕೀಯ, ಆರೋಗ್ಯ ಕ್ಷೇತ್ರದಲ್ಲಿ ನಾಗರ ಮಹಿಳೆಯರಿಗಿಂತ ಹಿಂದುಳಿದಿದೆ. ಹಾಗಾಗಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ಮೂಲಕ ಅರಣ್ಯ ರಕ್ಷಣೆ ಮತ್ತು ಬಳಕೆಯ ಜೊತೆಗೆ ಆರ್ಥಿಕ ಸ್ಥಿತಿ ಉತ್ತಮ ಪಡಿಸಲು ಬುಡಕಟ್ಟು ಮಹಿಳೆಯರಿಗೂ ಪ್ರತ್ಯೇಕ ಯೋಜನೆಗಳ ಮೂಲಕ ಜೀವನ ಸುಧಾರಿಸುವುದು ಅನಿವಾರ್ಯವಾಗಿದೆ.

ಅರಣ್ಯಗಳು ಬುಡಕಟ್ಟುಗಳ ಮೂಲನೆಲೆ. ಹಾಗಾಗಿ ಅವರು ನೆಲೆಸಿರುವ ವ್ಯಾಪ್ತಿಯಲ್ಲಿನ ಕಾಡನ್ನು ರಕ್ಷಿಸುವ ಕಿರುಉತ್ಪನ್ನಗಳನ್ನು ಪಡೆದುಕೊಳ್ಳುವ ಹಕ್ಕು ಸಮುದಾಯಗಳಿಗೆ ನೀಡುವಂತಾಗಬೇಕು. ಈಗ ಒಕ್ಕಲೆಬ್ಬಿಸಿರುವ ಬುಡಕಟ್ಟು ಜನರಿಗೆ ಪುನರ್ವಸತಿ ಸೌಲಭ್ಯ ಒದಗಿಸುವುದು. ಬುಡಕಟ್ಟು ಜನರಿಗೆ ಪುನರ್ವಸತಿ ಕಲ್ಪಿಸುವಲ್ಲಿ ನೀಡುವ ೫ ಎಕರೆ ಭೂಮಿಯನ್ನು ಮಹಿಳೆಯರ ಹೆಸರಿನಲ್ಲಿ ನೀಡುವುದು ಸೂಕ್ತವಾದುದು. ಅಲ್ಲದೆ ಜಮೀನು ನೀಡಿ ಸುಮ್ಮನಾಗದೆ ವ್ಯವಸಾಯಕ್ಕೆ ನೀರು ಮತ್ತಿತರ ಸೌಲಭ್ಯ ಒದಗಿಸಿ, ಆ ಭೂಮಿಯಲ್ಲಿ ಬೆಳೆ ಬೆಳೆಯುವಂತಾಗಬೇಕು. ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ದೇವದಾಸಿಯರಿಗೆ ನೀಡಿರುವ ಎರಡು ಎಕರೆ ಭೂಮಿಗಳು ಕಲ್ಲು ಬಂಡೆಗಳಿಂದ ಕೂಡಿದ್ದು ಬೆಳೆ ಬೆಳೆಯಲು ಯೋಗ್ಯವಾಗಿಲ್ಲ. ಹೆಸರಿಗೆ ಮಾತ್ರ ಭೂಮಿ ಇದೆ. ಹಾಗಾಗಿ ಪುರ್ನವಸತಿ ಕಲ್ಪಿಸುವಲ್ಲಿ ಭೂಮಿ ಈ ರೀತಿ ಆಗಬಾರದು.

ಕಾಡಿನಿಂದ ಸ್ಥಳಾಂತರಗೊಳಿಸುವ ಬುಡಕಟ್ಟು ಜನರ ಸುಸ್ಥಿತಿಗೆ ವಿಶೇಷ ಕಾರ್ಯಕ್ರಮಗಳನ್ನು ಕೈಗೊಂಡು ಆರ್ಥಿಕ ಆದಾಯ ಉತ್ಪನ್ನ ಚಟುವಟಿಕೆಗಳಲ್ಲಿ ತೊಡಗಿ ಜೀವನ ನಿರ್ವಹಣೆ ಅಗತ್ಯ ವರಮಾನ ಪಡೆಯುವಂತಾಗಬೇಕಾಗಿದೆ. ಮಹಿಳೆಯರ ಬದುಕಿನಲ್ಲಿ ಹೆಚ್ಚು ಆಶಾಭಾವನೆ ಮೂಡಿಸಿರುವ ಸ್ತ್ರೀಶಕ್ತಿ ಗುಂಪುಗಳನ್ನು ಆರ್ಥಿಕವಾಗಿ ಬಲಪಡಿಸುವುದು ಅಗತ್ಯವಾಗಿದೆ. ಬುಡಕಟ್ಟು ಮಹಿಳೆಯರಿಗೆ ಆಧುನಿಕ ಹಾಗೂ ಸಂಪ್ರದಾಯ ಔಷಧಿ ಹಾಗೂ ಆರೋಗ್ಯ ಶುಶ್ರೂಷೆಯಲ್ಲಿ ತರಬೇತಿ ನೀಡಿ ಸ್ಥಳೀಯ ಆರೋಗ್ಯ ಉಪಕೇಂದ್ರಗಳಲ್ಲಿ ನೇಮಕ ಮಾಡಬೇಕು. ಅಲ್ಲಿ ಬುಡಕಟ್ಟು ಸಮುದಾಯಗಳ ಭೌಗೋಳಿಕ ಸನ್ನಿವೇಶಕ್ಕೆ ಅನುಕೂಲ ಸಂಚಾರಿ ಆರೋಗ್ಯ ಕೇಂದ್ರಗಳು ತೆರೆಯುವ ಮಹಿಳೆ ಮತ್ತು ಮಕ್ಕಳಿಗೆ ಶೇ. ೧೦೦ರಷ್ಟು ಪ್ರವಾಸಪೂರ್ವ ಹಾಗೂ ನಂತರದ ಆರೋಗ್ಯ ಸೌಲಭ್ಯ ಒದಗಿಸಬೇಕಾಗಿದೆ.

ಬುಡಕಟ್ಟು! ಸಂಸ್ಕೃತಿ ಸಮಪ್ರದಾಯಕ ಜ್ಞಾನ ಪದ್ಧತಿಗಳು ಕೌಶಲ್ಯ ತರಬೇತಿಗಳು ಶಾಲಾ ಪಠ್ಯಕ್ರಮದಲ್ಲಿ ಅಳವಡಿಸಿ, ಜೊತೆಗೆ ಬುಡಕಟ್ಟು ಹೆಣ್ಣುಮಕ್ಕಳಿಗೆ ತಾಂತ್ರಿಕ ಶಿಕ್ಷಣದ ಹೆಚ್ಚು ಅವಕಾಶವನ್ನು ಕಲ್ಪಿಸಿ ಮುಂದಿನ ಪೀಳಿಗೆ ಭವಿಷ್ಯದ ಬದುಕಿಗೆ ಅಡಿಪಾಯ ಹಾಕಬೇಕಿದೆ.

ಹೀಗೆ ಬುಡಕಟ್ಟು ಸಮುದಾಯಗಳಿಗೆ ಮೂಲಭೂತ ಸೌಲಭ್ಯಗಳ ಜೊತೆಗೆ ಶೈಕ್ಷಣಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಸಶಕ್ತರಾಗುವಂತೆ ಮಾಡಿ ಬುಡಕಟ್ಟು ಮಹಿಳೆಯರು ನಾಡಿನ ಮಹಿಳೆಯರಿಗೆ ಸರಿಸಮನಾಗಿ ಬದುಕುವಂತೆ ಮಾಡುವುದು ಎಲ್ಲ ಕರ್ತವ್ಯವಾಗಿದೆ.

# ಪಾಶ್ಚಾತ್ಯ ಚಲನಚಿತ್ರಗಳಲ್ಲಿ ಮಹಿಳಾ ಪ್ರಶ್ನೆಗಳು : 'ಭಾಷೆಯಲ್ಲದ ಭಾಷೆಯಲ್ಲಿ...', 'ತೆರೆ ಕೋಟಿ ಕಡಲೊಂದು...' ಚಿತ್ರಗಳನ್ನು ಅನುಲಕ್ಷಿಸಿ

ಸುಕನ್ಯಾ ಕಣಾರಳ್ಳಿ

## ಭಾಷೆಯಿಲ್ಲದ ಭಾಷೆಯಲ್ಲಿ

ಆಕೆ ಒಬ್ಬೊಂಟಿ ಹೆಣ್ಣು. ಗಂಡನನ್ನು ನಾಲ್ಕು ವರ್ಷಗಳ ಹಿಂದೆ ಸೈನಿಕ-ಜನರು ಹೊತ್ತು ಒಯ್ದಿದ್ದರು. ಸುತ್ತಲೂ ರಣಗುಡುತ್ತಿರುವ ಎರಡನೇ ಮಹಾಯುದ್ಧ. ಲಾಪ್ ಪ್ರಾಂತದ ಕೋಲ ದ್ವೀಪದಲ್ಲಿ ಬದುಕುತ್ತಿರುವ ಈ ಹೆಣ್ಣು ಸಾಮಿ ಬುಡಕಟ್ಟಿಗೆ ಸೇರಿದವಳು. ಒಂದು ನಾಯಿ ಮತ್ತು ಒಂದೆರಡು ಜಿಂಕೆಗಳು ಇವಳ ಜೊತೆಗಾರರು. ಆಗಾಗ್ಗೆ ತಲೆಯ ಮೇಲೆ ಹದ್ದುಗಳಂತೆ ಹಾರಡುವ ವಿಮಾನಗಳು. ರಕ್ತಪಾತ ಮತ್ತು ಬರ್ಬರತೆಯನ್ನೂ ಕಣ್ಣೆದುರಿಗೇ ಆಗಾಗ್ಗೆ ನೋಡಿದ್ದವಳು. ಆದರೂ ಬದುಕು ಸಾಗುತ್ತಿತ್ತು. ತೊರೆಯೊಂದರ ತೀರದಲ್ಲಿ ಗುಡಿಸಲೊಂದನ್ನು ಕಟ್ಟಿಕೊಂಡು, ತಾನೇ ಕಟ್ಟಿ ನಿಲ್ಲಿಸಿದ್ದ ಬಿದಿರಿನ ಬಲೆಯಲ್ಲಿ ಬಿದ್ದ ಮೀನುಗಳನ್ನು ಹೆಕ್ಕುತ್ತಾ, ಜಿಂಕೆ ಸಾಕಾಣಿಕೆಯಲ್ಲಿ ಜನ್ಮ ಹೊರೆಯುತ್ತಾ ಒಂಟಿ ಬಾಳಿನ ದಿನಗಳನ್ನು ಕಳೆಯುತ್ತಾ ಬದುಕಿರುವ ಹೆಣ್ಣು.

ಆಕೆಯ ಹೆಸರು ಅನ್ನಿ.

ಸ್ಟಾಕ್ ಹೋಮಿನ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ಫಿನ್ನಿಶ್ ತರುಣನೊಬ್ಬನನ್ನು ಕಡ್ಡಾಯವಾಗಿ ಸೈನ್ಯದ ಸೇವೆಗೆ ನಿಯಮಿಸಲಾಗಿತ್ತು. 'ಹೇಡಿತನ'ದ ಆಪಾದನೆಯ ಮೇಲೆ ಇವನ ಕಾಲಿಗೆ ಸರಪಳಿ ಬಿಗಿದು ಅದರ ತುದಿಯನ್ನು ಬಂಡೆಗಲ್ಲಿನ ಕಬ್ಬಿಣದ ಗೂಟವೊಂದಕ್ಕೆ ಜಡಿದು, ಸಾವನ್ನೆದುರು ನೋಡುತ್ತಾ ಅಸಹಾಯನಾಗಿ ಕೂತಿರುವ ಶಿಕ್ಷೆಯನ್ನು ಕೊಟ್ಟು ಅವನ ಸಹಚರರು ಅಲ್ಲಿಂದ ಕಾಲ್ತೆಗೆದಿದ್ದರು. ಆದರೆ ಅವನೇನು ಕೈ ಕಟ್ಟಿ ಕೂರಲಿಲ್ಲ. ಅವರು ಕಣ್ಣಿಂದ ಮರೆಯಾಗಿದ್ದೇ ತಡ, ತನ್ನ ಹತ್ತಿರ ಮತ್ತು ಸುತ್ತಮುತ್ತ ಇದ್ದ ಪ್ರತಿಯೊಂದೂ ವಸ್ತುವನ್ನು ಬಳಸಿ ತನ್ನನ್ನು ಬಿಗಿದಿದ್ದ ಸರಪಳಿಯನ್ನು ಗೂಟದಿಂದ ಕಿತ್ತು, ಸಾವಿಗೆ ಸವಾಲೆಸೆಯುವಲ್ಲಿ ಯಶಸ್ವಿಯಾದ. ಒಣಗಿ ಒಪ್ಪಟೆಯಾದ ಗಿಡ, ಎಲೆ, ಕಟ್ಟಿಗೆ, ಬುಲೆಟ್ಟುಗಳಲ್ಲಿದ್ದ ಗನ್ ಪೌಡರ್, ಪ್ರತಿಯೊಂದೂ ಈ 'ಹೇಡಿ'ಯ ಕೈಯಲ್ಲಿ ಸಾವಿನೆದುರು ಸೆಣೆಸುವ ಬಲವಾದ ಆಯುಧಗಳಾದವು. ಫಿನ್ನಿಶ್ ಜನರನ್ನು ಅಗೌರವದಿಂದ ಕಾಣುತ್ತಿದ್ದ

ಸ್ಟಾಕ್ ಹೋಮ್ ಸಹಪಾಠಿಗಳ ನಡುವೆ ಸ್ವಲ್ಪ 'ಸೀರಿಯಸ್ಸಾಗಿ' ಕಾಣಲು ಹಾಕಿಕೊಂಡಿದ್ದನಲ್ಲ ಕನ್ನಡಕ! ಅದೂ ಸಹ ಈ ಕ್ಷಣಗಳಲ್ಲಿ ಸಹಾಯಕ್ಕೆ ಬಂತು. ಸೂರ್ಯನ ಕಿರಣಗಳನ್ನು ಕೇಂದ್ರೀಕರಿಸಿ, ಒಣಗಿದ ಗಿಡ ಎಲೆಗಳನ್ನು ಸುಟ್ಟು, ಗನ್ ಪೌಡರನ್ನು ಸೇರಿಸಿ..... ಸಾವೂ ಸಹ ಇವನ ಅಸಾಧ್ಯ ತಾಳ್ಮೆಗೆ, ಬುದ್ಧಿವಂತಿಕೆಗೆ ಸೋತು ನಿಂತಿತು. ಉನ್ಮತ್ತ ಸಂತೋಷದಲ್ಲಿ ಕಿರುಚುತ್ತಾ ತನ್ನನ್ನು ಈ ಅವಸ್ಥೆಗೆ ತಳ್ಳಿದ್ದ ಆಫೀಸರನಿಗೆ ಸವಾಲೆಸೆದ : 'ನಿನ್ನ ಗೋರಿಯ ಮೇಲೆ ಉಚ್ಚೆ ಹುಯ್ಯಲು ನಾನಿನ್ನೂ ಬದುಕಿದ್ದೇನೋ, ಮಗನೆ!' ಸಾವಿನ ಹೊಸ್ತಿಲ ಹತ್ತಿರ ಹೋದವನಿಗೆ ಬದುಕಿನ ಮೇಲಿನ ಗೌರವ ಇಮ್ಮಡಿಸಿತ್ತು. ಬಂಡೆಗಲ್ಲಿನ ಗೂಟದಿಂದ ಕೆತ್ತ ಲೋಹದ ಮಣಭಾರದ ಸರಪಳಿ ಸಲೀಸಾಗಿ ನಡೆಯಲು ಬಿಡದೆ ಬಾಧಿಸುತ್ತಿತ್ತು. ಹೇಗಾದರೂ ಮಾಡಿ ಇದನ್ನು ತೊಲಗಿಸಬೇಕಲ್ಲಾ! ಕಾಲೆಳೆಯುತ್ತಾ ನಡೆದವನಿಗೆ ಕಂಡಿದ್ದು ಅನ್ನಿಯ ಗುಡಿಸಲು.

ಈ ಫಿನ್ನಿಶ್ ಯುವಕನ ಹೆಸರು ವೈಕೋ.

ಮಧ್ಯವಯಸ್ಕ ರಷ್ಯನ್ ಸೈನಿಕನೊಬ್ಬ ಯುದ್ಧಹಿಂಸೆಯ ಆಘಾತದಿಂದ ತಪ್ಪಿಸಿಕೊಳ್ಳಲು ಪದ್ಯಗಳನ್ನು ಬರೆಯುತ್ತಿದ್ದವ. ಯುದ್ಧದಲ್ಲಿ ಪದ್ಯವೆ? ಅಪಾರ್ಥ ಮಾಡಿಕೊಂಡ ಅಧಿಕಾರಿಗಳು ದ್ರೋಹ, ಸಂಚಿನ ಆಪಾದನೆಯನ್ನು ಹೊರೆಸಿ ವಿಚಾರಣೆ ನಡೆಸಿ ಮರಣದಂಡನೆ ಕೊಡುವಂತೆ ಆಜ್ಞಾಪಿಸಿ ಜೀಪಿನಲ್ಲಿ ಸಾಗಹಾಕಿದರು. ಯುದ್ಧ ಸಮಯದಲ್ಲಿ ಶತ್ರು ಯಾರು? ಮಿತ್ರ ಯಾರು? ತಮ್ಮವರೇ ಹಾಕಿದ ಬಾಂಬಿನ ಧಾಳಿಗೆ ತುತ್ತಾಗಿ ಜೀಪಿನಲ್ಲಿದ್ದವರೆಲ್ಲ ಪರಲೋಕ ಸೇರಿದರೆ ಮಾರಣಾಂತಿಕ ಪೆಟ್ಟಿನಲ್ಲಿ ಇವನು ಮೂರ್ಛೆ ತಪ್ಪಿ ಬಿದ್ದಿದ್ದ. ಅಕಸ್ಮತ್ತಾಗಿ ಕಂಡ ಅನ್ನಿ ಬೆಚ್ಚಿ ಬೀಳಲಿಲ್ಲ. ಕಣ್ಣಿಗೆ ಬಿದ್ದ ಶವಗಳನ್ನು ಕಷ್ಟವಾದರೂ ಹೂಳುವ ಕಾಯಕ ಮಾಡುತ್ತಿದ್ದವಳು ಅವಳು. ಇವನನ್ನು ಹೂಳುವಾಗ ನರಳುವ ಶಬ್ದ ಕೇಳಿ ಬೆಚ್ಚಿ ಬಿದ್ದು ಹೇಗೋ ಅಂತೂ ಗುಡಿಸಲಿನ ತನಕ ಎಳೆದು ತಂದಳು. ಸಾಯುತ್ತಾ ಬಿದ್ದವನನ್ನು ಬದುಕಿಗೆ ಮತ್ತೆ ಎಳೆದು ತರಬೇಕಿತ್ತು. 'ನಿನ್ನನ್ನು ನೋಯಿಸುವುದು ನನ್ನ ಉದ್ದೇಶವಲ್ಲ ಮುದ್ದೇ! ನಿನ್ನ ಪುಷ್ಟಿಯಲ್ಲಿ ಸಾಯುತ್ತಿರುವವನಿಗಾಗಿ ಒಂದಿಷ್ಟು ಮಾತ್ರ ಕೊಡು' ಎಂದು ಸಂತೈಸುತ್ತಾ ಜಿಂಕೆಯ ದೇಹಕ್ಕೆ ಸಣ್ಣ ಗೀಟಿನಗಲ ಗಾಯ ಮಾಡಿ ರಕ್ತ ತಂದು ಹಾಲಿನೊಂದಿಗೆ ಬೆರೆಸಿ, ಕಷಾಯದ ಜೊತೆ ಕುಡಿಸಿ ಉಪಚರಿಸಿ ಅಂತೂ ಆಚೆ ಹೋಗುತ್ತಿದ್ದವನನ್ನು ಈಚೆ ಎಳೆದು ಹಾಕಿದಳು.

ಮೂವರು ಅಪರಿಚಿತರು
ಮೂರು ಪರಸ್ಪರ ಅಪರಿಚಿತ ಭಾಷೆಗಳು
ಮೂರು ಬೇರೆ ಬೇರೆ ಸಾಂಸ್ಕೃತಿಕ ಲೋಕಗಳು

ಆಡುವ ಮಾತುಗಳೆಲ್ಲವೂ ಬಡಬಡಿಕೆ ಅಷ್ಟೇ. ಅವಳೇನು ಹೇಳಿದಳು ಎಂದು ಇವರಿಬ್ಬರಿಗೆ ತಿಳಿಯದು? ಇವರಿಬ್ಬರ ಭಾಷೆಗಳು ಬುಡಕಟ್ಟು ಹೆಣ್ಣಿಗೆ ಹೇಗೆ ಅರ್ಥವಾದೀತು? ಆದರೂ ಪ್ರತಿಯೊಬ್ಬರೂ ಬಡಬಡಿಸುತ್ತಲೇ ಇದ್ದರು.

ಅನ್ನಿ ಗಂಡಸಿನ ಸಹವಾಸವಿಲ್ಲದೇ ನಾಲ್ಕು ವರ್ಷ ತಳ್ಳಿದ್ದಳು. ಒಮ್ಮೆಲೇ ಇಬ್ಬರು ಗಂಡಸರು! ಎಂಥಾ ಅದೃಷ್ಟ! 'ನನ್ನ ಮನಸ್ಸಿನಾಸೆಯ ಪಿಸುಮಾತುಗಳನ್ನು ಸುತ್ತ ಇರುವ ಪ್ರೇತಗಳೇನಾದರೂ ಕೇಳಿಸಿಕೊಂಡವೋ ಹೇಗೆ? - - - ಅನ್ನಿ ಸಂಭ್ರಮಿಸಿದಳು. ಇದ್ದುದರಲ್ಲೇ ಅಡಿಗೆ ಮಾಡಿ, ಅವರ ಬಟ್ಟೆ ಒಗೆದು ಉಪಚರಿಸಿದಳು. 'ಹೋಗಿ, ಸ್ನಾನ ಮಾಡಿ. ಗಂಡಸರು ಹತ್ತಿರ ಬಂದರೇ ಯುದ್ಧದ ಮತ್ತು ಸಾವಿನ ಗಬ್ಬು ನಾತ!' ಎಂದು ಆಜ್ಞಾಪಿಸಿದಳು.

ಫಿನ್ನಿಶ್ ಯುವಕ ಇದ್ದ ಸಾಮಗ್ರಿಗಳಿಂದಲೇ ಒಂದು ಸ್ನಾನ ತೊಟ್ಟಿಯನ್ನು ನಿರ್ಮಿಸಿದ್ದ. ಗಂಡಸರಿಬ್ಬರೂ ಕೂತು ಸ್ನಾನ ಮಾಡುತ್ತಿದ್ದಾಗ ಅನ್ನಿ ಧಢಾರನೆ ಬಾಗಿಲು ತೆಗೆದು ಒಳ ನುಗ್ಗಿದಳು. ಏನಕ್ಕೂ ಅಲ್ಲ. ಚೆನ್ನಾಗಿ ಮೈ ತಿಕ್ಕಿಕೊಳ್ಳಲೆಂದು ಹುಲ್ಲಿನ ಹುರಿ ಕೊಡಲು. ಗಂಡಸರಿಬ್ಬರೂ ನಾಚಿ ತಲೆ ತಗ್ಗಿಸಿ ಕೂತರು. ತುಂಟತನದಿಂದ ಇಬ್ಬರನ್ನೂ ದೀರ್ಘವಾಗಿ ನೋಡುತ್ತಾ ಸಾಮಿ ಭಾಷೆಯ ಚುಟುಕವೊಂದನ್ನು ರಾಗವಾಗಿ ನುಡಿದಳು.

ಮೇಲೆ ಹಾರುತ್ತಿದ್ದ ಕಾಗೆ
ಜಿಂಕೆಗಳ ದಂಡು ಕೆಳಗೆ!
ಒಂದು.... ಎರಡು....ಮೂರು...
ಲೆಕ್ಕ ಹಾಕಿದ್ದೇ ಹಾಕಿದ್ದು.....ಬೆಳಗಿನ ತನಕ.
ಓಹ್! ನೀವಿಷ್ಟು ಮಂದಿ!
ಮಾಡಲೇನು ಸಾಧ್ಯ ನಾನೊಬ್ಬ?
ಕಾಗುಟ್ಟಿ ಕಾಗೆ... ಜಾರಿತ್ತು ನಿದ್ದೆಗೆ

ಆದರೆ ಅನ್ನಿ ಕಾಗೆಯಲ್ಲ. ಕಟ್ಟುಮಸ್ತಾಗಿ ಫಿನ್ನಿಶ್ ಯುವಕನನ್ನು ಹೆಚ್ಚು ಕಮ್ಮಿ ಎಳೆದುಕೊಂಡೇ ಹೋದಾಗ ರಷ್ಯನ್ ಮಧ್ಯವಯಸ್ಕನಿಗೆ ಇನ್ನೂ ಕಿರಿಕಿರಿ ಹೆಚ್ಚಿತ್ತು. ಚಳಿಯಲ್ಲಿ ಹೊರಗಡೆ ಮಲಗಬೇಕಾದ ದುರಾದೃಷ್ಟ ಒಂದು ಕಡೆಯಾದರೆ ರಾತ್ರಿಯಿಡೀ ಗುಡಿಸಲಿನಿಂದ ಕೇಳಿಬರುತ್ತಿದ್ದ ಮೋಹದ ಮೊರೆತ ಇನ್ನೊಂದು ಕಡೆ. 'ಫ್ಯಾಸಿಸ್ಟ್ ನನ್ನ ಮಗ!' ಎಂದು ಯುವಕನಿಗೆ ಹಿಡಿಹಿಡಿ ಶಾಪ ಹಾಕುತ್ತಲೇ ನಿದ್ದೆಗೆ ಜಾರಿದ ರಷ್ಯನ್ ಮಧ್ಯವಯಸ್ಕನಿಗೆ ತನ್ನಲ್ಲಿ ಅಡಗಿರುವ ಫ್ಯಾಸಿಸ್ಟನ ಅರಿವಿರುವುದಿಲ್ಲ.

ಪಾಪ ಫಿನ್ನಿಶ್ ಯುವಕ ಮೊದಲ ದಿನದಿಂದ ಬಡಬಡಿಸುತ್ತಲೇ ಇದ್ದ. 'ನಾನು ಜರ್ಮನ್ ಫ್ಯಾಸಿಸ್ಟ್ ಅಲ್ಲ. ಅನಿವಾರ್ಯ ಕಾರಣಗಳಿಂದ ನಾನು ಆ ಉದ್ದ ನಿಲುವಂಗಿ ಹಾಕಬೇಕಾಯಿತು'. ರಷ್ಯನ್ನಿಗೆ ಅರ್ಥವಾದರೆ ತಾನೇ! ಅರ್ಥವಾಗುವ ಪದಗಳಿಗೆ ಹುಡುಕೀ ಹುಡುಕೀ ಪಾಪ ಫಿನ್ನಿಶ್ ಸೋತ. 'ಡೆಮಾಕ್ರಸಿ! ಲಿಯೋ ಟಾಲ್ಸ್ಟಾಯ್ ಗೊತ್ತಿಲ್ಲಾ? ವಾರ್ ಅಂಡ್ ಪೀಸ್! ಅರ್ನೆಸ್ಟ್ ಹೆಮ್ಮಿಂಗ್ವೇ? ಫೇರ್ವೆಲ್ ಟು ಆರ್ಮ್ಸ್ ದೊಸ್ತೊವೆಸ್ಕಿ ಗೊತ್ತಿಲ್ಲಾ?' ಊಹೂಂ... ಮಧ್ಯವಯಸ್ಕನಿಗೆ ಸಂಶಯದ ಜೊತೆ ಮತ್ಸರ ಕೂಡಾ! ಏನೇನೋ ಸಂಚು ಮಾಡಿ ಕೊಲ್ಲಲ್ಲು ಹೋದಾಗೆಲ್ಲಾ ಯುವಕ ಅವನನ್ನು ಜಪ್ಪಿಸಿ ಕೂರಿಸಿದರೂ ಬಗೆಬಗೆಯಾಗಿ ಅವನಲ್ಲಿ ಬೇಡಿಕೊಳ್ಳುತ್ತಾನೆ. 'ನಾನು ಯುದ್ಧ ಮಾಡಲಾರೆ.. ನನ್ನ ಯುದ್ಧ

ಮುಗಿಯಿತು. ನಿನಗ್ಯಾಕೆ ಅರ್ಥ ಆಗ್ತಾ ಇಲ್ಲ? ನನಗೆ ಕೊಲ್ಲಲು ಆಗುವುದಿಲ್ಲ. ನನ್ನನ್ನು ಬೇರೆಯವರು ಕೊಲ್ಲಲೂ ಬಿಡಲಾರೆ. ನಾನು ಬದುಕಿಗೆ ಹಿಂತಿರುಗಿ ಹೋಗಬೇಕು. ಅನ್ನಿಯ ಬಗ್ಗೆ ಇನ್ನಿಲ್ಲದಂತೆ ಕರುಣೆ, ಕೃತಜ್ಞತೆ. 'ಆ ಹೆಂಗಸು ವರ್ಷಗಟ್ಟಲೆ ಕಿಂಚಿತ್ತೂ ಪ್ರೀತಿಯಿಲ್ಲದೆ ಬಾಯಾರಿದವಳು. ಅವಳಿಗೆ ಇಷ್ಟೂ ಕೊಡಲಾರೆನೆ? ಎಂದು ತನ್ನನ್ನು ಕೊಲ್ಲಲೆತ್ನಿಸಿದ ಮಧ್ಯವಯಸ್ಕನಿಗೆ ಕೇಳುತ್ತಾನೆ. ಮತ್ತೆ ಅದೇ ಒಬ್ಬರ ಮಾತು ಇನ್ನೊಬ್ಬರಿಗೆ ಬಡಬಡಿಕೆ ಅಷ್ಟೇ.

ಅನ್ನಿಗೆ ಈ ಹಣಾಹಣಿಯ ಬಗ್ಗೆ ತಾಳ್ಮೆಯೂ ಇಲ್ಲ, ಪುರುಸೊತ್ತೂ ಇಲ್ಲ. 'ಸಮಯ ಹೇಗೆ ಕಳೆಯಬೇಕೆಂದು ಗೊತ್ತಿಲ್ಲದೆ ಗುದ್ದಾಡುತ್ತಿದ್ದೀರಾ ಗಡವಾಗಳ? ನನ್ನ ಕೆಲಸದಲ್ಲಿ ಸಹಾಯವನ್ನಾದರೂ ಮಾಡಬಾರದ?' ರೇಗಿದ ಅನ್ನಿ ಗದರಿಸುತ್ತಾಳೆ. 'ನಿಮಗೆ ಗೊತ್ತಿರುವುದು ಕೊಲ್ಲುವುದೊಂದೇ. ಆದರೆ ಕೊಲ್ಲುವುದು ಕೆಲಸ ಅಲ್ಲ. ಬೇರೆಯವರನ್ನು ಕೊಂದರೆ ನಮ್ಮ ಬದುಕು ದೀರ್ಘವಾಗಿರುತ್ತದೆ ಅಂತ ಅಂದುಕೊಳ್ಳುವುದು ದೊಡ್ಡವರ ಬಾಲಿಶತನ'-- ಸರಳವಾದ ಮಾತುಗಳಲ್ಲಿ ಯುದ್ಧವೆಂಬ ಗೋಜಲನ್ನೇ ಧಿಕ್ಕರಿಸುತ್ತಾಳೆ. 'ಒಬ್ಬರಿಗೊಬ್ಬರು ಗುದ್ದಾಡಿ ಸಾಯಬೇಡಿ. ನನಗೆ ಹೂಳಲು ಸಮಯವಿಲ್ಲ' - ಅನ್ನಿಗೆ ಚಮತ್ಕಾರದ ಮಾತುಗಳು ಬಾರವು.

ದಿನಗಳು ಕಳೆಯುತ್ತವೆ. ಮಧ್ಯವಯಸ್ಕನ ಸಂಶಯದ ಕಿಡಿ ಒಂದು ದಿನ ಭುಗಿಲ್ಲನೆ ಹತ್ತಿಕೊಂಡು ಯುವಕನ ಬಲಿ ತೆಗೆದುಕೊಂಡು ಬಿಡುತ್ತದೆ. ವ್ಯಂಗ್ಯವೆಂದರೆ ಹೊರಗಿನ ಯುದ್ಧ ಮುಗಿಯಿತೆಂದು ಸಂಭ್ರಮದಲ್ಲಿದ್ದ ಫಿನ್ನಿಶ್ ಯುವಕ ಆ ಸಂತಸದ ಗಳಿಗೆಯಲ್ಲಿಯೇ ಮಧ್ಯವಯಸ್ಕ ರಷ್ಯನ್ನಿನ ಅಪಾರ್ಥಕ್ಕೆ ಬಲಿಯಾಗುತ್ತಾನೆ. ಅನ್ನಿಗೆ ಈ ವಿದ್ಯಮಾನಗಳು ತಿಳಿಯದು. ಯಾರೋ ವೈರಿಯಿಂದ ಪೆಟ್ಟು ತಿಂದಿರುವನೆಂದು ರಾತ್ರಿಯಿಡೀ ತಮ್ಮಟೆ ಬಡಿಯುತ್ತಾ ನಾಯಿಯಂತೆ ಬೊಗಳುತ್ತಾ ಯುವಕನನ್ನು ಸಾವಿನ ಹಾದಿಯಿಂದ ಹಿಂದೆ ತರುವಲ್ಲಿ ಯಶಸ್ವಿಯಾಗುತ್ತಾಳೆ. ಸಾಮಿ ಬುಡಕಟ್ಟಿನವರ ಸಂಪ್ರದಾಯ ಪಾಲಿಸುತ್ತಾಳೆ. ಯುವಕನ ಮುಖದ ಮೇಲೆ ಬದುಕಿನ ಕಳೆ ಕಂಡು ಸಮಾಧಾನದ ನಿಟ್ಟುಸಿರು ಬಿಟ್ಟು ಸೋತು ಸೊಪ್ಪಾಗಿ ನೆಲಕ್ಕೆ ಒರಗುತ್ತಾಳೆ. ಜೀವವೆಲ್ಲಾ ಬತ್ತಿ ಹೋದಂತೆ ಒರಗಿದ್ದ ಮಧ್ಯವಯಸ್ಕನನ್ನು ತನ್ನ ಹಾಸಿಗೆಗೆ ಆಹ್ವಾನಿಸುತ್ತಾಳೆ. ಕರೆವ ಕಣ್ಣುಗಳಲ್ಲಿ ಮಗುವಿನ ಮುಗ್ಧತನ ತಾಯಿಯ ವಾತ್ಸಲ್ಯ ಎರಡೂ ಇರುತ್ತದೆ.

ಒಂದು ದಿನ ಇಬ್ಬರೂ ಗಂಡಸರು ಹೊರಟು ನಿಲ್ಲುತ್ತಾರೆ. ದಾರಿಯಲ್ಲಿ ತಿನ್ನಲು ಬುತ್ತಿ ಕಟ್ಟಿ, ಚಳಿಯಿಂದ ರಕ್ಷಿಸಿಕೊಳ್ಳಲು ಬೆಚ್ಚಗಿನ ಬಟ್ಟೆ ಹೊಲೆದುಕೊಟ್ಟ ಅನ್ನಿ ತನ್ನ ಮುಖವನ್ನೇ ನೋಡುತ್ತಾ ನಿಂತಿದ್ದವರನ್ನು ಕಂಡು ರೇಗುತ್ತಾಳೆ : 'ಏನು? ಬೆಪ್ಪರ ಹಾಗೆ ನೋಡುತಾ ನಿಂತಿರಿ? ಹೋಗಿ.....ನನಗೆ ಮೈ ಮುರಿಯುವಷ್ಟು ಕೆಲಸ ಇದೆ. ನಷ್ಟ ನನಗಲ್ಲ...' ಅಡಿಯಿಡುತ್ತಾ ಸಾಗಿದ ಗಂಡಸರು 'ನಿಲ್ಲಿ!' ಎಂಬ ಕರೆ ಹಿಂದಿನಿಂದ ಬಂದೀತೇನೋ ಎಂದು ಕಾಯುತ್ತಾರೆ. ಬಂದರೂ ತಾವು ನಿಲ್ಲುವವರಲ್ಲವೆಂದು ಅವರಿಗೂ ಗೊತ್ತು.

ವರುಷಗಳ ನಂತರ ತನ್ನ ಅವಳಿ ಮಕ್ಕಳನ್ನು ಎಲ್ಲೆಲ್ಲೂ ಹೂವು ಚೆಲ್ಲಿದ ನೆಲದ ಮೇಲೆ ಕೂರಿಸಿಕೊಂಡು ಅನ್ನಿ ತನ್ನ ಕಥೆ ಹೇಳುತ್ತಾಳೆ. 'ಅವರಿಬ್ಬರೂ ಒಳ್ಳೆಯವರೇ. ದರಿದ್ರ ಯುದ್ಧ ಅವರಿಂದ ಮಾಡಬಾರದ್ದೆಲ್ಲಾ ಮಾಡಿಸಿತು. ಇಲ್ಲದಿದ್ದರೆ ಅವರಿಬ್ಬರೂ ಒಳ್ಳೆಯ ಬೇಟೆಗಾರರಾಗಿರುತ್ತಿದ್ದರು. ಯಾರೋ ವೈರಿ ಒಬ್ಬನನ್ನು ಘಾಯಗೊಳಿಸಿದ. ಇನ್ನೊಬ್ಬ ಅವನನ್ನು ಹೊತ್ತು ತಂದ. ಅವನನ್ನು ಸಾಯಲು ನಾನು ಬಿಡಲಿಲ್ಲ'. ಈ ಮಕ್ಕಳ ಹೆಸರುಗಳು ಆ ಇಬ್ಬರವೇ ಎಂದೂ ಸ್ಪಷ್ಟಪಡಿಸುತ್ತಾಳೆ.

೨೦೦೨ರಲ್ಲಿ ರಷ್ಯನ್ ಚಿತ್ರಸಂಸ್ಥೆಯೊಂದು ನಿರ್ಮಿಸಿದ 'ಕುಕುಷ್ಕಾ' ಹದಿನೈದಕ್ಕಿಂತ ಹೆಚ್ಚು ಪ್ರಶಸ್ತಿಗಳನ್ನು ಗಿಟ್ಟಿಸಿತು. ಪ್ರತ್ಯಕ್ಷ ಯುದ್ಧವನ್ನೇ ತೋರಿಸದೇ ಯುದ್ಧವನ್ನು ಕಟುವಾಗಿ ಟೀಕಿಸುವ, ಸ್ತ್ರೀತ್ವದ ಮೌಲ್ಯಗಳನ್ನು ಬಿಂಬಿಸುವ ಪರಿಣಾಮಕಾರಿ ಚಿತ್ರ ಎಂಬ ಹೆಗ್ಗಳಿಕೆಗೂ ಪಾತ್ರವಾಯಿತು. 'ಕುಕುಷ್ಕಾ' ಎಂದರೆ ರಷ್ಯನ್ ಭಾಷೆಯಲ್ಲಿ ಕೋಗಿಲೆ ಎಂದರ್ಥ. ಅನ್ನಿಯ ಮೂಲ ಸಾಮಿ ಹೆಸರು ಕೋಗಿಲೆ ಎಂಬ ಅರ್ಥವನ್ನು ಕೊಡುತ್ತದೆ. ಕೋಗಿಲೆ ಬೇರೆಯವರ ಗೂಡಿನಲ್ಲಿ ಮೊಟ್ಟೆಯಿಟ್ಟು ಹಾರಿ ಹೋಗುವ ಪರಪುಟ್ಟ. ಆದರೆ ಈ ಚಿತ್ರದ ಕೋಗಿಲೆ ಯುದ್ಧದಲ್ಲಿ ಬಸವಳಿದ, ಸಮಾಜದಿಂದ ತಿರಸ್ಕೃತವಾದ ಎರಡು ಜೀವಗಳಿಗೆ ಆಶ್ರಯವಿತ್ತದ್ದೂ ಅಲ್ಲದೆ ಸಾವಿನ ನೆಲದಿಂದ ಈಚೆ ತಂದವಳು. ಬದುಕೆಂದರೆ ಅವಳಿಗೆ ತಾದಾತ್ಮ್ಯದಿಂದ ದುಡಿಯುವುದು, ಉಸಿರು ಉಳಿಸಿಕೊಳ್ಳಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ಪ್ರಕೃತಿಯಿಂದ ಪಡೆದುಕೊಳ್ಳುವುದು, ಜೀವವನ್ನು ಮರುಸೃಷ್ಟಿಸುವುದು. ಯುದ್ಧವೆಂಬ ಉನ್ಮಾದದ ನಡುವೆಯೂ ತನ್ನ ಪಾಡಿಗೆ ಜೀವವನ್ನು ರಕ್ಷಿಸುವ ಕೆಲಸವನ್ನು ಪ್ರಾಮಾಣಿಕತೆ ಮತ್ತು ಪ್ರೀತಿಯಿಂದ ಮಾಡುತ್ತಿರುತ್ತಾಳೆ.

ಚಿತ್ರದುದ್ದಕ್ಕೂ ಈ ಮೂವರಲ್ಲಿ ಒಬ್ಬರಿಗೆ ಇನ್ನೊಬ್ಬರ ಮಾತು ಅರ್ಥವಾಗುವುದೇ ಇಲ್ಲ. ಈ ಬಡಬಡಿಕೆ ಕೆಲವೊಮ್ಮೆ ಅತ್ಯಂತ ಹಾಸ್ಯಮಯವಾಗಿರುತ್ತದೆ. ಅನ್ನಿ ಒಂದು ಸಲ 'ಅಣಬೆಗಳನ್ನು ತಿನ್ನಬೇಡವೋ. ತಿಂದರೆ ನಿನಗೆ ಹುಚ್ಚು ಹಿಡಿಯುವುದು ಖಂಡಿತ' ಎಂದು ರಷ್ಯನ್ ಮಧ್ಯವಯಸ್ಕನಿಗೆ ಹೇಳಿದರೆ ಅವನು 'ಹೌದು, ಅಣಬೆ ಅಡಿಗೆ ಮಾಡಿದ್ದೇನೆ. ಇಗೋ, ತಿನ್ನೋಣವಾ?' ಅಂದಾಗ ಅನ್ನಿ ತಲೆ ಚಚ್ಚಿಕೊಳ್ಳುತ್ತಾಳೆ. 'ನಾನು ತಯಾರಿಸಿದ ಸ್ನಾನದ ತೊಟ್ಟಿ ಅಷ್ಟೇನೂ ಚೆನ್ನಾಗಿಲ್ಲದಿದ್ದರೂ ಸದ್ಯಕ್ಕೆ ಸಾಕಾಗುತ್ತಲ್ಲಾ?' ಎಂದು ಫಿನ್ನಿಶ್ ಯುವಕ ಕ್ಷಮೆ ಕೇಳುವವನಂತೆ ಹೇಳುತ್ತಿದ್ದರೆ ರಷ್ಯನ್ ಮಧ್ಯವಯಸ್ಕ ತಾನು ಮಾಡಿಕೊಂಡ ಎರಡು ಮದುವೆಗಳೂ ಎಗರಿಬಿದ್ದು ಹೋದವು ಎಂದು ಪ್ರಲಾಪಿಸುತ್ತಿರುತ್ತಾನೆ.

ಮಾತಾಡುವುದು ಮುಖ್ಯ, ಅರ್ಥವಾಗದಿದ್ದರೇನು ಎಂಬ ದರ್ದಿನಲ್ಲಿ ಈ ಪಾತ್ರಗಳು ಬಡಬಡಿಸುತ್ತಿವೆಯೇನೋ ಎಂಬಂತಿದೆ. 'ಕುಕುಷ್ಕಾ'ದ ನಿರ್ದೇಶಕ ಸಂದರ್ಶನವೊಂದರಲ್ಲಿ ಹೇಳುತ್ತಾನೆ: 'ಯುದ್ಧಗಳು ಸಂಭವಿಸುವುದು ಅಪಾರ್ಥಗಳಿಂದ. ಬೇರೆ ಬೇರೆ ಭಾಷೆಗಳನ್ನು ಮಾತಾಡುವುದರಿಂದ ಅಲ್ಲ. ಅವೆರಡೂ ಬೇರೆ ಬೇರೆಯೇ'.

'ಈ ಯುದ್ಧವೆಂಬ ಘೋರದೆಡೆ ಹಿಂದೆ ತಿರುಗಿ ನೋಡಿದಾಗಲಾದರೂ ಮನುಷ್ಯರಿಗೆ ತಾವು ಮಾಡಿದ ತಪ್ಪುಗಳು ಅರ್ಥವಾದೀತೆ? ಅಥವಾ ಅದರ ಬಗ್ಗೆಯೂ ತಲೆ

ಕೆಡಿಸಿಕೊಳ್ಳುತ್ತಾರೋ ಇಲ್ಲವೋ! ಮನುಷ್ಯನೆಂಬುವವ ಊಹೆಗೆ ಮೀರಿದ ಅನರ್ಥಗಳನ್ನು ಸೃಷ್ಟಿಸಬಲ್ಲ ಸಾಮರ್ಥವಿರುವವನು. ದಾಸ್ತೋವೆಸ್ಕಿಯೇ ಹಾಗಂತ ಹೇಳಿದ್ದು. ಬದುಕೆನ್ನುವುದು ಈ ಭೂಮಿಯ ಮೇಲಿನ ಎಂಥಾ ಅದ್ಭುತ ಅಲ್ಲವಾ?' - - ಬಡಬಡಿಸುತ್ತಲೇ ಇದ್ದ ಫಿನ್ನಿಶ್ ಯುವಕ ಒಂದು ಹಂತದಲ್ಲಿ ಸೋತು ಕೈ ಚೆಲ್ಲುತ್ತಾನೆ. 'ನಾನು ನಿನಗೆ ಅರ್ಥವಾಗುವುದಿಲ್ಲ. ನೀನು ನನಗೆ ಕೊನೆಗೂ ಅರ್ಥವಾಗುವುದಿಲ್ಲವೇನೋ!' ಅನ್ನಿ ಅವರಿಬ್ಬರ ಮಧ್ಯೆ ನಿಂತು ಪ್ರೀತಿಯಿಂದ, ಸಹನೆಯಿಂದ, ವಾತ್ಸಲ್ಯದಿಂದ, ಕೆಲವೊಮ್ಮೆ ಗದರಿಸಿ ಬದುಕು ಇರುವುದು ಬದುಕಲಿಕ್ಕೆ, ಪ್ರೀತಿಸಲಿಕ್ಕೆ, ಸೃಷ್ಟಿಸಲಿಕ್ಕೆ ಎನ್ನುವುದನ್ನು ಹೇಳಿಕೊಡುತ್ತಾಳೆ. ಆಯ್ಕೆಯ ಹಕ್ಕು, ತಾಯ್ತನದ ಹಕ್ಕು, ಬದುಕುವ ಹಕ್ಕುಗಳ ಪ್ರತಿರೂಪವಾಗಿ ನಿಲ್ಲುತ್ತಾಳೆ.

**ತೆರೆ ಕೋಟಿ ಕಡಲೊಂದು**



ಹಲವರು ಈ ಕಥನವನ್ನು 'ಎಲ್ಲ ಕಾಲಕ್ಕೂ ಸಲ್ಲುವ ದಂತಕತೆ'ಯೆಂದು ಶ್ಲಾಘಿಸಿದ್ದರೆ ಕೆಲವರು 'ನಕ್ಷತ್ರಗಳೆಡೆ ಕೈ ಚಾಚುತ್ತಾ ಬಾಲ್ಕನಿಯಲ್ಲೇ ಉಳಿದುಬಿಡುವ' ಪ್ರಯತ್ನವೆಂದು ಟೀಕಿಸಿದ್ದಾರೆ. ಮತ್ತೆ ಕೆಲವರು ಇದನ್ನು ಪುರುಷ ನಿರ್ಮಿತ ಕಟುವಾದ ಸಂಪ್ರದಾಯಗಳನ್ನು ಮೀರಿ ನಿಲ್ಲುವ ಸ್ತ್ರೀಶಕ್ತಿಯ ಸ್ತುತಿಯೆಂದು ಕರೆದರೆ ಇನ್ನು ಕೆಲವರು ಲ್ಯಾಟಿನ್ ಅಮೆರಿಕನ್ 'ಮ್ಯಾಜಿಕಲ್ ರಿಯಲಿಸಮ್' ಕಥಾನಕ ತಂತ್ರಕ್ಕೆ ಮಾಡಿರುವ ಉತ್ತರ ಯುರೋಪಿಯನ್ ಘಾತ ಎಂದೂ ಜರೆದಿದ್ದಾರೆ. ಅದೇನೇ ಇರಲಿ, 'ಆಂಟೊನಿಯಾಸ್ ಲೈನ್' (ಆಂಟೋನಿಯಾಳ ಪರಂಪರೆ) ಜೀವಪರಸ್ತ್ರೀ ಮೌಲ್ಯಗಳನ್ನು ಎತ್ತಿ ಹಿಡಿಯುವ ಒಂದು ಚಲನಚಿತ್ರ. ಜೀವವಿರುವ ಎಲ್ಲದರ ಬಗ್ಗೆ ಸಂಭ್ರಮಿಸುವ ಈ ಕಥನದ ಅತ್ಯಂತ ಸುಟಿಯಾಗಿ ಹೇಳುತ್ತಾ ಹೋಗುವ ಧಾಟಿ ನೋಡುಗರಿಗೆ ಆಪ್ತವೆನ್ನಿಸಿಬಿಡುತ್ತದೆ.

ಅಂಥಹಾ ಚಿತ್ರಕ್ಕೆ ಆಸ್ಕರ್ ಪ್ರಶಸ್ತಿ ಸಿಕ್ಕಿದ್ದು ಆಕಸ್ಮಿಕವೂ ಅಲ್ಲ, ಆಶ್ಚರ್ಯವೂ ಅಲ್ಲ. ಎರಡನೇ ಮಹಾಯುದ್ಧ ಮುಗಿದ ತಕ್ಷಣದ ಕಾಲ. ನಲ್ವತ್ತರ ಆಸುಪಾಸಿನ ಕಟ್ಟುಮಸ್ತಾದ ಹೆಂಗಸೊಬ್ಬಳು ತನ್ನ ನಿದ್ದೆಗಣ್ಣಿನ ಹದಿವಯಸ್ಸಿನ ಮಗಳೊಂದಿಗೆ ಇಪ್ಪತ್ತು ವರ್ಷಗಳ ನಂತರ ನೆದರ್ಲ್ಯಾಂಡಿನ ತನ್ನ ಹುಟ್ಟೂರಾದ ಹಳ್ಳಿಯೊಂದಕ್ಕೆ ಹಿಂತಿರುಗುತ್ತಾಳೆ. ನೋಡುಗರಿಗೆ

ಚಕಚಕನೆ ಪಳ್ಳಿಯ ಪತ್ತಾರು ಪಾತ್ರಗಳ ಪರಿಚಯವಾಗುತ್ತದೆ. ಜೋಲು ತುಟಿಯ ಆ ಪಳ್ಳಿಪುಂಬ, ಹುಣ್ಣಿಮೆ ಚಂದ್ರನೆಡೆ ನೋಡುತ್ತಾ ಊಳಿಡುವ 'ಹುಚ್ಚಿಮಡೋನಾ', ಬೀಜದ ಹೋರಿಗಳಂತೆ ಕಾಣುವ ಮಕ್ಕಳ ತಂದೆ ಮುದುಕ ಜಮೀನ್ದಾರ, ತನ್ನ ಅಣ್ಣಂದಿರಿಂದಲೇ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಿರುವ ಅವನ ಮಗಳು 'ಡೀಡೀ', ಸದಾ ಹತಾಶೆಯ ಮುಖ ಹೊತ್ತ ನೀಟ್ಶೆಯಂಥ ತತ್ವಜ್ಞಾನಿ 'ವಕ್ರ ಬೆರಳಿನವ'.... ಹೀಗೆ ಹತ್ತು ಹಲವಾರು. 'ಸ್ವಾತಂತ್ರ್ಯವನ್ನು ನೀಡಲು ಬರುತ್ತಿರುವವರಿಗೆ ಸ್ವಾಗತ' ಎಂದು ಎರಡನೆ ಮಹಾಯುದ್ಧದ ಸಮಯದಲ್ಲಿ ಮಿತ್ರ ಪಡೆಯವರಿಗೆ ಹಾಕಿದ್ದ ಫಲಕಗಳು ಇನ್ನೂ ರಾರಾಜಿಸುತ್ತಿರುವಂತೆಯೇ ಅಂಟೋನಿಯಾ ಊರಿಗೆ ಕಾಲಿಡುತ್ತಾಳೆ. ಅವಳು ಬಂದಿರುವುದು ಇನ್ನೇನು ಸಾಯುತ್ತಿರುವ ತನ್ನ ತಾಯಿಯನ್ನು ಮಣ್ಣುಮಾಡಲು. ಸತ್ತಿರುವ ಕಚ್ಚೆಹರುಕ ಗಂಡನನ್ನು 'ಆ ಹೊಲಸು ನನ್ನ ಮಗ, ಆಷಾಡಭೂತಿ...' ಇತ್ಯಾದಿ ಅವಾಚ್ಯ ಶಬ್ದಗಳಿಂದ ಕೊನೆಯ ಉಸಿರು ಇರುವ ವರೆಗೂ ಬೈಯುತ್ತ ಅಂಟೋನಿಯಾ ತಾಯಿ ಕೊನೆ ಉಸಿರೆಳೆಯುತ್ತಾಳೆ.

ಆಂಟೋನಿಯಾ ನಾಲ್ಕು ದಿನವಿದ್ದು ಹೋಗಲು ಬಂದವಳಲ್ಲ. ಅಲ್ಲಿಯೇ ತಳವೂರಲು ಬಂದವಳು. ತನ್ನ ಜಮೀನನ್ನು ಮತ್ತೆ ಹಿಡಿತಕ್ಕೆ ತೆಗೆದುಕೊಂಡು, ಉತ್ತುತ್ತಾ, ಬಿತ್ತುತ್ತಾ ಇರುವಾಗ ಮಗಳು ಚಿತ್ರಕಲೆಯಲ್ಲಿ ಪರಿಣಿತಳಾಗಲು ಹತ್ತಿರದ ಪಟ್ಟಣವೊಂದಕ್ಕೆ ಹೋಗಿ ಬರುತ್ತಿರುತ್ತಾಳೆ. ಹೆಂಡತಿಯನ್ನು ಕಳೆದುಕೊಂಡಿರುವ ಮಧ್ಯವಯಸ್ಸು ದಾಟಿದ ರೈತ ಬಾಸ್ ಐದು ಗಂಡುಮಕ್ಕಳ ತಂದೆ. ಯಾವ್ಯಾವ ಕಾರಣಗಳಿಗೋ ಆಂಟೋನಿಯಾಳಿಂದ ಆಕರ್ಷಿತ ನಾಗಿ ಒಂದು ದಿನ ಬಂದು ಉಗುಳು ನುಂಗುತ್ತಾ 'ನನ್ನ ಮಕ್ಕಳಿಗೆ ತಾಯಿಯೊಬ್ಬಳು ಬೇಕು' ಎಂದು ಹೇಳುತ್ತಾನೆ. ಆಂಟೋನಿಯಾ ತುಂಟತನದಿಂದ 'ಆದರೆ ನನಗೇನೂ ಮಕ್ಕಳು ಬೇಕಿಲ್ಲವಲ್ಲ!' ಎನ್ನುತ್ತಾಳೆ. ಮತ್ತೆ ಗಂಡ? ಅವನೂ ಬೇಡವಾ? 'ಗಂಡನಾ? ಯಾಕೆ?' ತಣ್ಣಗೆ ಕೇಳುತ್ತಾಳೆ ಆಂಟೋನಿಯಾ. 'ಓ! ಹೌದು! ಗಂಡಸೊಬ್ಬನ ಅವಶ್ಯಕತೆಯೋನೋ ಇದೆ. ಕೆಲವು ಕೆಲಸಗಳನ್ನು ನಿಭಾಯಿಸುವುದಕ್ಕಾಗುತ್ತಿಲ್ಲ. ನೀನು ಬಂದು ಸಹಾಯ ಮಾಡಿದರೆ ಉಪಕಾರವಾಗುತ್ತದೆ' ಎನ್ನುತ್ತಾಳೆ. 'ಅದರಿಂದ ನನಗೇನು ಸಿಕ್ಕುತ್ತದೆ?' - - ಬಾಸ್ ಕೇಳುತ್ತಾನೆ. 'ಒಂದು ಕಪ್ ಕಾಫಿ, ತಾಜಾ ತಾಜಾ ತರಕಾರಿ, ಬೇಯಿಸಿದ ಮೊಟ್ಟೆ.... ಇತ್ಯಾದಿ?' 'ಥ್ಯಾಂಕ್ಸ್. ಅದೆಲ್ಲವೂ ನನ್ನ ಬಳಿಯೇ ಇದೆ.' - - ಬಾಸ್ ಮುಖಭಂಗವಾದವನಂತೆ ಹಿಂತಿರುಗುತ್ತಾನೆ. ಆದರೆ ಅವನಿಗೆ ಕೋಪವೇನೂ ಇಲ್ಲ. ಇಲ್ಲದಿದ್ದರೆ ತನ್ನ ಐದೂ ಮಕ್ಕಳ ಜೊತೆ ಪದೇ ಪದೇ ಆಂಟೋನಿಯಾಳ ಮನೆಯ ಹೊರಗಿನ ಡೈನಿಂಗ್ ಟೇಬಲ್ ಸುತ್ತ ಕೂತು ಒಟ್ಟಿಗೆ ಊಟ ಮಾಡುತ್ತಿದ್ದನೆ?

ಒಂದು ದಿನ ಅಮ್ಮ ಮಗಳು ಕಷ್ಟಪಟ್ಟು ಬೇಲಿಯ ತಂತಿಯನ್ನು ಬಿಗಿಯುವಾಗ ಮಗಳು ತನಗೊಂದು ಮಗುಬೇಕೆಂದು ಅತ್ಯಂತ ಸಹಜ ಧ್ವನಿಯಲ್ಲಿ ಹೇಳುತ್ತಾಳೆ. ಆಂಟೋನಿಯಾ ಒಂದು ನಿಮಿಷ ತಬ್ಬಿಬ್ಬಾದರೂ ಸಾವರಿಸಿಕೊಂಡು 'ಏನು ಹೇಳ್ತಾ ಇದೀಯಾ?' ಅಂತ ಕೇಳಿದರೆ ಮಗಳು ಮತ್ತೆ 'ಏನು ಹೇಳಿದೆ? ನನಗೊಂದು ಮಗು ಬೇಕು

ಅಂತ ಹೇಳಿದೆ ಅಷ್ಟೆ!' ಎನ್ನುತ್ತಾಳೆ. ಬರೀ ಮಗುವಾ? ಅಥವಾ ಒಬ್ಬ ಗಂಡನೂ ಬೇಕಾ ಜೊತೆಯಲ್ಲಿ? ಊಹೂಂ, ಗಂಡ ಬೇಡವಂತೆ. ಊರವರೆಲ್ಲ ಚರ್ಚಿನ ಪಾದ್ರಿಯ ಜೊತೆಯಲ್ಲಿ ಮೆರವಣಿಗೆ ಹೋಗುತ್ತಿರುವಾಗ ಜೊತೆಯಲ್ಲಿ ಹೋಗುತ್ತಿರುವ ಆಂಟೋನಿಯಾ ಮಗಳಿಗೆ ಹೇಳುತ್ತಾಳೆ. 'ಈ ಊರಿನವರು ಬರೀ ಮಗಂದಿರನ್ನು ಹುಟ್ಟಿಸಲು ಇಷ್ಟಪಡುವವರು. ಹಸುವಿನ ಹಿಂಬದಿಯ ಆಚೆ ಏನಿದೆ ಎಂಬುದನ್ನು ನೋಡಲಾರದವರು. ನಿಜವಾದ ಗಂಡೊಬ್ಬನನ್ನು ಇಲ್ಲಿ ಹುಡುಕುವುದು ಕಷ್ಟವೇ. ಬೇರೆ ಎಲ್ಲಾದರೂ ನೋಡೋಣ'.

ಈ ಹುಡುಕಾಟ ಅವರನ್ನು ದೂರದ ನಗರಕ್ಕೆ ಒಯ್ಯುತ್ತದೆ. ಲೆಟ್ಟಾ ಎಂಬ ಹೆಂಗಸೊಬ್ಬಳು ಅವಿವಾಹಿತ ತಾಯಂದಿರಿಗೆ ಆಶ್ರಯ ನೀಡುವ ಮನೆಯೊಂದನ್ನು ನಡೆಸುತ್ತಿರುತ್ತಾಳೆ. ಅವಳೂ ಗರ್ಭಿಣಿಯೇ. ಕಂಡಾಗೆಲ್ಲ ಗುಂಡು ಹೊಟ್ಟೆ ಹೊತ್ತು ಓಡಾಡುತ್ತಿರುವ ಲೆಟ್ಟಾ ಫಲಿಸಿದ ಬಸಿರಿನ ಬಗ್ಗೆ ಗಂಟೆಗಟ್ಟಲೆ ಕೊರೆಯಬಲ್ಲಳು. 'ಬಸಿರನ್ನು ಹೊರುವುದು ಒಂದು ಅದ್ಭುತ ಅನುಭೂತಿ. ಸಂಭೋಗಕ್ಕಿಂತ, ಮಕ್ಕಳನ್ನು ಹೆರುವ ಕ್ರಿಯೆಗಿಂತ ಈ ಹೊರುವ ಅನುಭವ ಇದೆಯಲ್ಲ? ಅದಕ್ಕೆ ಜಗತ್ತಿನ ಯಾವ ಅನುಭವವೂ ಸಮನಿಲ್ಲ!'

ಅವಳು ಸಹ ಆಂಟೋನಿಯಾಳ ಮಗಳು ಡೇನಿಯಲ್ಲಳ 'ಮಗು ಬೇಕು, ಗಂಡ ಬೇಡ' ನಿಲುವಿಗೆ ಆಶ್ಚರ್ಯಿಸುತ್ತಾಳೆ. ಕಣ್ಣಿಗೆ ಕಾಣದ್ದರ ಬಗ್ಗೆ ಹೃದಯಕ್ಕೆ ತಳಮಳವೇನೂ ಇರುವುದಿಲ್ಲ ಎಂದು ಆಂಟೋನಿಯಾ ಸಮಜಾಯಿಷಿಸುತ್ತಾಳೆ. ಹಾಗಿದ್ದಲ್ಲಿ ಲೆಟ್ಟಾಳ ಸಂಬಂಧಿಯೇ ಒಬ್ಬ ಕುಲೀನಸ್ಥ ಇದ್ದಾನಲ್ಲ? ಡೇನಿಯಲ್ ತನ್ನ ಕೆಲಸ ಮುಗಿಸಿ ಬರುವವರೆಗೆ ಲೆಟ್ಟಾ ಮತ್ತು ಆಂಟೋನಿಯಾ ಹೋಟೆಲ್ ಹೊರಗೆ ಕಾಯುತ್ತಿರುತ್ತಾರೆ. ಮುಗಿದದ್ದೇ ತಡ, ಮೂವರೂ ನಗುತ್ತಾ ಹಗುರುವಾಗಿ ಓಡುವ ದೃಶ್ಯ ಸಾಂಪ್ರದಾಯಿಕ ತಂದೆತನದ ಪರಿಕಲ್ಪನೆಗೆ ಮತ್ತು ತನ್ಮೂಲಕ ಸಕ್ರಮ ಅಥವಾ ಹಾದರಕ್ಕೆ ಹುಟ್ಟಿದ ಮಕ್ಕಳು ಎಂಬ ವಿಂಗಡಣೆಗೆ ಮುಂಗೈಯಿಂದ ಮೂಗನ್ನು ಝಾಡಿಸಿ ಧಿಕ್ಕರಿಸುತ್ತಾ ಬೆನ್ನು ತಿರುಗಿಸುವಂತೆ ಕಾಣುತ್ತದೆ.

ಆದರೇನು? ಸುತ್ತಲಿನ ಪ್ರಪಂಚ ಸುಮ್ಮನೆ ಕೂರುತ್ತದೆಯೆ? ಚರ್ಚಿನ ಪಾದ್ರಿ ತನ್ನ ಬೋಧನೆಯ ವೇಳೆಯಲ್ಲಿ ಪರೋಕ್ಷವಾಗಿ ಈ 'ಜಾರಿದ ಹೆಂಗಸರನ್ನು' ಜರೆಯುತ್ತಾನೆ. ಸ್ವಲ್ಪ ದಿನಗಳಲ್ಲಿ ಹಾದರ ಮಾಡುವಾಗಲೇ ಆಂಟೋನಿಯಾಳ ಕೈಗೆ ಸಿಕ್ಕಿ ಮಾರನೆಯ ದಿನ ಕಂದಿದ ಧ್ವನಿಯಲ್ಲಿ 'ಬೇರೆಯವರನ್ನು ಜರೆಯುವ ಮುನ್ನ ನಮ್ಮ ಪಾಪಗಳನ್ನು ಅವಲೋಕಿಸುವುದು ಲೇಸು. ಹೆಣ್ಣು ಈ ವಿಶ್ವದ ಆದಿಶಕ್ತಿ, ಈ ಜಗತ್ತಿಗೆ ಮುಕ್ತಿ ಎಂಬುದು ಬಂದಿದ್ದು ಹೆಣ್ಣಿಂದಲೇ....' ಎಂದು ಬೇರೊಂದು ರಾಗವನ್ನು ಪಾಡಿದಾಗ ಆಂಟೋನಿಯಾ ಮತ್ತು ಡೇನಿಯಲ್ ನಸುನಗುತ್ತಾರೆ. ಕೆಲವೇ ದಿನಗಳಲ್ಲಿ ತಾನು ಹೊತ್ತ ಪಾದರಿತನದ ಹೊರೆಯನ್ನು ಕಿತ್ತೊಗೆದು ಜೀವಪರ ಬದುಕನ್ನು ಬದುಕಲು ಆಂಟೋನಿಯಾಳ ಪರಿವಾರವನ್ನು ಸೇರಿಕೊಳ್ಳುತ್ತಾನೆ.

ಆಂಟೋನಿಯಾಳ 'ಕುಟುಂಬ' ಹೀಗೆ ಬೆಳೆಯುತ್ತಲೇ ಹೋಗುತ್ತದೆ. ಹಾದಿಬೀದಿಯಲ್ಲಿ ಮಕ್ಕಳಿಂದಲೂ ಕಿಚಾಯಿಸಲ್ಪಡುವ ಜೋಲು ತುಟಿಯ ಹಳ್ಳಿ ಹುಂಬ, ಅಣ್ಣಂದಿರಿಂದಲೇ

ಅತ್ಯಾಚಾರಕ್ಕೊಳಗಾಗುವ ಜೋಬದ್ರೆ 'ಡೀಡೀ' ಸಹ ಈಗ ಈ ಪರಿವಾರದಲ್ಲೊಬ್ಬರು. ನಿರ್ದಿಷ್ಟ ಪಾತ್ರಗಳನ್ನು ಭರಿಸುವ ಹೊರೆಯಿಲ್ಲದೆ ಒಟ್ಟಿಗೇ ದುಡಿಯುತ್ತಾ ಇರುವುದನ್ನು ಹಂಚಿ ತಿನ್ನುವ ಪರಿವಾರದಲ್ಲಿ ಒಬ್ಬಬ್ಬೊರೂ ಅವರದ್ದೇ ರೀತಿಯಲ್ಲಿ ಸುಖಿಗಳು. ಡೇನಿಯಲ್ ತೆರೇಸ್ ಎಂಬ ಹೆಣ್ಣು ಮಗುವಿಗೆ ಜನ್ಮ ಕೊಡುತ್ತಾಳೆ. ಗಣಿತದಲ್ಲಿ, ತತ್ವಶಾಸ್ತ್ರದಲ್ಲಿ, ಸಂಗೀತದಲ್ಲಿ ಈ ಪುಟ್ಟ ಹುಡುಗಿ ಅಸಾಮಾನ್ಯೆ. ಆರನೇ ವಯಸ್ಸಿನಲ್ಲಿ 'ವಕ್ರ ಬೆರಳಿನ' ತತ್ವಶಾಸ್ತ್ರಶೊಪೆನೋರ್ ಬಗ್ಗೆ ಮಾತನಾಡಿದರೆ ಅರ್ಥಮಾಡಿಕೊಳ್ಳಬಲ್ಲಳು. 'ದೇವರು ಈ ಜಗತ್ತನ್ನು ಸೃಷ್ಟಿ ಮಾಡಿದ ಎಂಬ ಸೃಷ್ಟಿ ಸಿದ್ಧಾಂತವನ್ನು ಹೇಳುವ ಅಮ್ಮ ದೇವರನ್ನು ಹಾಗಾದರೆ ಯಾರು ಸೃಷ್ಟಿ ಮಾಡಿದ ಅಂತ ಯಾಕೆ ಕೇಳುವುದಿಲ್ಲ?' ಎಂದು ಬೆರಗುಪಡಬಲ್ಲಳು. ಹೈಸ್ಕೂಲಿನಲ್ಲಿದ್ದಾಗ ಅವಳು ಬರೆದ ಪ್ರಬಂಧವನ್ನು ಅರ್ಥಮಾಡಿಕೊಳ್ಳಲಾಗದ ಮೇಷ್ಟ್ರನೊಬ್ಬ ಹೇಳಿದಷ್ಟು ಪುಟಗಳ ಮಿತಿಯನ್ನು ಮೀರುವುದು ಜೀನಿಯಾಸ್ ಲಕ್ಷಣವಲ್ಲ ಎಂದಾಗ ಅವನ ತಲೆತಿರುಕತನವನ್ನು ಧಿಕ್ಕರಿಸಿ ಕ್ಲಾಸಿನಿಂದ ಹೊರನಡೆಯುತ್ತಾಳೆ.

ಆದರೂ ನಡೆಯುವ ಘಟನೆಗಳು ಎಲ್ಲವೂ ಚೆನ್ನಲ್ಲ. 'ಆ ಜ್ಞಾನೋದಯದ ದಿನಗಳಲ್ಲೂ' ಪುಟ್ಟ ಹುಡುಗಿ ತೆರೇಸಳ ಮೇಲೆ ಡೀಡೀಯ ದುರ್ಮಾರ್ಗಿ ಅಣ್ಣ ಅತ್ಯಾಚಾರ ನಡೆಸುತ್ತಾನೆ. ಕುದಿಯುವ ಕೋಪದಲ್ಲಿಗನ್ ಹೊತ್ತ ಆಂಟೋನಿಯಾ ಊರನ್ನೆಲ್ಲಾ ಜಾಲಾಡಿ ಪಬ್ ಒಂದರಿಂದ ಈ ಅತ್ಯಾಚಾರಿಯನ್ನು ಗನ್ ಪಾಯಿಂಟಿನಲ್ಲಿ ಹೊರಗೆಳೆಯುತ್ತಾಳೆ. ಬಂದೂಕನ್ನು ಅವನಿಗೆ ಗುರಿಯಿಟ್ಟು ಅಚಲಧ್ವನಿಯಲ್ಲಿ ಹೇಳುತ್ತಾಳೆ.

'ಕೊಲ್ಲುವ ಎಳೆ ನನ್ನಲ್ಲಿದ್ದಿದ್ದರೆ ನಿನ್ನನ್ನು ಸುಟ್ಟು ಬೂದಿ ಮಾಡುತ್ತಿದ್ದೆ. ಬದಲಾಗಿ ನಿನ್ನ ಮೇಲೆ ಶಾಪವೊಂದನ್ನು ಹೊರೆಸುತ್ತಿದ್ದೇನೆ. ನನ್ನ ಶಾಪ ನಿನ್ನನ್ನು ಎಡೆಬಿಡದೆ ಹಿಂಬಾಲಿಸುತ್ತದೆ. ನೀನೇನಾದರೂ ಈ ಊರಿಗೆ ಹಿಂತಿರುಗಿ ಬಂದರೆ ನನ್ನ ಶಾಪ ನಿನ್ನನ್ನು ರೂಕ್ಷವಾಗಿ ಸಾಯಿಸುತ್ತದೆ. ನನ್ನ ದ್ವೇಷ ನಿನ್ನನ್ನು ಸಿಗಿಯುತ್ತದೆ. ನಿನ್ನ ಮೂಳೆಗಳು ಚಿಂದಿಯಾಗುತ್ತವೆ. ನಿನ್ನ ನಾಲಿಗೆ ಕೀವಿನಿಂದ ಕೊಳೆತು ನಾರುತ್ತದೆ. ನೀನೇನಾದರೂ ಹಿಂದೆ ಬಂದದ್ದೇ ಆದರೆ ನೀನು ಕುಡಿಯುವ ನೀರು ವಿಷವಾಗುತ್ತದೆ. ತಿಂದ ಕೂಳು ಒಳಗೆ ಕೊಳೆತು ನಾರುತ್ತದೆ. ನೀನೆಳೆದುಕೊಳ್ಳುವ ಉಸಿರು ನಿನ್ನ ಎದೆಯನ್ನು ಸುಡುತ್ತದೆ. ಶಿಕ್ಷೆಯಿಂದ ಬಿಡುಗಡೆ ಹೇಗೆ ಎಂದು ಪರಿತಪಿಸುವಂತೆ ಮಾಡುತ್ತದೆ. ಮಗುವೊಂದನ್ನು ಅತ್ಯಾಚಾರಕ್ಕೆ ಬಲಿ ಮಾಡಿದ್ದಕ್ಕೆ ಈ ಘೋರ ಶಿಕ್ಷೆ'.

ಬಂದೂಕಿನ ತುದಿಯಿಂದ ಅವನನ್ನು ಬಿಡುಗಡೆಗೊಳಿಸಿ ಶೋಕವೇ ಮೂರ್ತಿವೆತ್ತಂತ್ತಿದ್ದ ಈ ಹೆಂಗಸು ಧೀಮಂತವಾಗಿ ಹೆಜ್ಜೆಯಿಡುತ್ತಾ ಹೋಗುತ್ತಾಳೆ. ಸ್ವಲ್ಪ ದೂರದಲ್ಲಿ ತಬ್ಬಿಬ್ಬಾಗಿ ನಿಂತಿದ್ದ ಅವನ ಗೆಳೆಯರು ನಿಧಾನವಾಗಿ ಹತ್ತಿರ ಬರುತ್ತಾರೆ. ಆಳಿಗೊಂದು ಹತ್ತು ಲಾತ ತಿಂದ ಈ ದುರ್ಮಾರ್ಗಿ ಕಣ್ ಕಣ್ ಬಿಡುತ್ತಾ ಮನೆಗೆ ಬಂದರೆ ಆಸ್ತಿ ವಿಷಯಕ್ಕೆ ಜಗಳವಾಡಿದ್ದ ಅಣ್ಣನೇ ಅವನನ್ನು ನೀರಿನ ಟ್ಯಾಂಕಿನಲ್ಲಿ ಮುಳುಗಿಸಿ ಸಾಯಿಸುತ್ತಾನೆ. ಊರಿನವರು ಕಂಡೂ ಕಾಣದಂತೆ ಸುಮ್ಮನಾಗುತ್ತಾರೆ.

ಆಂಟೋನಿಯಾಳ 'ವಿಸ್ತೃತ ಕುಟುಂಬ' ವಿಸ್ತರಿಸುತ್ತಲೇ ಹೋಗುತ್ತದೆ. ಲೆಟ್ಟಾ ನಿರಾಶ್ರಿತಳಾಗಿ ತನ್ನ ಮಕ್ಕಳೊಂದಿಗೆ ಬಂದು ಸೇರುತ್ತಾಳೆ. ಅವಳ ಹಿರಿಯ ಮಗನನ್ನು ಇಷ್ಟಪಟ್ಟ ತೆರೇಸ್ ಬಸಿರಾಗುತ್ತಾಳೆ. 'ನಿನಗೆ ಮಗು ಬೇಕಾ? ಬೇಡವಾ?' ಪ್ರಶ್ನೆಗೆ ತೆರೇಸ್ ಉತ್ತರಿಸುವ ಮುಂಚೆಯೇ ಮಕ್ಕಳೆಲ್ಲವೂ 'ಬೇಕು, ಬೇಡ'ದ ಆಟವಾಡುತ್ತಿರುತ್ತವೆ. 'ವಕ್ರ ಬೆರಳಿನವ' ಬೇಡವೆಂದು ಸೂಚಿಸುತ್ತಾನೆ. 'ಈ ಜಗತ್ತಿಗೆ ಮಗು ತರುತ್ತೀಯಾ? ನಿನಗೆ ಆ ಮಗುವಿನ ಮೇಲೆ ಕರುಣೆಯೇ ಇಲ್ಲವಾ? ಬದುಕೆಂಬ ಶಾಪಕ್ಕೆ ಆ ಮುಗ್ಧ ಮಗುವನ್ನೇಕೆ ತುತ್ತಾಗಿಸುತ್ತೀ? ಆ ಪಾಪ ನೀನೇಕೆ ಹೊರುತ್ತೀ? ಈ ಪಾಪಿ ಪ್ರಪಂಚಕ್ಕೆ ಮಗುವೊಂದನ್ನು ತರಲು ನಿಮಗೆ ಹೇಗೆ ಮನಸ್ಸು ಬರುತ್ತದೋ ನಾ ಕಾಣೆ'.

ತೇರೇಸ್ ಆದರೂ ಮಗುವನ್ನು ಹೆರುತ್ತಾಳೆ. ಹೆತ್ತು, ಪಾಲಿಸಲು ಬೇರೆಯವರಿಗೆ ಬಿಟ್ಟು, ತನ್ನ ಗಣಿತ ಮತ್ತು ಸಂಗೀತಕ್ಕೆ ಹಿಂತಿರುಗುತ್ತಾಳೆ. ನಿಧಾನವಾಗಿ ಹರೆಯ ವೃದ್ಧಾಪ್ಯಕ್ಕೆ ನಂತರ ಸಾವಿನೆಡೆ ಅಡಿಯಿಡುತ್ತದೆ. 'ವಕ್ರ ಬೆರಳಿನವ' ಮಾತ್ರ ಉರುಳಿಗೆ ತಲೆ ಕೊಟ್ಟು ಸಾವನ್ನು ತಬ್ಬಿಕೊಳ್ಳುತ್ತಾನೆ. 'ನಮ್ಮನ್ನು ಕಾಡುತ್ತಿರುವ ಸತತ ನೋವು ಒಂದು ಆಕಸ್ಮಿಕ ಎನ್ನುವ ವಾದವೇ ಅಸಂಬದ್ಧ ನೋವೆನ್ನುವುದು ನಿಯಮ, ಅಪವಾದವಲ್ಲ'. ಅವನ ಪ್ರಕಾರ ಪರಿಸ್ಥಿತಿ ಸುಧಾರಿಸುತ್ತದೆ ಎಂಬ ನಂಬಿಕೆಗೆ ನಮಗೆ ನಾವು ಮಾಡಿಕೊಳ್ಳುವ ಮಹಾಮೋಸ. ಅದು ಎಂದೂ ಸುಧಾರಿಸುವುದಿಲ್ಲ. ಇನ್ನೊಂದು ರೂಪಕ್ಕೆ ಬದಲಾಗುತ್ತದೆ ಅಷ್ಟೇ.

'ಆಂಟೋನಿಯಾಸ್ ಲೈನ್' ಒಂದೂ ಮುಕ್ಕಾಲು ಗಂಟೆಯಲ್ಲಿ ಚುರುಕಾಗಿ ನಿರೂಪಿಸಲ್ಪಡುವ ನಾಲ್ಕು ಪೀಳಿಗೆಗಳ ದೀರ್ಘ ಕಥನ. ಅಂತೆಯೇ ಅದು 'ಕಾಲ'ದ ಕಥನ. ಸತ್ತ ದೇಹಗಳು ಮಣ್ಣನ್ನು ಪುಷ್ಟಿಯಾಗಿಸುತ್ತಾ ಹೊಸ ಬದುಕನ್ನು ಚಿಗುರಿಸುತ್ತಾ ಋತುಮಾನಗಳು ಒಂದನ್ನೊಂದು ಹಿಂಬಾಲಿಸುತ್ತವೆ. ತಾನು ಪ್ರೀತಿಸಿದ ಪ್ರೊಟೆಸ್ಟೆಂಟನನ್ನು ಮದುವೆಯಾಗಗೊಡದ ಸಮಾಜಕ್ಕೆ ಸವಾಲೆಸೆಯುವ ಶಕ್ತಿಯಿಲ್ಲದ 'ಹುಚ್ಚಿಮಡೊನಾ' ಹುಣ್ಣಿಮೆ ಚಂದ್ರನನ್ನು ನೋಡಿ ಊಳಿಡುತ್ತಲೇ ಬದುಕಿ ಸಾಯುತ್ತಾಳೆ. ಅವಳ ಮನೆಯ ಕೆಳಗಡೆಯೇ ಅವಳ ಪ್ರೇಮಿಯ ವಾಸ. ಅವನೂ ಅವಳನ್ನು ಹಿಂಬಾಲಿಸಿದಾಗ ಒಂದೇ ಕಡೆ ಹೂಳಲ್ಪಟ್ಟ ಸಮಾಧಿಯ ಮೇಲೆ 'ಅನ್ನವನ್ನು ಹಂಚಿಕೊಳ್ಳದೇ, ಹಾಸಿಗೆಯನ್ನು ಹಂಚಿಕೊಳ್ಳದೇ ಬದುಕಿದ ಇಬ್ಬರು ಈಗ ಅದು ಹೇಗೋ ಸಮಾಧಿಯನ್ನಾದರೂ ಹಂಚಿಕೊಂಡಿದ್ದಾರೆ' ಎಂದು ಬರೆದಿರುತ್ತದೆ. ಸಾವು ಬದುಕಿನ ಜೊತೆ ಹೆಜ್ಜೆ ಹಾಕುತ್ತದೆ. ಆಂಟೋನಿಯಾ ತನ್ನ ಮೊಮ್ಮಗಳು ಸಾರಾಗೆ ಹೇಳಿಯೇ ಪ್ರಾಣ ಬಿಡುವ ಆಶ್ವಾಸನೆಯನ್ನು ಕೊಡುತ್ತಾಳೆ. 'ಬದುಕಿದ್ದು ಸಾಕು' ಎಂದು ಬಲವಾಗಿ ಅನ್ನಿಸಿದ ದಿನ ಪ್ರತಿಯೊಬ್ಬರನ್ನೂ ಕರೆಯಲು ಸಾರಾಗೆ ಹೇಳುತ್ತಾಳೆ. ಸಾವು ತನ್ನ ಮುತ್ತಜ್ಜಿಯ ಅದಮ್ಯ ಉಸಿರನ್ನು ನಿಲ್ಲಿಸುವ ಕ್ಷಣದಲ್ಲಿ ಸಾರಾಗೆ ಪ್ರೇಕ್ಷಕಳಾಗಿ ನಿಲ್ಲುವ ಕುತೂಹಲ! ಕೊನೆಗೆ ನಿರೂಪಕಿ ಹೇಳುವಂತೆ ಚಿತ್ರದ ಕಥೆ ಮುಗಿದಂತೆ ಕಂಡರೂ ಕಾಲದ, ಬದುಕಿನ ಆಖ್ಯಾನ ಮುಂದುವರಿಯುತ್ತದೆ.

'ಆಂಟೋನಿಯಾಸ್ ಲೈನ್' ಡಚ್ ಗ್ರಾಮೀಣ ಬದುಕಿನ ಸಹಜ ಸುಂದರ ಸೊಬಗನ್ನು, ಸುಖ ದುಃಖಗಳ ಕ್ಷಣಗಳನ್ನು ಅತ್ಯಂತ ರಮ್ಯ ಚಿತ್ರೀಕರಣದೊಂದಿಗೆ ಬಿಂಬಿಸುತ್ತಾ ಹೋಗುವ

ಕಾಲದ ಕಥೆ. ಪ್ರಕೃತಿಯಂತೆ ಆಂಟೋನಿಯಾ ವೈವಿಧ್ಯವನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವವಳು. ಹಾಗಾಗಿಯೇ ಡೇನಿಯಲ್ ಮತ್ತು ತೆರೇಸಳ ಉಪಾಧ್ಯಾಯಿನಿಯ ಮಧ್ಯೆ ಇರುವ ಆಕರ್ಷಣೆಗೂ, ಲೈಂಗಿಕ ಸಂಬಂಧಕ್ಕೂ ಇಲ್ಲಿ ಸ್ಥಾನ, ಗೌರವವುಂಟು. ಮೊದಲು ನಿರಾಕರಿಸಿದರೂ ನಂತರ ರೈತ ಬಾಸ್ ಜೊತೆಗಿನ ಆಂಟೋನಿಯಾಳ ಮದುವೆಯಿಲ್ಲದ ಸಂಬಂಧ ಯಾರ ಹುಬ್ಬನ್ನೂ ಏರಿಸುವುದಿಲ್ಲ. ಸಂಪ್ರದಾಯದ ವಾಹಿನಿಯಿಂದ ದೂರ ತಳ್ಳಲ್ಪಟ್ಟು ಆಂಟೋನಿಯಾಳ ಪರಿವಾರದಲ್ಲಿ ಸೇರಲ್ಪಟ್ಟವರೆಲ್ಲರೂ ಬದುಕುಳಿಯುವುದಷ್ಟೇ ಅಲ್ಲ, ಸಂತೋಷ ಸಮಾಧಾನಗಳಿಂದ ಬದುಕುತ್ತಾರೆ. ಮನೆಯ ಹೊರಗಿನ ಅಂಗಳದಲ್ಲಿ ಎಲ್ಲ ಆರಾಮವಾಗಿ ಕೂತು ಹರಟೆ ಹೊಡೆಯುತ್ತಾ ಒಟ್ಟಿಗೆ ತಿನ್ನುವ ದೃಶ್ಯವಂತೂ ಸಂಭ್ರಮಿಸುತ್ತಾ ಬದುಕುವ, ಅಂಥಹ ಬದುಕನ್ನು ಮರುಸೃಷ್ಟಿಸುವ, ಸಾವನ್ನು ಬದುಕಿನ ಒಂದು ಭಾಗವನ್ನಾಗಿ ಒಪ್ಪಿಕೊಳ್ಳುವ ಸಹಜತೆಯ ಮೌಲ್ಯಗಳ ಪ್ರತಿಮೆಯಾಗಿ ಮನಸ್ಸಿನಲ್ಲಿ ಉಳಿದುಬಿಡುತ್ತದೆ. ಜೀವಪರತೆ, ಸ್ವೋಪಜ್ಞತೆಯನ್ನು ಸಂಭ್ರಮದಿಂದ ಬಿಂಬಿಸುವ ಕಥನ ಇದು. ವಾಸ್ತವವಾದದ ಹಳ್ಳದಲ್ಲಿ ಬೀಳದೆ ಜೀವವನ್ನು ಕಾಪಾಡುವ ಸೂಕ್ಷ್ಮತೆಗೆ ರೂಪಕವಾಗಿ ಈ ಕಥನವನ್ನು ಅರ್ಥಮಾಡಿಕೊಂಡಾಗ ಬದುಕಿನ ಅನಂತ ಸಾಧ್ಯತೆಗಳನ್ನು ಅದ್ಭುತವಾಗಿ ಹೊಳೆಯಿಸುತ್ತದೆ.

'ನೀವು ಸ್ತ್ರೀವಾದಿ ಚಿತ್ರ ನಿರ್ಮಾಪಕಿಯೆ?' ಎಂದು ಕೇಳಿದಾಗ ನಿರ್ದೇಶಕಿ ಗೋರಿಸ್ ಹೇಳಿದ್ದಳು : 'ಲೇಬಲ್ ಹಚ್ಚಿಯೇ ನನ್ನನ್ನು ನನ್ನ ಚಿತ್ರಗಳನ್ನು ನೋಡುವುದಾದರೆ ಆಗಲಿ ಬಿಡಿ. ಬಹುಶಃ ನೋಡುವವರ ದೃಷ್ಟಿಯ ಸೀಮೆಯೇ ಅದಾಗಿರಬಹುದು'.

ಸಾಹಿತ್ಯ

# ಪುರಾಣ ಸ್ತ್ರೀವಾದ

ಲತಾ ಅಭಯ್

ಪ್ರತಿಯೊಂದು ಸಂಸ್ಕೃತಿ ತನ್ನ ಸಮುದಾಯದ, ಜನಾಂಗದ ಸ್ತ್ರೀಯರ ಬಗ್ಗೆ ತಾನು ಇಟ್ಟುಕೊಂಡಿರುವ ನಂಬಿಕೆಯನ್ನು, ನಡವಳಿಕೆಯ ಸಂಹಿತೆಯನ್ನು ಪುರಾಣಗಳಲ್ಲಿ ಕ್ರೋಢೀಕರಿಸುತ್ತದೆ. ಈ ರೀತಿ ಕ್ರೋಢೀಕರಣಕ್ಕೊಳಗಾದ ನಡವಳಿಕೆಯ ಮಾದರಿಗಳ ಮೂಲಕವೇ ತನ್ನ ಸಂಸ್ಕೃತಿಯ ಅಸ್ತಿತ್ವದ ನೆಲೆಗಟ್ಟನ್ನು ಭದ್ರಗೊಳಿಸುತ್ತವೆ. ಆದ್ದರಿಂದ ಯಾವುದೇ ಸಮುದಾಯದ ಪುರಾಣಗಳಲ್ಲಿ ಬರುವ ಸ್ತ್ರೀಯನ್ನು ಅಭ್ಯಸಿಸುವ ಮೂಲಕ ಆ ಸಂಸ್ಕೃತಿಯಲ್ಲಿನ ಸ್ತ್ರೀಯರ ಸ್ಥಾನಮಾನಗಳನ್ನು ಅರಿಯಲು ಸಾಧ್ಯವಾಗುತ್ತದೆ. ಯಾವುದೇ ಪುರಾಣಗಳಲ್ಲಿ ಕಾಣುವ ಹೆಣ್ಣು ಸುತ್ತಲ ಬದುಕಿನಲ್ಲಿ ಕಾಣುವ ಹೆಣ್ಣೇ ಆಗಿರುತ್ತಾಳೆ. ಪ್ರತಿಯೊಂದು ಪುರುಷಪ್ರಧಾನ ಸಮಾಜವು ತನ್ನ ಹಿತಾಸಕ್ತಿಯ ರಕ್ಷಣೆಗಾಗಿ ತಾನೇ ರೂಪಿಸಿದ ಸ್ತ್ರೀಪ್ರತಿಮೆಗಳ ಮೂಲಕ ನಡವಳಿಕೆಯ ಮಾದರಿಗಳನ್ನು ಮುಂದಿಡುತ್ತದೆ. ಈ ರೀತಿ ನಿಗದಿಪಡಿಸಿದ ಸ್ತ್ರೀಪ್ರತಿಮೆಗಳ ಮುಂದುವರಿಕೆಯ ವಾಹಕವಾಗಿ, ಸಮರ್ಥನೆಯ ಮಾಧ್ಯಮವಾಗಿಯೂ ಪುರಾಣಗಳು ಬಳಕೆಯಾಗುತ್ತಿವೆ. ಪೌರಾಣಿಕ ಪ್ರತಿಮೆಗಳನ್ನು ಸ್ತ್ರೀಯರ ಮೇಲೆ ಹೇರಲಾಗುತ್ತದೋ ಅಥವಾ ಈಗಾಗಲೇ ಅಸ್ತಿತ್ವದಲ್ಲಿದ್ದ ಮಾದರಿಗಳನ್ನು ಸಮರ್ಥಿಸಿ ಅವುಗಳನ್ನು ಚಾಲ್ತಿಗೆ ಬಿಡಲು ಪುರಾಣಗಳನ್ನು ರೂಪಿಸಲಾಗಿದೆಯೋ ಎಂಬುದರ ಕುರಿತಾಗಿಯೂ ವಿದ್ವಾಂಸರು ಚಿಂತಿಸಿದ್ದಾರೆ.

ಸ್ತ್ರೀವಾದವೆಂದರೆ ಮಹಿಳಾ ಬದುಕಿನ ಪರವಾಗಿ ನಿಂತು ಮಂಡಿಸುವ ವಾದ" (ಶ್ರೀಮತಿ ಎಚ್.ಎಸ್., ೨೦೦೩, ೧೨) ಎಂದಾದಲ್ಲಿ ಪುರಾಣ ಸ್ತ್ರೀವಾದವು ಪುರಾಣದ ಸ್ತ್ರೀಯರ ಮೂಲಕ ವರ್ತಮಾನದ ಸ್ತ್ರೀಬದುಕಿಗೆ ಪೂರಕವಾದ, ಮಾರಕವಾದ ಚಿಂತನೆಗಳನ್ನು ಗ್ರಹಿಸುತ್ತದೆ. ಪುರಾಣದ ಸ್ತ್ರೀಪಾತ್ರಗಳನ್ನು ಸ್ತ್ರೀನಿಷ್ಠ ನೆಲೆಯಲ್ಲಿ ನಿರ್ವಚಿಸಿದ ಕ್ರಮವನ್ನು ಪುರಾಣ ಸ್ತ್ರೀವಾದ ಎಂದು ಕರೆಯಬಹುದು. ಇಂದು ಜಾಗತಿಕ ನೆಲೆಯಲ್ಲಿ ನಿರ್ವಚನಗೊಳ್ಳುತ್ತಿರುವ ಸ್ತ್ರೀಸಂಬಂಧಿತ ಚಿಂತನೆಗಳಾದಂತಹ ಲಿಂಗ ತಾರತಮ್ಯ, ಲೈಂಗಿಕ ಶೋಷಣೆ, ಅಸಮಾನತೆ, ಅಧೀನನೆಲೆ, ಸ್ತ್ರೀಯಾತ್ಮಕತೆ, ಸ್ತ್ರೀಸಮಾನತೆ, ಪುರುಷಪ್ರಧಾನ ಚಿಂತನೆಯ ಅಪಾಯಗಳನ್ನು ಈ ಚಿಂತನೆ ಗುರುತಿಸುತ್ತದೆ. ಇದುವರೆಗೆ ಪುರುಷಪ್ರಧಾನ ಸಮಾಜ ಸ್ತ್ರೀಯರಿಗೆ ಹೇರಲ್ಪಟ್ಟ ಇತ್ಯಾತ್ಮಕ ಹಾಗೂ ಗುಣಾತ್ಮಕ ಗ್ರಹಿಕೆಗಳನ್ನು ಸ್ತ್ರೀವಾದಿ

ಚಿಂತನೆಯ ನೆಲೆಯಲ್ಲಿ ಒಟ್ಟು ಸಾಹಿತ್ಯ ಕೃತಿಗಳ ಚಿಂತನೆಯಲ್ಲಿ ಹಾಗೂ ಮಹಿಳಾ ಸಾಹಿತ್ಯದಲ್ಲಿ ನಿರ್ವಚಿತವಾದ ಪುರಾಣದ ಸ್ತ್ರೀ ಪಾತ್ರಗಳನ್ನು ವೈಚಾರಿಕವಾಗಿ ವಿಶ್ಲೇಷಿಸುವ ಪುನರ್‌ವ್ಯಾಖ್ಯಾನಿಸುವ, ಚಿಂತನಾ ಕ್ರಮವೇ ಪುರಾಣ ಸ್ತ್ರೀವಾದವಾಗಿದೆ. ಪುರಾಣ ಸ್ತ್ರೀವಾದ ವೆಂದರೆ ಕೇವಲ ಮಹಿಳೆಯರ ಸಾಹಿತ್ಯದ ಪೌರಾಣಿಕ ಸ್ತ್ರೀಪಾತ್ರಗಳ ವಿಶ್ಲೇಷಣೆಯಷ್ಟೇ ಅಲ್ಲ, ಬದಲಿಗೆ ಈ ಪಾತ್ರಗಳನ್ನು ಸ್ತ್ರೀವಾದಿ ದೃಷ್ಟಿಕೋನದ ವಿಶ್ಲೇಷಣೆಯ ಓದನ್ನು ಒಳಗೊಂಡಂತೆ ವಿಶಾಲಾರ್ಥದಲ್ಲಿ ಬಳಸಲ್ಪಡುತ್ತದೆ. ಸಾಹಿತ್ಯ ಅಥವಾ ವಿಮರ್ಶೆಗಳನ್ನೊಳ ಗೊಂಡಂತೆ ಎಲ್ಲ ಬಗೆಯ ಚಿಂತನಾಕ್ರಮಗಳು ಇದರೊಳಗೆ ಸೇರುತ್ತವೆ.

"ಕುಟುಂಬದ ಒಳಗಾಗಲಿ, ಹೊರಗಾಗಲಿ ಸಮಾಜವು ಹೆಣ್ಣಿನ ಮೇಲೆ ನಡೆಸುವ ದಬ್ಬಾಳಿಕೆ ಹಾಗೂ ಶೋಷಣೆಯ ಸ್ವರೂಪವನ್ನು ಅರ್ಥಮಾಡಿಕೊಂಡು ಅಂತಹ ಪರಿಸ್ಥಿತಿಯ ನಿವಾರಣೆ ಗಾಗಿ ಪ್ರಜ್ಞಾಪೂರ್ವಕವಾಗಿ ನಡೆಸುವ ಚಿಂತನೆ ಹಾಗೂ ಅದಕ್ಕನುಗುಣವಾದ ಚಟುವಟಿಕೆಗಳು" (ಶ್ರೀಮತಿ ಎಚ್.ಎಸ್., ೨೦೦೩, ೧೩). ಎಂದರೆ ಪುರಾಣ ಸ್ತ್ರೀವಾದವು ಕೇವಲ ಸಾಹಿತ್ಯಿಕ ಕಾರ್ಯವಲ್ಲ, ಬದಲಿಗೆ ಪೌರಾಣಿಕ ಸ್ತ್ರೀಪಾತ್ರಗಳ ಕುರಿತಾದ ಮಹಿಳಾ ಸಾಹಿತ್ಯ ಹಾಗೂ ಚಿಂತನೆಗಳ ಮೂಲಕವೇ ಸ್ತ್ರೀವಾದಕ್ಕೆ ಪೂರಕವಾದ ಚಿಂತನಾಕ್ರಮವೊಂದನ್ನು ನಿರ್ಮಿಸುವ ಹಂಬಲ ಹೊಂದಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಪೌರಾಣಿಕ ಸ್ತ್ರೀಪಾತ್ರಗಳ ಮರುಸೃಷ್ಟಿಯಲ್ಲಿ ಮಹಿಳೆಯರೇ ಪ್ರಧಾನ ಪಾತ್ರವಹಿಸಿರುವುದರಿಂದ ಈ ಚಿಂತನೆಗೆ ಮತ್ತಷ್ಟು ಬಲಸಿಗುತ್ತದೆ.

ಸ್ತ್ರೀವಾದಿಗಳ ಪ್ರಕಾರ "ಮಿಥ್ ಎಂದರೆ ಮನದಾಳದ ಆಶಯ, ಭಯ, ಆತಂಕಗಳ ಅನಿಸಿಕೆಗಳನ್ನು ಪುರಾಣ, ಐತಿಹ್ಯ, ಭಾಷೆ, ಆಚರಣೆ, ಸಂಪ್ರದಾಯಗಳ ಎಳೆಗಳಲ್ಲಿ ಹುದುಗಿಸಿಟ್ಟ ರಚನೆಗಳು" (ಶ್ರೀಮತಿ ಎಚ್.ಎಸ್., ೨೦೦೩, ೭೬). ಇಲ್ಲಿ ಮಿಥ್ ಎನ್ನುವುದು ಕಟ್ಟುಕತೆ ಅಥವಾ ನಿರಾಧಾರವಾದುದು ಎಂಬ ವಿಶಾಲ ಅರ್ಥದಲ್ಲಿಯೂ, ಇವುಗಳ ಅಭಿವ್ಯಕ್ತಿಯ ಮಾಧ್ಯಮಗಳ ಒಂದು ಸಾಧನ ಅಥವಾ ಪ್ರಕಾರವಾಗಿ ಪುರಾಣವನ್ನು ಗುರುತಿಸಿಕೊಳ್ಳಲಾಗಿದೆ. ಈ ಮಿಥ್‌ಗಳು ಪುರುಷನ ಮನದಾಳದ ಆಶಯ, ಭಯ, ಆತಂಕಗಳು ಕಾಲಕಾಲಕ್ಕೆ ಹೊಸರೂಪ ಪಡೆದಂತೆ ಇದಕ್ಕನುಗುಣವಾದ ಹೊಸ ಮಿಥ್‌ಗಳು ಹುಟ್ಟುತ್ತವೆ. ಈ ಪುರಾಣ ಪ್ರಕಾರದೊಳಗಿನ ಮಿಥ್‌ಗಳು ತೀರಾ ಗೌಪ್ಯವಾಗುಳಿದಿಲ್ಲ. ಪಾರದರ್ಶಕ ಗುಣದಿಂದಾಗಿ ಅವುಗಳು ಹೊಂದಿರುವ ಆಲೋಚನೆಗಳು ಪುರುಷ ಚಿಂತನೆಯ ಪ್ರತೀಕಗಳು ಎಂಬುದನ್ನು ಸ್ತ್ರೀವಾದಿಗಳು ಗುರುತಿಸಿದರು.

ಇತ್ತೀಚೆಗೆ ಸ್ತ್ರೀವಾದಿಗಳು ನವಪುರಾಣದ ನಿರ್ಮಾಣಕ್ಕೂ ಲೇಖಕಿಯರಿಗೆ ಸಲಹೆ ನೀಡಿದ್ದಾರೆ. ಕನ್ನಡದ ಸಂದರ್ಭದಲ್ಲಿ ಶಶಿಕಲಾ ಗುರುಪುರ ಅವರನ್ನೊಳಗೊಂಡಂತೆ ಹಲವರಲ್ಲಿ ಈ ಚಿಂತನೆಯನ್ನು ಕಾಣುತ್ತೇವೆ. ಆದರೆ ಮನೋವಿಜ್ಞಾನಿಗಳ ಪ್ರಕಾರ ಪುರಾಣವು ರಕ್ತಗತ ಹಾಗೂ ಸಾಮೂಹಿಕ ಪ್ರಜ್ಞೆಗಳಾದಲ್ಲಿ ಮನುಕುಲ ಇರುವವರೆಗೂ ಸ್ತ್ರೀವಾದಿಗಳ ಈ ಹಂಬಲ ಕೈಗೂಡುವುದು ಅಸಾಧ್ಯ. ಯಾಕೆಂದರೆ ಪುರಾಣಗಳು ರಕ್ತಗತ ಪ್ರಜ್ಞೆಯಾಗಿರು ವುದರಿಂದ ಮನುಕುಲದ ಆದಿಯಿಂದ ಸಮಷ್ಟಿಯೊಳಗೆ ಚಿರಂತನವಾದ ಸ್ಥಾನವನ್ನು

ಪಡೆದುಕೊಂಡು ಬಂದಿವೆ. ಆದ್ದರಿಂದ ಸಮಷ್ಟಿಯೊಳಗಿನ ಈ ಪೌರಾಣಿಕ ಕಲ್ಪನೆಯನ್ನು ಪಲ್ಲಟಿಸಲು ಅಸಾಧ್ಯ. ಹಾಗೆಯೇ ಸಮಷ್ಟಿಯು ಇದನ್ನು ಸ್ವೀಕರಿಸಲಾರದು. ಈ ಪುರಾಣ ಜಗತ್ತಿನ ಮಹಿಳೆಯರು ಮಾತ್ರ ಎರಕದ ಮಾದರಿಗಳಾಗಿದ್ದಾರೆ. ಮೇರಿಡಾಲಿ ಇದನ್ನು 'ತಪ್ಪುಗುರುತೀಕರಣ' ಎನ್ನುತ್ತಾಳೆ. ಪುರುಷಪ್ರಧಾನ ಮನದ ಆಲೋಚನೆಗೆ ಪೂರಕವಾದ ಪುರಾಣಗಳು ಪುರುಷನ ಹಿತಾಸಕ್ತಿಯನ್ನು ಕಾಪಾಡುತ್ತವೆ. ಆದರೆ ವೈಚಾರಿಕತೆ ಬೆಳೆದಂತೆ ಮಹಿಳೆಗೆ ಅಕ್ಷರ ಜ್ಞಾನ ದೊರೆತಂತೆ ಈ ಬಗೆಯ ಲೈಂಗಿಕ ರಾಜಕಾರಣವನ್ನು ಪ್ರಶ್ನಿಸುವ, ಪ್ರತಿಭಟಿಸುವ, ಪುನರ್‌ರಚಿಸುವ ಸಾಂಸ್ಕೃತಿಕ ಸ್ತ್ರೀವಾದಿ ಪಂಥದ ಹುಟ್ಟಿಗೆ ಪೂರಕವಾದವು.

ಸಿಗ್ಮಂಡ್ ಫ್ರಾಯ್ಡ್ ಮತ್ತು ಕಾರ್ಲ್ ಜಿ ಯೂಂಗ್‌ರು ಪುರಾಣಕ್ಕೆ ನೀಡಿದ ವ್ಯಾಖ್ಯಾನವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಒಪ್ಪಲು ಸಾಧ್ಯ. ಏಕೆಂದರೆ ಜಗತ್ತಿನ ಪುರಾಣಗಳನ್ನೇ ಅವಲೋಕಿಸಿದಾಗ ಯಾವುದೇ ಪುರಾಣಗಳು ಸಮಷ್ಟಿಯ ಪ್ರತಿನಿಧೀಕರಣವನ್ನು ಸಮಾನವಾಗಿ ಹೊಂದಿಲ್ಲ. ಸ್ತ್ರೀಯರ ಆಸೆ-ಆಕಾಂಕ್ಷೆಗಳು, ಮನದಾಳದ ಬಯಕೆಗಳು ಮೂಲವೆಂದು ನಾವು ನಂಬಲಾದ ಪುರಾಣಗಳಲ್ಲಿ ದಾಖಲಾಗಿಲ್ಲ. ಸಮಷ್ಟಿ ಪ್ರಜ್ಞೆಯು ಅಭಿವ್ಯಕ್ತಿಯ ಸಂದರ್ಭದಲ್ಲಿ ಸ್ವಚ್ಛಂದವಾಗಿ ಪ್ರವಹಿಸಿದ್ದರೂ ದಾಖಲಾತಿಯ ಸಮಯದಲ್ಲಿ ನಿರ್ಬಂಧಕ್ಕೊಳಗಾಗಿದೆ. ಪುರಾಣಗಳನ್ನು 'ಸುಪ್ತಮನದ ಅಪ್ರಜ್ಞಾಪೂರ್ವಕ ರಚನೆ' ಎಂಬ ಹೇಳಿಕೆಯನ್ನು ಒಪ್ಪಲಸಾಧ್ಯ. ಏಕೆಂದರೆ ಸುಪ್ತಪ್ರಜ್ಞೆಯ ಅಪ್ರಜ್ಞಾಪೂರ್ವಕವಾದ ರಚನೆಗಳು ಇವುಗಳಾದಲ್ಲಿ ಪುರುಷನ ಶ್ರೇಷ್ಠತೆಯನ್ನೇ ಕಾಪಾಡುವ ಅಂಶಗಳು ಬಿಡುಗಡೆಗೊಳ್ಳಲು ಸಾಧ್ಯ. ಅಲ್ಲದೆ ಸುಪ್ತಪ್ರಜ್ಞೆಯ ಅಪ್ರಜ್ಞಾಪೂರ್ವಕ ಚಿಂತನೆಗಳು ಹಾಗೆ ಹಸಿ-ಹಸಿಯಾಗಿ ಹೊರಜಗತ್ತಿಗೆ ಹೊರಬರಲು ಸಾಧ್ಯ. ಆದ್ದರಿಂದ ಜಾಗೃತ ಪ್ರಜ್ಞೆಯ ಪಾತಳಿಗೆ ಬರದೇ, ಸುಪ್ತಪ್ರಜ್ಞೆಯ ರಚನೆಗಳು ಅಭಿವ್ಯಕ್ತಿಗೊಳ್ಳಲಾರವು. ಈ ಪ್ರಜ್ಞೆಯು ನಾನಾ ಭ್ರಮೆಗಳನ್ನು, ಕನಸುಗಳನ್ನು ಪ್ರಚೋದಿಸಿದರೂ ಎಲ್ಲವನ್ನು ಮತ್ತೆ ಶೋಧಿಸುವ ಮನಸ್ಥಿತಿ ಮಾನವರ ಮೆದುಳಿನದಾಗಿದೆ. ಶೋಧನೆಯ ನಂತರವೇ ಹೊರ ಜಗತ್ತಿಗೆ ಪುರಾಣಗಳು ಪ್ರವೇಶಿಸಿದ್ದರಿಂದ ಇಲ್ಲಿ ಪಕ್ಷಪಾತದ ನೆಲೆಯನ್ನು ಗುರುತಿಸಬಹುದು.

ಪುರಾಣಗಳು ಜಾಗೃತ ಪ್ರಜ್ಞೆಯ ನೆಲೆಯಲ್ಲಿ ಹೊರಜಗತ್ತನ್ನು ಪ್ರವೇಶಿಸಿದ್ದರ ಫಲವೇ ಅದರ ಪಾರ್ಶ್ವಿಕ ಚಿಂತನೆಗಳು. ಪ್ರತಿಯೊಂದು ಪುರಾಣವು ಆಯಾ ಕಾಲದ ಸಾಮಾಜಿಕ ಮೌಲ್ಯಗಳನ್ನು, ಸಂಸ್ಕೃತಿಗಳನ್ನು ಅತ್ಯಂತ ನಾಜೂಕಾಗಿ ನಿರ್ವಹಿಸುತ್ತವೆ. ಇತಿಹಾಸಕ್ಕಿಂತಲೂ ಪುರಾಣಗಳಲ್ಲಿ ಏಕರೂಪತೆಯನ್ನು ಈ ಕಾರಣದಿಂದಲೇ ಅರಿಯಬಹುದು. ಗಾನ್ ಅಲನ್ ಎನ್ನುವ ಚಿಂತಕಿ ತನ್ನ 'Myth and Ritual' (Karen A Foos, Sonja K Foss, Cindy L Griffin (Ed); 1998, 216-219) ಎನ್ನುವ ಲೇಖನದಲ್ಲಿ ಪುರಾಣವೆಂದರೆ ಸಾಮಾನ್ಯವಾದ ಸುಳ್ಳು, ನಿರಾಧಾರದ ನಂಬಿಕೆ' ಎನ್ನುತ್ತಾಳೆ. ವಾಸ್ತವತೆಯಿಂದ ಬಹುದೂರವಾದ ಪುರಾಣವು ಜನರನ್ನು ವಂಚಿಸುವ ಒಂದು ತಂತ್ರವೂ ಆಗಿದೆ. ಇದೇ ಲೇಖನದಲ್ಲಿ ಆಕೆಯ ಮೂಲ ಅಮೇರಿಕನ್ನರ ಸಂಪ್ರದಾಯದಲ್ಲಿ 'ಪುರಾಣ'ವೆಂಬುದು 'ಆಚರಣೆ'ಯಾಗಿ

ಬಳಕೆಗೊಂಡ ಕುರಿತಾಗಿ ಚಿಂತಿಸಿದ್ದಾಳೆ. ಒಂದು ಭಾಷಿಕ ಸಂರಚನೆಯ ಪರಿಧಿಯೊಳಗೆ ವ್ಯವಸ್ಥೆಗೆ ಅಥವಾ ವ್ಯಕ್ತಿಗೆ ಯಾಜಮಾನ್ಯವನ್ನು ಒಂದು ಸ್ಥಿತಿಯಿಂದ ಸಾಗಿಸುವಂತಹ ವಾಹಕವಾಗಿ ಪುರಾಣವು ಕ್ರಿಯಾಶೀಲವಾಗಿದೆ. ಇದರ ಅದ್ವಿತೀಯವಾದ ಶಕ್ತಿಯ ಬಲದಿಂದಲೆ ಸಮಾಜಕ್ಕೆ ನಿಯಂತ್ರಣದ ಆ ಮೂಲಕ ಸ್ತ್ರೀಯನ್ನು ಹತೋಟಿಯಲ್ಲಿಡುವ ಪ್ರಬಲ ಅಸ್ತ್ರವಾಗಿ ಪುರಾಣವು ಬಳಕೆಗೊಂಡಿದೆ. ಈ ಮೂಲಕವೇ ಜಗತ್ತಿನೊಂದಿಗೆ ವಿಶಿಷ್ಟವಾದ ಬೆಸುಗೆಯನ್ನು ನಿರ್ಮಿಸಿಕೊಂಡಿದೆ.

ಪುರಾಣವು ಒಂದು ನಿಶ್ಚಿತವಾದ ಕಥೆಯಾದರೂ ವ್ಯಕ್ತಿಗಳು ಜಗತ್ತನ್ನು ಅತ್ಯಂತ ಪಾವಿತ್ರ್ಯತೆಯ ನೆಲೆಯಿಂದ ನೋಡಲು ಒತ್ತಾಯಿಸುತ್ತದೆ. ಇದರ ಮೂಲಕ ವ್ಯಕ್ತಿಯು ತನ್ನತನದ ಶೋಧದಲ್ಲಿ ತೊಡಗುತ್ತಾನೆ. ಆ ಕ್ಷಣದಲ್ಲಿ ವಾಸ್ತವ ಹಾಗೂ ಪುರಾಣಗಳ ನಡುವಿನ ವ್ಯತ್ಯಾಸವನ್ನು ಅನುಕ್ರಮಗೊಳಿಸುತ್ತಾನೆ. ಈ ಮೂಲಕವೇ ವ್ಯಕ್ತಿಗತ ಹಾಗೂ ಸಾಮುದಾಯಕ ನೆಲೆಯಲ್ಲಿ ಅರಿವನ್ನು ಮೂಡಿಸಿಕೊಳ್ಳುತ್ತಾನೆ. ಈ ರೀತಿ ವ್ಯಕ್ತಿಯ ಬದುಕಿನಲ್ಲಿ ವಿಜಯಪಾತಕೆ ಹಾರಿಸಿದ ಪುರಾಣವು ಆಚರಣೆಯ ಮೂಲಕವೇ ಜೀವಂತ ವಾಗುಳಿಯಬಯಸುತ್ತದೆ. ಈ ಆಚರಣೆಗಳ ಸಂದರ್ಭವು ಒಬ್ಬ ವ್ಯಕ್ತಿ ಸಮುದಾಯ ಪ್ರದೇಶ, ಕಾಲ, ಕ್ರೂರ ಜೀವನಾವರ್ತುಲ, ದುರಂತದ ಕ್ಷಣಗಳು ಅಥವಾ ಮಹತ್ತರ ಸ್ಥಿತಿಯಲ್ಲಿ ವಿಭಿನ್ನವಾಗುತ್ತದೆ ಎಂಬುದಾಗಿ ಗಾನ್‌ಅಲನ್ ಭಾವಿಸುತ್ತಾಳೆ.

ಅಮೇರಿಕದ ಸ್ತ್ರೀವಾದಿ ವಿಮರ್ಶಕರು ಕವಯಿತ್ರಿಯ ಸಾಧನೆಗಳನ್ನು ಗುರುತಿಸಲು ಪುರಾಣವನ್ನು ಬಳಸಿಕೊಂಡರು. ಹಲವು ಬರಹಗಾರ್ತಿಯರು 'ಪುರಾಣ ವಿಮರ್ಶೆ'ಯನ್ನು ವಿಮರ್ಶಾ ಮಾನದಂಡವಾಗಿಯೂ ಗುರುತಿಸಿಕೊಂಡರು. ಆದರೆ ಪೌರಾಣಿಕತೆಯನ್ನು ಸಂಯೋಜಿಸುವ, ನಿರ್ದೇಶಿಸುವ ಕುರಿತಾಗಿ ಮತ್ತು ಪುರಾಣ ವಿಮರ್ಶೆಯ ಕಾರ್ಯತಂತ್ರದ ಕುರಿತಾಗಿಯೂ ಇನ್ನೂ ಗೊಂದಲವಿದೆ. ಮೇರಿಡಾಲಿಯನ್ನು ಪ್ರಮುಖ ಪುರಾಣ ಸ್ತ್ರೀವಾದಿ ಚಿಂತಕಿಯಾಗಿ ಗುರುತಿಸಬಹುದು. ಆಕೆಯು ತನ್ನ 'Gynecology' ಕೃತಿಯಲ್ಲಿ ಪುರಾಣವನ್ನು ಸ್ತ್ರೀನಿಷ್ಠ ದೃಷ್ಟಿಕೋನದಿಂದ ವ್ಯಾಖ್ಯಾನಿಸುತ್ತಾಳೆ.

೧. ಪುರಾಣದ ಸ್ತ್ರೀ ಪಾತ್ರಗಳ ನಡವಳಿಕೆಯ ಮಾದರಿಗಳನ್ನು ಸ್ತ್ರೀಪರ ಚಿಂತನೆಯಿಂದ ಅರಿತುಕೊಳ್ಳುವುದು.
೨. ಅಂತಹ ನಡವಳಿಕೆಯ ಮಾದರಿಗಳ ಕುರಿತಾಗಿ ವಿಶೇಷವಾದ ಆಸ್ಥೆವಹಿಸುವುದು.
೩. ಪುನರ್ವಿಮರ್ಶೆ ಮಾಡುವುದು.

ಮೇರಿಡಾಲಿಯು ಪುರಾಣವನ್ನು ಸ್ತ್ರೀ ನಡಾವಳಿಯ ಮಾದರಿಸಂಹಿತೆಯಾಗಿ ಮೊದಲು ಗುರುತಿಸುತ್ತಾಳೆ. ಹಾಗೆಯೇ ಸ್ತ್ರೀ ಬದುಕಿನ ಭಯ, ನಿರೀಕ್ಷೆ, ಬಯಕೆ ಹಾಗೂ ಸಂಬಂಧಗಳ ವಿನ್ಯಾಸದ ನೆಲೆಯಲ್ಲಿ ಗ್ರಹಿಸುತ್ತಾಳೆ. ಕಾರ್ಲ್ ಜಿ ಯೂಂಗ್‌ನ ಆರ್ಷೇಯ ಪ್ರತೀಕಗಳ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯವನ್ನು ಅಧ್ಯಯನ ಮಾಡುತ್ತಾಳೆ. ಇದಕ್ಕೆ ಪೂರಕವಾಗಿ ಯಹೂದಿಗಳು ಹಾಗೂ ರೋಮನ್ ಕ್ಯಾಥೊಲಿಕ್ ಸಂಪ್ರದಾಯದ ಪುರಾಣಗಳನ್ನು

ವಿಶ್ಲೇಷಿಸಿದ್ದಾಳೆ. ಮಾನಸಿಕ ಹಾಗೂ ಮನೋದೈಹಿಕ ದ್ವಂದ್ವಗಳ ಮಾದರಿಯಾಗಿ ಇಲ್ಲಿನ ಪುರಾಣ ಪ್ರತೀಕಗಳಾದ 'ಮೆಡೂಸ' ಹಾಗೂ 'ಕಾಸಾಂಡ್ರ'ದ ಪ್ರತಿಮೆಗಳನ್ನು ಮತ್ತೆ ಬಳಸುತ್ತಾಳೆ. ಸ್ತ್ರೀಪುರುಷರ ಭಾವನಾತ್ಮಕ ಸಂಬಂಧಗಳು ಲಿಂಗದ ನೆಲೆಯಲ್ಲಿ ಹೇಗೆ ವಿಭಿನ್ನವಾಗಿದೆ ಎಂಬುದನ್ನು ಈ ಪ್ರತೀಕಗಳ ಮೂಲಕ ಗ್ರಹಿಸಿದ್ದಾಳೆ. ಪುರಾಣಗಳ ಅಧ್ಯಯನ ಮತ್ತು ಮರುಸೃಷ್ಟಿಯ ಅಗತ್ಯವನ್ನು ಈ ಬಗೆಯಲ್ಲಿ ತಿಳಿಸಿದ್ದಾಳೆ.

"Study of Myths is important not to simply replace patriarchal myths with feminine versions but to elicit fresh cultural insights by reversing the myths" (William J. Handy, Max Westbrook (eds); 1976, 94).

ಪ್ರತಿಯೊಂದು ಪುರುಷ ನಿರ್ಮಿತ ಪುರಾಣಗಳಲ್ಲಿ ಸ್ತ್ರೀಯರ ಬದುಕು ವಾಸ್ತವಕ್ಕಿಂತ ವ್ಯತಿರಿಕ್ತವಾದ ಬಗೆಯನ್ನು ಈಕೆ ಕಂಡುಕೊಂಡಿದ್ದಾಳೆ. ಹಾಗೆಯೇ ಪುರುಷನ ಮನೋಲೋಕಕ್ಕೆ ಹೊಂದಿಕೆಯಾಗುವ ಪಾತ್ರಗಳನ್ನು ಮತ್ತೆ ಮರುಸೃಷ್ಟಿಸಿದ್ದರ ಕುರಿತಾಗಿಯೂ ಆಕೆ ಗಮನ ಸೆಳೆಯುತ್ತಾಳೆ. ಅಲ್ಲದೇ ಸ್ತ್ರೀ ಬರಹಗಾರರು ಪುರಾಣಗಳನ್ನು ಮತ್ತೆ ಮರುಸೃಷ್ಟಿಸುವ ಸಂದರ್ಭದಲ್ಲಿ ಯಾವುದಕ್ಕೆ ಆದ್ಯತೆ ನೀಡಬೇಕೆಂಬುದರ ಮಾರ್ಗದರ್ಶನವನ್ನು ಆಕೆ ನೀಡಿದ್ದಾಳೆ. "Women writers think differently from male writers. Because they are socially conditioned to do so they choose fictional patterns and motifs which enact this difference and persistently use typical thems from myth" (William J. Handy, Max Westbrook (eds); 1976, 94) ಸ್ತ್ರೀಯ ಬದುಕು ನಿರ್ಬಂಧಿತ ಬದುಕಾದ್ದರಿಂದಲೆ ಆಕೆಯ ಆಯ್ಕೆಯ ಸಾಧ್ಯತೆಗಳು ಪುರುಷ ಬರಹಗಾರರಿಗಿಂತ ವಿಭಿನ್ನವಾಗಿರಬೇಕಾಗಿರುತ್ತದೆ. ಅನ್ನಿಸ್ ಪ್ರತ್ ಹಾಗೂ ಮೇರಿಡಾಲಿ ಯವರು ಪುರಾಣ ಸ್ತ್ರೀವಾದಿ ವಿಮರ್ಶೆಯ ಮೂಲಕ ಪುರಾಣದ ಕಥೆಗಳಿಗೆ ಸಮಕಾಲೀನ ಪ್ರಸ್ತುತತೆಯನ್ನು ನೀಡುತ್ತಲೇ ಹೊಸ ಆಶಯದ ಪಾತ್ರಗಳನ್ನು ನಿಗದಿಗೊಳಿಸಿದ್ದಾರೆ.

ಈ ಆಲೋಚನೆಗಳನ್ನು ಹೊಸಗನ್ನಡ ಸಾಹಿತ್ಯದಲ್ಲಿನ ಪೌರಾಣಿಕ ಸ್ತ್ರೀಪಾತ್ರಗಳಿಗೂ ಅನ್ವಯಿಸಬಹುದು. ಈ ಮೇಲಿನ ಆಲೋಚನಾಧಾರೆಗಳು ಪ್ರತಿಸೃಷ್ಟಿ ಅಗತ್ಯವನ್ನು ನೇರವಾಗಿ ಹೇಳದಿದ್ದರೂ ಮೇರಿಡಾಲಿಯು ಒಟ್ಟು ಬರವಣಿಗೆಯನ್ನು ಗಮನಿಸಿದಾಗ ಪಿತೃಪ್ರಧಾನ ವ್ಯವಸ್ಥೆ ರೂಪಿಸಿದ ನಿಯಮಗಳನ್ನು ಮೀರಿ ಪ್ರತ್ಯೇಕ ಚಹರೆಯನ್ನುಳಿಸಿಕೊಂಡ ಕೆಲವು ಸ್ತ್ರೀಪಾತ್ರಗಳನ್ನು ಉದಾಹರಿಸಿರುವುದು ಕಂಡು ಬರುತ್ತದೆ.

'Feminine mystake' ಈ ಕೃತಿಯಲ್ಲಿ ಲೈಂಗಿಕ ಪಾತ್ರಗಳ ನಿರ್ವಹಣೆ ಹಾಗೂ ಖಾಸಗಿ ಬದುಕಿನಲ್ಲಿ ಸ್ತ್ರೀಯ ಸ್ಥಾನಮಾನಗಳ ಸೂಚನೆಯ ಮಾನದಂಡವಾಗಿ ಹಾಗೂ ಅದಕ್ಕೆ ಉತ್ತರವಾಗಿ ಪುರಾಣಗಳ ಪ್ರತಿಮೆಗಳನ್ನು ವರ್ಜೀನಿಯಾ ವುಲ್ಫ್ ಬಳಸಿದ್ದಾಳೆ. 'ಮೆಡೂಸ' ಸಾಂಪ್ರದಾಯಕ ಸ್ತ್ರೀತ್ವದ ಸಂಕೇತವಾಗಿದ್ದಾಳೆ. ಗ್ರೀಕೋ ರೋಮನ್ ಪುರಾಣಗಳು ಪುರುಷಪ್ರಧಾನ ದೃಷ್ಟಿಕೋನದಿಂದ ರಚನೆಗೊಂಡವು. ಅವುಗಳೇ ಸ್ತ್ರೀಯ ಮನೋಭೂಮಿಕೆ ಯನ್ನಾಳುತ್ತಿವೆ. ಆದರೆ ಪುರಾಣಗಳು ಮೂಲಭೂತವಾಗಿ ಸ್ತ್ರೀಯವು - ಆದರೆ ಕ್ರಮೇಣ

ಪುರುಷ ತನ್ನದಾಗಿಸಿಕೊಂಡ ಎಂಬುದನ್ನು ಈ ಕೃತಿಯಲ್ಲಿ ವರ್ಜೀನಿಯಾ ವುಲ್ಫ್ ಗುರುತಿಸಿದ್ದಾಳೆ. ನಾರ್ಥರ್ ಫ್ರಾಯ್‌ಗೆ ಪುರಾಣವು ಧರ್ಮದ ಸ್ಥಳಾಂತರಿತ ರೂಪವಾಗಿ, ರಮ್ಯ, ರೋಚಕ, ದುರಂತ, ವ್ಯಂಗದ ನೆಲೆಯಾಗಿ ಹಾಗೂ ಸ್ವತಂತ್ರ ಭೌತಿಕ ಸಂರಚನೆಯ ನೆಲೆಯಾಗಿ ಭಾಸವಾದರೆ, ಮೇರಿಡಾಲಿಯಂತ ಸ್ತ್ರೀವಾದಿ ವಿಮರ್ಶಕಿಯರಿಗೆ ವಿಭಿನ್ನ ಅನುಭವ ನೀಡಿದೆ.

'The Lost Tradition' ಎನ್ನುವ ಕೃತಿಯಲ್ಲಿ ಪುರಾಣವನ್ನು ಹೇಗೆ ಸಾಹಿತ್ಯ ವಿಮರ್ಶೆಯ ಸಾಧನವಾಗಿ ಬಳಸಿಕೊಳ್ಳಲಾಗಿದೆ ಎಂಬುದನ್ನು ಮೇರಿಡಾಲಿ, ರಿಚ್, ಅನ್ನಿಸ್ ಪ್ರತ್ ಗುರುತಿಸಿದ್ದಾರೆ. ಇವರ ಪ್ರಕಾರ ಪುರಾಣಗಳಲ್ಲಿ ನಿರ್ವಚಿತರಾದ ಮಹಿಳೆಯರು ಪುರುಷ ಚಿಂತನೆಯಿಂದ ವಿಮುಕ್ತರಾಗಿಲ್ಲ ಎಂಬುದಾಗಿದೆ. ಎಂಪ್ಸ್‌ನ, ನಾರ್ಥರ್ ಫ್ರಾಯ್ ಅಕಾಡೆಮಿಕ್ ಶಿಸ್ತಾಗಿ ಪುರಾಣವನ್ನು, ಪುರಾಣ ವಿಮರ್ಶೆಯನ್ನು ಮೊದಲಿಗೆ ಬಳಸಿದವ ರಾಗಿದ್ದಾರೆ. ಸಾಹಿತ್ಯದಲ್ಲಿನ ತಾತ್ವಿಕ ನೆಲೆ ನಿಲುವುಗಳಿಗೆ ಪೂರಕವಾಗಿ ಹಾಗೂ ಸಾಹಿತ್ಯಕ ಸಂರಚನೆಯ ಪರಿಧಿಯೊಳಗಿನ ಬಾಹ್ಯಶಕ್ತಿಯಾಗಿ ಇವರು ಬಳಸಿದ್ದಾರೆ. ನಾರ್ಥರ್ ಫ್ರಾಯ್ ೧೯೫೭ರಲ್ಲಿ ಬರೆದ Anatomy of criticism' ಈ ಕೃತಿಯಲ್ಲಿ 'Global Village'ನ ಪರಿಕಲ್ಪನೆಯಾಗಿ ಪುರಾಣವನ್ನು ಗುರುತಿಸುತ್ತಾನೆ. ಆದಿವಾಸಿ ಹಾಗೂ ಬುಡಕಟ್ಟು ಸಮುದಾಯಗಳಲ್ಲಿನ ಪುರಾಣವನ್ನು ಅಭ್ಯಸಿಸುವ ಮೂಲಕ ೧೯೫೦-೧೯೬೦ರ ಹೊತ್ತಿಗೆ ಸಾಹಿತ್ಯಿಕ ವಲಯದಲ್ಲಿ ಪುರಾಣ ವಿಮರ್ಶೆಯನ್ನು ಭದ್ರಗೊಳಿಸುತ್ತಾನೆ.

೧೯೪೦-೫೦ರ ದಶಕದಲ್ಲಿ ಅಮೇರಿಕಾದ ಸಾಹಿತ್ಯವಲಯದ ಬರಹಗಾರ್ತಿಯರು ತಮ್ಮ ವೈಯುಕ್ತಿಕ ಭಾವನೆಗಳ ಅಭಿವ್ಯಕ್ತಿಗಾಗಿ ಮತ್ತು ಅದರ ಪ್ರಚುರತೆಗೆ ಈಗಾಗಲೇ ಸಿದ್ಧವಿದ್ದ ಪುರಾಣವನ್ನು ಒಂದು ಸಾಧನವನ್ನಾಗಿ ಮಾಡಿಕೊಂಡರು. ಯುದ್ಧಪೂರ್ವಕಾಲದ ಬರಹಗಾರ್ತಿಯರು ಸಾಂಪ್ರದಾಯಕ ಸ್ತ್ರೀವಾದದ ವಿಚಾರಗಳನ್ನು ವಿರೋಧಿಸುವ ನೆಲೆಯಲ್ಲೂ ಪೌರಾಣಿಕ ಅಂಶಗಳನ್ನು ಬಳಸಿದರು. ಲೂಯಿಸ್ ಜೋಗನ್ ಎನ್ನುವ ಕವಯಿತ್ರಿ 'Tears in sleep' ಎಂಬ ಕವನ ಸಂಕಲನದಲ್ಲಿ ಒಬ್ಬ ಆದರ್ಶಯುತ ಮಹಿಳೆಯ ಪಾತ್ರದ ವೈಭವೀಕರಣಕ್ಕಾಗಿ ಪುರಾಣದ ಪಾತ್ರಗಳಾದ 'ಮೆಡೂಸ' ಮತ್ತು 'ಕಾಸಾಂಡ್ರ' ಎನ್ನುವ ಕ್ರೂರವ್ಯಕ್ತಿಗಳನ್ನು ಬಳಸುತ್ತಾಳೆ. ಹಿಲ್ಡಾ ದರೋತಿ ಎನ್ನುವ ಚಿಂತಕಿ 'Triology' ಕೃತಿಯಲ್ಲಿ ಪ್ರಾಚೀನ ಪುನರ್ಜನ್ಮದ ಸಂಕೇತಗಳಿಗೋಸ್ಕರ ಪುರಾಣ, ಇತಿಹಾಸವನ್ನು ಆಮೂಲಾಗ್ರವಾಗಿ ಪರಿಶೀಲಿಸುತ್ತಾಳೆ. ಸ್ತ್ರೀ ಬದುಕಿನ ಸಮಗ್ರ ಚಿತ್ರಣ ಅರಿಯಬೇಕಾದಲ್ಲಿ ಎರಡು ವೈರುಧ್ಯದ ನೆಲೆಗಳಾದ ಪುರಾಣ ಮತ್ತು ಇತಿಹಾಸವನ್ನು ಏಕತ್ರಗೊಳಿಸಬೇಕು ಎಂಬ ನಿಲುವು ತಳೆಯುತ್ತಾಳೆ.

ಡೆರಿಡಾನ 'Deconstruction Theroy' ಹಾಗೂ ಝಾಕ್ ಲಕಾನನ 'ಮನೋವಿಶ್ಲೇಷಣಾ ಸಿದ್ಧಾಂತಗಳು' ಈ ಸ್ತ್ರೀವಾದಿ ಚಿಂತನೆಯ ತಾತ್ವಿಕ ನೆಲೆಯಾಗಿವೆ. ಡೆರಿಡಾನ ನಿರ್ವಚನವಾದವು ಪರಸ್ಪರ ಸಾಪೇಕ್ಷತೆಯ ಮತ್ತು ವೈರುಧ್ಯದ ದ್ವಿಸ್ತರದಲ್ಲಿ ಸಾಗುತ್ತದೆ. ಈ ದ್ವಂದ್ವತತ್ವಗಳಲ್ಲಿ

ಎರಡನೆಯ ಅಂಶವು ಮೊದಲನೆ ಅಂಶಕ್ಕೆ ಅಧೀನವಾಗಿರುತ್ತದೆ. ಈ ಅಧೀನತೆಯ ಕಾರಣ ದಿಂದಲೇ ಮೊದಲನೇ ಅಂಶಕ್ಕೆ ಮಾನ್ಯತೆ ದೊರೆತಿದೆ ಎಂಬುದು ಈತನ ವಾದ. ಜ್ಞಾನ/ಅಜ್ಞಾನ, ಹಗಲು/ರಾತ್ರಿ, ಬೆಳಕು/ನೆರಳು, ಪುರುಷ/ಸ್ತ್ರೀ ಈ ನೆಲೆಗಳಲ್ಲಿ ಮೊದಲನೆಯದು ಶ್ರೇಷ್ಠವಾದರೆ ಎರಡನೆಯದು ಕನಿಷ್ಟವಾಗಿದೆ. ಪುರಾಣ ಅಥವಾ ಪುರಾಣವನ್ನಾಧರಿಸಿದ ಸಾಹಿತ್ಯ ಕೃತಿಗಳು ಸಹಾ ಇದೇ ದ್ವಂದ್ವಗಳನ್ನು ಒಳಗೊಂಡಿವೆ. ಇಲ್ಲೆಲ್ಲಾ ಪುರುಷನೇ ಕೇಂದ್ರಬಿಂದುವಾಗಿದ್ದಾನೆ. ಈ ರೀತಿ ಅಧೀನವಾಗುಳಿದ ಇವುಗಳನ್ನು ಕೇಂದ್ರಕ್ಕೆ ತಂದಾಗ, ವಿರೋಧಗಳನ್ನು ಒಡೆದು ನಿರ್ವಚನಗೊಳಿಸಿದಾಗ ಅವು ಸ್ಥಾಪಿಸಿದ ವ್ಯವಸ್ಥೆಯನ್ನೇ ಬುಡಮೇಲು ಮಾಡಲು ಸಾಧ್ಯ. ಈ ಮೂಲಕ ಸ್ತ್ರೀ/ಪುರುಷ ಎಂಬ ವೈರುಧ್ಯದ ನೆಲೆಯನ್ನು ತೊಡೆದು ಹಾಕುವ ಮೂಲಕ ಸಾಮಾಜಿಕ ಲಿಂಗ ಅಸಮಾನತೆಯನ್ನು ತೊಲಗಿಸಲು ಸಾಧ್ಯ.

ಈ ಹಿನ್ನೆಲೆಯಲ್ಲಿ ಫ್ರೆಂಚ್ ಸ್ತ್ರೀವಾದಿಗಳು, ವಿಮರ್ಶಕರು ಸಾಹಿತ್ಯ ಮತ್ತು ಪಿತೃಪ್ರಧಾನ ತಾತ್ವಿಕತೆಗಳಿಗೆ ಇರುವ ಒಳಸಂಚಿನ ಸಂಬಂಧವನ್ನು ಅರ್ಥ ಮಾಡಿಕೊಳ್ಳಲು ಪುರಾಣವನ್ನು ಒಡೆದು ಓದಲು, ಸ್ತ್ರೀಯನ್ನು ನೇಪಥ್ಯಕ್ಕೆ ತಳ್ಳಿದ ಪರಂಪರೆ ಮತ್ತು ಪುರಾಣವನ್ನು ತಲೆಕೆಳಗು ಮಾಡಲು ಡೆರಿಡಾನ ಈ ನಿರಚನವಾದವನ್ನು ಬಳಸಿಕೊಳ್ಳುತ್ತಾರೆ. ಈ ಚಿಂತಕರಲ್ಲಿ ಹೆಲೆನ್ ಸಿಕ್ಸೆರಾ, ಲ್ಯೂಸಿ ಇರಿಗೆರೆ, ಜೂಲಿಯಾ ಕ್ರಿಸ್ತೀವ ಪ್ರಮುಖರು. ಪಾಶ್ಚಾತ್ಯ ಹಾಗೂ ಪೌರಾತ್ಯ ಚಿಂತನೆಗಳೆರಡರಲ್ಲೂ ಈ 'ಸರ್ವಶಕ್ತ'ನು ಪುರುಷನೇ ಆಗಿದ್ದಾನೆ. ಅಂದರೆ ಪುರುಷನೇ ಪರಮ ಕೇಂದ್ರವಾಗಿ ಹೊಂದಿ ಬೆಳೆದ ಜ್ಞಾನವನ್ನೇ ಗುರುತಿಸಬಹುದು. ಈ ಮೇಲೆಯೆ ಪ್ರಸ್ತಾಪಿಸಿದ ಜ್ಞಾನ/ಅಜ್ಞಾನ, ಬುದ್ಧಿ/ಭಾವನೆ, ಪುರುಷ/ಸ್ತ್ರೀ ಈ ವೈರುಧ್ಯದ ಭ್ರಮೆ ತರ್ಕಗಳನ್ನು ಭಂಜಿಸಿ ನೋಡುವ ನಿರಚನವಾದದ ಮೂಲಕ ಸ್ತ್ರೀವಾದಿಗಳು ತಮ್ಮ ಅವಶ್ಯಕತೆಗನುಗುಣ ವಾದ ಸಿದ್ಧಾಂತವನ್ನು ಬಲಪಡಿಸಲು ಸಾಧ್ಯವಾಗಿದೆ. ಪುರಾಣ ಸಾಹಿತ್ಯದ ಸಂದರ್ಭಕ್ಕೆ ಈ ಸಿದ್ಧಾಂತವನ್ನು ಅನ್ವಯಿಸಿದಾಗ ಅಥವಾ ಪೌರಾಣಿಕ ಸ್ತ್ರೀಪಾತ್ರಗಳಿಗೆ ಈ ಮೌಲ್ಯವನ್ನು ಅನ್ವಯಿಸಿದಾಗ ಎಷ್ಟೋ ಸ್ತ್ರೀಪ್ರಧಾನ ಧಾರೆಗಳನ್ನು ಮತ್ತೆ ಮರುಕಟ್ಟಲು ಸಾಧ್ಯ.

ಸತ್ಯಭಾಮ-ಸಾವಿತ್ರಿ ಕತೆಯಲ್ಲಿನ ಸತ್ಯವಾಹನ ಅಕಾಲಿಕ ಮರಣಹೊಂದಿದಾಗ ಆತನ ಪತ್ನಿ ಸಾವಿತ್ರಿಯ ಪ್ರೀತಿ ಛಲದ ಹೊರತು ಸತ್ಯವಾಹನನಿಗೆ ಅಸ್ತಿತ್ವವೇ ಇಲ್ಲವೆನ್ನಬಹುದು. ಸಾಮಾಜಿಕ ವ್ಯವಸ್ಥೆಯಲ್ಲಿ ಪತ್ನಿಯನ್ನುಳಿದು ಪತಿಗೆ ಬದುಕೇ ಇಲ್ಲ ಎಂಬುದನ್ನು ಹೀಗೆ ಅರ್ಥೈಸಬಹುದು ಅಥವಾ ಅಹಲ್ಯೆಯ ಹೊರತಾದ, ಸೀತೆಯ ಹೊರತಾದ ರಾಮನಿಗೆ ಅಸ್ತಿತ್ವವಿಲ್ಲ. ಈ ಬಗೆಯಲ್ಲಿ ಪುರಾಣಗಳಲ್ಲಿ ಅಂಚಿಗೆ ತಳ್ಳಲ್ಪಟ್ಟ, ಪೂರಕವಾದ ಪಾತ್ರಗಳೇ ಮಹಿಳಾ ಸಾಹಿತ್ಯದಲ್ಲಿ ಕೇಂದ್ರಕ್ಕೆ ಬರುವ ಮೂಲಕ ಹೊಸ ಮಾದರಿಗಳಾಗಿದ್ದಾರೆ.

ಪುರಾಣಗಳು ಮೇಲುನೋಟಕ್ಕೆ ಕಾಣುವುದಕ್ಕಿಂತಲೂ ಭಿನ್ನವಾದ ನಿಜಾರ್ಥವೊಂದನ್ನು ತನ್ನೊಳಗೆ ಬಚ್ಚಿಟ್ಟುಕೊಂಡಿರುತ್ತವೆ. ಪುರಾಣರಚನಾಕಾರನ ಉದ್ದೇಶವೇ ರಹಸ್ಯವಾಗಿರಲೂ ಬಹುದು. ಕಾಲಗತಿಯಲ್ಲಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಅಗತ್ಯಗಳಿಗುಣವಾಗಿ ಅವುಗಳನ್ನು ತಿರುಚಲಾಗಿದೆ. ಸಮಕಾಲೀನ ಮೌಲ್ಯಗಳನ್ನು ಅದರೊಳಗೆ ತುಂಬಲಾಗಿದೆ.

ಏಕೆಂದರೆ ಪುರಾಣಗಳು ನಿರಂತರ ಸ್ಥಿತಿಸ್ಥಾಪಕತ್ವ ಗುಣವನ್ನು ಹೊಂದಿರುವುದರಿಂದ ಈ ರೀತಿಯ ಬದಲಾವಣೆ ಸುಲಭವಾಗಿದೆ. 'ಪುರಾಣವೆಂದರೆ ಸಾಹಿತ್ಯದ ಗರ್ಭಕೋಶ'ವೆಂಬ ಮಾತುಗಳು ಇದನ್ನೇ ತಿಳಿಸುತ್ತವೆ.

ವರ್ತಮಾನದಲ್ಲಿನ ಸ್ತ್ರೀಯ ದುರಂತಕ್ಕೆ ಕಾರಣಗಳನ್ನು ಅರಿಯಬೇಕಾದಲ್ಲಿ ಭೂತಕಾಲದ ಕುರಿತಾದ ಜ್ಞಾನ ನಮಗೆ ಬೇಕು. ಭೂತದ ಅಥವಾ ಗತಪಳಿಯುಳಿಕೆಗಳ ಬಲದಿಂದಲೆ ವರ್ತಮಾನಕ್ಕೆ ಬೇಕಾದಂತೆ ಭೂತವನ್ನು ಸರಿಪಡಿಸಲಾಗದಿದ್ದರೂ ಮರುನಿರ್ಮಿಸಲು ಸಾಧ್ಯ ವಾಗುತ್ತದೆ. ಕಾಲಾನಂತರದ ಈ ಮರುನಿರ್ಮಾಣ ಮತ್ತೆ ಭೂತದ ಪಳೆಯುಳಿಕೆಯ ಗರ್ಭದಲ್ಲಿ ಸೇರಿ ಹೋಗುತ್ತವೆ. ಸದ್ಯದ ಸ್ಥಿತಿಯಲ್ಲಿ ಭಾರತೀಯ ಸಂದರ್ಭದ ಚರಿತ್ರೆ, ಪುರಾಣಗಳು ಏಕಪಕ್ಷೀಯವಾಗಿವೆ. ಪ್ರಬಲ ಸಮುದಾಯದ ಅಥವಾ ಪಿತೃಪ್ರಧಾನತೆಯ ಹಿತಾಸಕ್ತಿಯ ರಾಜಕಾರಣವೇ ಅಸಂಖ್ಯಾತ ಸಮುದಾಯವನ್ನು ಅಂಚಿಗೆ ತಳ್ಳಿರುವಂತೆ ಸ್ತ್ರೀಯನ್ನೂ ತಳ್ಳಿದೆ. ದಮನಕ್ಕೊಳಗಾದ ಅಸಂಖ್ಯಾತ ಕೆಳವರ್ಗದವರನ್ನು ಒಳಗೊಂಡಂತೆ ಸ್ತ್ರೀಯೂ ಅನ್ಯರು ರಚಿಸಿದ ಪುರಾಣಗಳಲ್ಲಿ ಅಚ್ಚಿನ ಗೊಂಬೆಯಾಗಿ ಎರಕಹೊಯ್ಯಲ್ಪಟ್ಟಿದ್ದಾಳೆ. ಇಂತಹ ಮಾದರಿ ಗಳನ್ನು ಕರಗಿಸುವ, ತಿದ್ದುವ, ಕೆತ್ತುವ ಮೂಲಕ ಈ ರೀತಿ ಕೆತ್ತನೆಗೊಂಡ ಪ್ರತಿಮೆಗಳ ಮೂಲಕವೇ ತಮ್ಮನ್ನು ಕಂಡುಕೊಳ್ಳುವ ಪ್ರಯತ್ನವನ್ನು ಹೊಸಗನ್ನಡ ಮಹಿಳಾ ಸಾಹಿತ್ಯದ ಪೌರಾಣಿಕ ಸ್ತ್ರೀಪಾತ್ರಗಳ ಸಂದರ್ಭದಲ್ಲಿ ಕಾಣುತ್ತೇವೆ.

ಸ್ತ್ರೀಯರ ವರ್ತಮಾನದ ಬದುಕನ್ನು ನಿಯಂತ್ರಿಸುವ ಬಹುಮುಖ್ಯ ತಂತ್ರವಾಗಿ ಪಿತೃಪ್ರಧಾನ ವ್ಯವಸ್ಥೆಯು ತನ್ನ ಹಿತಾಸಕ್ತಿಗೆ ಮಾರಕವಾದ ಪ್ರಸಂಗ ಅಥವಾ ಪ್ರತಿಮೆಗಳನ್ನು ಮರೆಮಾಚುವ ಹುನ್ನಾರ ನಡೆಸುತ್ತದೆ. ಈ ರೀತಿಯಲ್ಲಿ ಸಮಷ್ಟಿಯ ಸುಪ್ತಚಿತ್ರದ ಸೃಷ್ಟಿಯಾದ ಈ ಪುರಾಣ ಕಥೆಗಳು ಕಾಲದಿಂದ ಕಾಲಕ್ಕೆ ಆ ಕಾಲದ ಮೌಲ್ಯಗಳು ಹಾಗೂ ಸಮಷ್ಟಿಯ ಸ್ವೀಕರಣದ ನೆಲೆಯಲ್ಲಿ ಹಿಗ್ಗುತ್ತ, ಕುಗ್ಗುತ್ತ ಹೋಗಿವೆ. "ಪುರಾಣವನ್ನಾಧರಿಸಿದ ಕೃತಿ ಯೊಂದನ್ನು ವಿಮರ್ಶಿಸುವಾಗ 'ವಸ್ತುತತ್ವ' ಅಧ್ಯಯನದಲ್ಲಿ ಪುರಾಣದ ಯಾವ ಯಾವ ಅಂಶಗಳ ಮೇಲೆ ಯಾವ ಯಾವ ಕಾಲದಲ್ಲಿ ಒತ್ತುಬಿದ್ದಿದೆ ಮತ್ತು ಹಾಗಾಗಲು ಕಾರಣವೇನಿರ ಬಹುದೆಂಬ ಕಡೆಗೂ, ಕೆಲವೊಂದು ಪುರಾಣಗಳು ಆಗಾಗ ಏಕೆ ತಲೆಮರೆಸಿಕೊಳ್ಳುತ್ತವೆ ಮತ್ತು ಪುನಃ ತಲೆಯೆತ್ತುತ್ತವೆ ಎಂಬ ಕಡೆಗೂ ವಿಮರ್ಶಕರ ಗಮನ ಸೆಳೆಯಲಾಗುತ್ತದೆ" (ಕೆ.ಎಲ್. ಗೋಪಾಲಕೃಷ್ಣಯ್ಯ, ೧೯೯೦, ೮೨) ಎಂಬ ಮಾತು ಈ ಮೇಲಿನ ಹೇಳಿಕೆಯನ್ನೇ ಸಮರ್ಥಿಸುತ್ತದೆ. ಪಿತೃಪ್ರಧಾನ ವ್ಯವಸ್ಥೆಯ ಪ್ರಧಾನ ಧಾರೆಯು ಕಟ್ಟಿದ, ರೂಪಿಸಿದ ಪುರಾಣಗಳು, ಅಲ್ಲಿಯ ಸ್ತ್ರೀಪಾತ್ರಗಳು ಅಸಮಾನತೆಯ ನೆಲೆಯಲ್ಲಿಯೇ ನಿರ್ವಚಿತವಾಗಿವೆ. ಹಾಗೆಯೇ ಸ್ತ್ರೀಯರ ಬದುಕಿನ ನಿಯಂತ್ರಕ ಶಕ್ತಿಗಳಾಗಿವೆ. ಆ ಮೂಲಕ ಸಾಮಾಜಿಕ ನಿಯಂತ್ರಣದ ಸಾಧನವಾಗಿವೆ. ಪುರುಷನಿರ್ಮಿತ ಈ ಪುರಾಣಗಳಲ್ಲಿ ಪುರುಷನ ಭೋಗದ ವಸ್ತುವಾಗಿ, ಆಲಂಕಾರಿಕ ವಸ್ತುವಾಗಿ, ದಾಸಿ, ಸೇವಕಳಾಗಿ ಮಹಿಳೆ ನಿರ್ವಚಿತಳಾಗಿದ್ದಾಳೆ. ಕೌಟುಂಬಿಕ ವಲಯವಲ್ಲಿ ಮಾತೆ, ಮಡದಿ, ಮಗಳು ಎಂಬ ಪಡಿಯಚ್ಚಿನಲ್ಲಿ ರೂಪಿತ

ವಾಗಿದ್ದಾಳೆ. ಪಿತೃಸತ್ತೆಯ ಶ್ರೇಷ್ಠತೆ ಹಾಗೂ ನಿರಂತರತೆಯನ್ನು ಸಂರಕ್ಷಿಸುವ ಕಾವಲುಗಾರಳಾಗಿ ಈ ಮೌಲ್ಯಗಳನ್ನು ಮುಂದಿನ ಪೀಳಿಗೆಗೆ ಸಾಗಿಸುವ ವಾಹಕವಾಗಿ ದುಡಿದಿದ್ದಾಳೆ ಹೊರತು ಪುರಾಣಗಳಲ್ಲಿ ಬರುವ ಇವರಾರಿಗೂ ಸ್ವತಂತ್ರ ಅಸ್ತಿತ್ವ ಇಲ್ಲ.

ಸ್ತ್ರೀಯರು ಪ್ರಜ್ಞಾವಂತರಾದಂತೆ ವಿದ್ಯಾವಂತರಾದಂತೆ ಪುರಾಣದ ಈ ಮಾದರಿಗಳನ್ನು ಪ್ರಶ್ನಿಸತೊಡಗಿದರು. ಇತಿಹಾಸ, ಪುರಾಣವನ್ನು ಅನುಮಾನದಿಂದ ನೋಡಲಾರಂಭಿಸಿದರು. ಈ ಪ್ರಯತ್ನವೇ ಹೊಸಗನ್ನಡದ ಮಹಿಳಾ ಸಾಹಿತ್ಯದಲ್ಲಿ ಪುನರ್‌ಸೃಷ್ಟಿಯಾದ ಪೌರಾಣಿಕ ಸ್ತ್ರೀಪಾತ್ರಗಳು. ಆ ಮೂಲಕ ಸ್ತ್ರೀ ಬರಹಗಾರರು ಪುರಾಣಗಳಲ್ಲಿ ದಮನಿತ ಪಾತ್ರಗಳನ್ನು ಸ್ತ್ರೀಸಂವೇದನೆಯ ನೆಲೆಯಲ್ಲಿ ಮರುಸೃಷ್ಟಿಸುವ ಮೂಲಕ ಸಮಾಜದಲ್ಲಿ ಉಪೇಕ್ಷೆಗೆ ಒಳಗಾದ ತಮ್ಮ ಸ್ಥಾನಮಾನವನ್ನು ಈ ಪಾತ್ರಗಳ ಮೂಲಕವೇ ಬದಲಾಯಿಸಬಯಸಿದರು ಹಾಗೂ ಸ್ತ್ರೀಶೋಷಣೆಯ ಸ್ವರೂಪ ಹಾಗೂ ಅದರ ಪ್ರಾಚೀನತೆಯೊಂದಿಗೆ ಪ್ರತಿಭಟನಾತ್ಮಕ ಮಾದರಿಗಳನ್ನು ಸ್ತ್ರೀವಿಮೋಚನೆಯ ಸಾಧನವಾಗಿ ಗುರುತಿಸಿಕೊಂಡರು. ಆದ್ದರಿಂದ ಹೊಸಗನ್ನಡ ಮಹಿಳಾ ಸಾಹಿತ್ಯದಲ್ಲಿನ ಪೌರಾಣಿಕ ಸ್ತ್ರೀಪಾತ್ರಗಳ ಮರುಸೃಷ್ಟಿಯು ಸ್ತ್ರೀಯರ ಆತ್ಮಸಂತೋಷಕ್ಕಾಗಿ ಅಲ್ಲ; ಭ್ರಾಮಕವಾದ ಸಮಾಧಾನಕ್ಕಾಗಿಯೂ ಅಲ್ಲ, ಬದಲಿಗೆ ಸ್ತ್ರೀ ಸಮುದಾಯದ ಆತ್ಮವಿಶ್ವಾಸವನ್ನು ಬಲಪಡಿಸುವ ಸಾಧನವಾಗಿದೆ. ಸದ್ಯದ ಸಂಕಟದ ಬದುಕಿಗೂ ಆಶಾಕಿರಣವಾಗಿದೆ. ಆ ಮೂಲಕ ಬದುಕನ್ನು ಅದಮ್ಯವಾಗಿ ಪ್ರೀತಿಸುವ ಜೀವನೋತ್ಸಾಹದ ಚಿಲುಮೆಯಾಗಿದೆ.

"ಸ್ತ್ರೀಯರ ಬದುಕಿಗೆ ಸಂಬಂಧಿಸಿದ ಎಲ್ಲ ದಾಖಲೆಗಳನ್ನು ಮರೆಮಾಡುವ, ನಾಶ ಮಾಡುವ ವಿಧಾನವನ್ನನುಸರಿಸುವ ಮೂಲಕವೇ ಈ ಪುರುಷಪ್ರಧಾನ ಸಮಾಜವು ಮಹಿಳಾ ಚರಿತ್ರೆಯನ್ನು ಅಸಾಧ್ಯವಾಗಿಸುತ್ತಾ ಬಂದಿದೆ. ಆದರೆ ಪುರುಷರು ತನಗೇ ಅರಿವಿಲ್ಲದೆ ತಾನು ದೋಚಿದ ಈ ದಾಖಲೆಗಳನ್ನು ತಾನೇ ಕಟ್ಟಿದ ಪುರಾಣ, ಪುಣ್ಯಕತೆ, ದಂತಕತೆ, ಮಹಾಕಾವ್ಯಗಳಲ್ಲಿ, ದಿನನಿತ್ಯದ ಬಳಕೆಯ ಭಾಷೆಯಲ್ಲಿ ಕೂಡಾ ಬೆರೆಸಿಟ್ಟುಬಿಟ್ಟಿದ್ದಾನೆ. ಈ ಮಿಥ್‌ಗಳು ಪಳೆಯುಳಿಕೆಗಳಾಗಿಬಿಟ್ಟಿವೆ" (ಶ್ರೀಮತಿ ಎಚ್.ಎಸ್., ೨೦೦೬, ೭) ಎನ್ನುವ ಮಾತುಗಳನ್ನು ಭಾರತೀಯ ಪುರಾಣದ ಸಂದರ್ಭಕ್ಕೂ ಅನ್ವಯಿಸಬಹುದು. ಭೂತಕಾಲದ ಈ ಪಳೆಯುಳಿಕೆಗಳ ಸಮಾಧಿಯನ್ನು ಅಗೆಯುವ ಮೂಲಕವೇ ಅಲ್ಲಿನ ಹೆಣ್ಣಿನ ಪಿಸುಮಾತುಗಳನ್ನು ಆಲಿಸಬೇಕಾಗಿದೆ. ಆದ್ದರಿಂದ ಪುರಾಣಗಳು ಸ್ತ್ರೀಪರಂಪರೆಯ ಗ್ರಹಿಕೆ ಬಹುಮುಖ್ಯವಾದ ಆಕರವಾಗಿವೆ.

ಮಹಿಳಾ ಅಧ್ಯಯನ, ಸ್ತ್ರೀವಾದ, ಪುರಾಣ ಸ್ತ್ರೀವಾದ ಇಂತಹ ಗೈರುಹಾಜರಾದ, ಹೂಳಲ್ಪಟ್ಟ, ಅಂಚಿಗೆ ತಳ್ಳಲ್ಪಟ್ಟ ಸ್ತ್ರೀಪಾತ್ರಗಳ ಅನುಭವಲೋಕವನ್ನು ಅನಾವರಣಗೊಳಿಸುವ ಕಾರ್ಯ ಮಾಡುತ್ತಿವೆ. ಈ ಕ್ರಿಯೆಯು ಪುರಾಣ ಸ್ತ್ರೀವಾದದ ಆದ್ಯತೆಯ ವಿಷಯವಾಗಿದೆ. ಆದರೆ ಪುರುಷನಿಗೆ ಬೇಕಾದದ್ದು ತನ್ನ ಹಿತಾಸಕ್ತಿಯನ್ನು ಕಾಪಾಡುವ ತಾನು ನೀಡಿದ ಎಲ್ಲ ಪಾತ್ರಗಳನ್ನು ಸಮರ್ಪಕವಾಗಿ ಅಭಿನಯಿಸುವ, ಜೀವನರಂಗದಲ್ಲಿನ ಅವರ ಪಾತ್ರಾಭಿನಯ

ಮುಗಿದು ತೆರೆಬಿದ್ದರೂ ರಂಗಬಿಡದ ಶಾಶ್ವತ ಪಾತ್ರಧಾರಿಗಳಾಗಲು ಬೇಕಾದ ತಂತ್ರಗಳನ್ನು ಈ ಪುರಾಣ ಕಾವ್ಯಗಳಲ್ಲಿ ಗುರುತಿಸಬಹುದು.

ಈ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯದ ಮೂಲಕ ನಿರ್ವಚಿತವಾದ ಪುರಾಣ ಸ್ತ್ರೀಪಾತ್ರಗಳ ಸ್ತ್ರೀವಾದಿ ದೃಷ್ಟಿಕೋನವನ್ನು ಗುರುತಿಸಿದಾಗ ಈ ಮೌಲ್ಯಗಳ ನಿರಾಕರಣೆ, ಸ್ವೀಕರಣೆ, ಸ್ಪಂದನದ ನೆಲೆ ಗುರುತಿಸಬಹುದು. ಈ ಬಗೆಯಲ್ಲಿ ಸ್ವೀಕೃತವಾದ ಮಾದರಿಗಳನ್ನು ಅವು ಬಿಂಬಿಸುವ ಮೌಲ್ಯಗಳನ್ನು ಇಂದಿನ ಲೇಖಕಿಯರು ಒಪ್ಪದೆ ಅವು 'ಸ್ತ್ರೀಕುಲಕ್ಕೆ ಶಾಪವಾಗಿವೆ' ಎಂಬುದನ್ನು ಕಂಡುಕೊಂಡರು. ಅಂಬೆ-ಅಹಲ್ಯೆಯಂತಹ ಪಾತ್ರಗಳಿಗೆ ಸಹಾನುಭೂತಿ ತೋರಿದರೆ, ಮಾಧವಿಗಾದ ಸ್ಥಿತಿಗೆ ಆಕ್ರೋಶ ವ್ಯಕ್ತಪಡಿಸಿದ್ದಾರೆ. ಸೀತೆ, ಅಹಲ್ಯೆಯರ ಸ್ಥಾನದಲ್ಲಿ ಬೇರೊಬ್ಬಳಿದ್ದಾಳೆ ಹೊರತು ಅವರ ಸ್ಥಿತಿ ಸುಧಾರಣೆಯಾಗದ ಕುರಿತು ಸಾಹಿತ್ಯದ ಮೂಲಕವೆ ಪ್ರತಿಭಟಿಸಿದ್ದಾರೆ. ಪುರಾಣದ ಭವ್ಯ ಪ್ರಭಾವಳಿಯಿರದಿದ್ದರೂ ಈ ಸಮಾಜದ ಸ್ತ್ರೀಯರು ದುರಂತ ಬದುಕನ್ನಪ್ಪುವ ಸ್ಥಿತಿಗೆ ಕ್ರೋಧಗೊಂಡ ಇವರು ಈ ದುರಂತದ ಬೀಜವನ್ನು ಪುರಾಣದ ಈ ಪಾತ್ರಗಳಲ್ಲಿ ಹುಡುಕಿದ್ದಾರೆ. ಮೇರಿಡಾಲಿಯ ಹೇಳಿಕೆಯಂತೆ ಅವುಗಳಿಗೆ ಹೊಸ ರೂಪ ಕೊಡುವ ಪ್ರಯತ್ನ ಮಾಡಿದ್ದಾರೆ.

### ೨.೭. ಮಹಿಳಾ ಜಾನಪದ - ಪುರಾಣ ಮಹಿಳಾ ಜಾನಪದ

ಜಾನಪದವನ್ನು ಸ್ತ್ರೀನಿಷ್ಠ ನೆಲೆಯಲ್ಲಿ ಅಧ್ಯಯನ ಮಾಡುವ ಕ್ರಮವನ್ನು ಮಹಿಳಾ ಜಾನಪದ ಎಂದು ಕರೆದರೆ ಜಾನಪದ ಪುರಾಣ ಕಾವ್ಯಗಳಲ್ಲಿನ ಸ್ತ್ರೀಪಾತ್ರಗಳನ್ನು ಸ್ತ್ರೀನಿಷ್ಠ ನೆಲೆಯಲ್ಲಿ ನಿರ್ವಚಿಸಿದ ಕ್ರಮವನ್ನು ಪುರಾಣ ಮಹಿಳಾ ಜಾನಪದ ಎಂದು ಕರೆಯಬಹುದು. ಶಾಂತಾ ಇಮ್ರಾಪುರ ಅವರು "ಜಾಗತಿಕ ನೆಲೆಯಲ್ಲಿ ಚರ್ಚೆಗೊಳಗಾಗುತ್ತಿರುವ ಸ್ತ್ರೀಸಂಬಂಧಿತ ಧೋರಣೆಗಳಾದ ಲಿಂಗತಾರತಮ್ಯ, ಲೈಂಗಿಕ ಶೋಷಣೆ, ಅಸಮಾನತೆ, ಅಧೀನತೆ, ಸ್ತ್ರೀ ವಿಶಿಷ್ಟತೆ, ಸ್ತ್ರೀ ಸಮಾನತೆ, ಪುರುಷಪ್ರಧಾನ ವ್ಯವಸ್ಥೆಯ ಅಪಾಯಗಳು ಮುಂತಾದ ಋಣಾತ್ಮಕ ಗುಣಾತ್ಮಕ ಗ್ರಹಿಕೆಗಳ ನೆಲೆಯಲ್ಲಿ ಸ್ತ್ರೀವಾದಿ ತಾತ್ವಿಕತೆಯ ಹೊಸ ಬೆಳಕಿನಲ್ಲಿ ಜಾನಪದವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಪುನರ್‌ವ್ಯಾಖ್ಯಾನಿಸುವ ಹೊಸ ಚಿಂತನಾ ಕ್ರಮವೇ ಮಹಿಳಾ ಜಾನಪದ ಅಧ್ಯಯನವಾಗಿದೆ. ಜಾನಪದ ಬದುಕಿನ ಮಹತ್ವದ ಮಾದರಿಯಾಗಿರುವ ಸಾಹಿತ್ಯ ವಸ್ತು ಕಲೆಗಳ ಸೃಷ್ಟಿಯಲ್ಲಿ ಆದಿಮಾನವನ ಸೃಜನಶೀಲತೆಯ ಆ ಸುಳಿವುಗಳು ಮಿಂಚಿರುವಂತೆಯೇ ಸ್ತ್ರೀ ವಿಶಿಷ್ಟ, ಅಭಿವ್ಯಕ್ತಿಯ ಸ್ವರೂಪವು ಸ್ಪಷ್ಟವಾಗಿ ಮೂಡಿದೆ. ಸಾಂಪ್ರದಾಯಿಕ ತಿಳುವಳಿಕೆಗಳ ಆವರಣದಲ್ಲಿ ಹೂತುಹೋಗಿರುವ ಸ್ತ್ರೀಸತ್ವದ ನೈಜ ಸ್ವರೂಪವನ್ನು, ಅಂತಃಶಕ್ತಿಯನ್ನು ಅರಿಯುವ ಮಹತ್ವದ ವಿಧಾನವಾಗಿ ಮಹಿಳಾ ಜಾನಪದವು ನೆರವು ನೀಡುತ್ತದೆ" (ಶಾಂತಾ ಇಮ್ರಾಪುರ, ೨೦೦೧, ೧.೨.) ಎಂದಿದ್ದಾರೆ. ಸ್ಥಾಪಿತ ಹಿತಾಸಕ್ತಿಯ ನೆಲೆಯಲ್ಲಿ ನಿಜವಾದ ಸ್ತ್ರೀ ಕಣ್ಮರೆಯಾಗಿ ಪುರುಷನ ಆಲೋಚನೆಗನುಗುಣವಾಗಿ ನಿರ್ವಚಿತಳಾಗಿದ್ದಾಳೆ. ಅವಳ ಮತ್ತು ಅವಳ ಸೃಜನಶೀಲತೆಯನ್ನು ಗ್ರಹಿಸಬೇಕಾದರೆ, ಅದಕ್ಕೆ ಸೂಕ್ತ ಪ್ರಾತಿನಿಧ್ಯ ದೊರೆಯಬೇಕಾದರೆ ಅವಳ ದೃಷ್ಟಿಕೋನವೇ

ಬೇಕಾಗುತ್ತದೆ ಎಂಬುದನ್ನು ಈ ತಾತ್ವಿಕನೆಲೆಯ ಚಿಂತಕಿಯರು ಕಂಡುಕೊಂಡರು. ಈ ಮೂಲಕ ಅಂಚಿಗೆ ಸರಿಸಲ್ಪಟ್ಟ ಅಥವಾ ಪುರುಷನ ಹಿತಾಸಕ್ತಿ ಕಾಪಾಡುವ ಸಾಹಿತ್ಯದ ಮರುವೈಭವೀಕರಣದ ವಿರುದ್ಧ ಜಾನಪದ ಮಹಿಳಾವಾದಿಗಳು ಹೋರಾಡಿದ್ದಾರೆ. ಸ್ತ್ರೀಯರ ಅಂತಸ್ತವನ್ನು ಅನಾವರಣ ಮಾಡಿದ್ದಾರೆ. ಇದರ ಫಲವಾಗಿ 'ಮಹಿಳಾ ಜಾನಪದ' ಎಂಬ ಚಿಂತನಾಕ್ರಮವೂ ಇಂದು ಜಾನಪದ ಸಾಹಿತ್ಯ ಅಧ್ಯಯನದ ಪ್ರಮುಖ ಚಿಂತನಾಕ್ರಮವಾಗಿ ಬೆಳೆಯುತ್ತಿದೆ. ಕರಾವಳಿ ಜಾನಪದವನ್ನು ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಮಾಡಿದ ಗಾಯತ್ರಿ ನಾವಡ ಅವರು ಸ್ತ್ರೀವಾದಿ ಜಾನಪದವೆಂದು ಮಹಿಳಾ ಜಾನಪದವನ್ನು ಕರೆದಿದ್ದಾರೆ. ಮಹಿಳಾ ಜಾನಪದ ಎನ್ನುವುದು ಕೇವಲ ಗ್ರಾಮೀಣ ಮಹಿಳೆಯರು ಸೃಷ್ಟಿಸಿದ ಸಾಹಿತ್ಯ ಎನ್ನುವ ಸೀಮಿತ ಅರ್ಥದಲ್ಲಿ ಬಳಕೆಯಾಗುತ್ತಿಲ್ಲ, ಬದಲಿಗೆ ಈ ಸಾಹಿತ್ಯವನ್ನು ಸ್ತ್ರೀವಾದಿ ದೃಷ್ಟಿಕೋನದ ವಿಶ್ಲೇಷಣೆಯನ್ನು ಒಳಗೊಂಡಂತೆ ವಿಶಾಲಾರ್ಥದಲ್ಲಿ ಬಳಕೆಯಾಗುತ್ತಿದೆ.

ಮೊದಲಿಗೆ ಪಾಶ್ಚಾತ್ಯ ವಿದ್ವಾಂಸರು ಜಾನಪದ ಸಾಹಿತ್ಯವನ್ನು ಸ್ತ್ರೀವಾದಿ ಚಿಂತನೆಯಿಂದ ಗುರುತಿಸಿದರು. ಒಂದೇ ಜನಪದ ಕಥೆ, ಕಾವ್ಯ, ಕಥನ ಕವನವನ್ನು ಸ್ತ್ರೀಯರು ಹೇಳುವುದಕ್ಕೂ, ಪುರುಷರು ಹೇಳುವುದಕ್ಕೂ ಇರುವ ವ್ಯತ್ಯಾಸವನ್ನು ಗ್ರಹಿಸಿದರು. ಪುರುಷರು ಅವರಿಗೆ ಮುಖ್ಯವಾಗುವ ಸಂದರ್ಭಗಳಲ್ಲಿ ತಲ್ಲೀನತೆ ಹೊಂದಿದರೆ, ಸ್ತ್ರೀಯರಲ್ಲಿ ತಲ್ಲೀನತೆಯ ನೆಲೆಯಲ್ಲಿನ ಭಿನ್ನತೆಯನ್ನು ಗ್ರಹಿಸಿದರು. ಅಮೇರಿಕದ ಜಾನಪದ ವಿದ್ವಾಂಸರಾದ ಪೀಟರ್ ಜೆ ಕ್ಲಾಸ್ ಮೊದಲಿಗೆ ಜಾನಪದದ ಸ್ತ್ರೀವಾದಿ ಅಧ್ಯಯನದ ಅಗತ್ಯತೆಯನ್ನು ತಿಳಿಸಿದರು. ಅನಂತರ ಜಾನಪದ ಅಧ್ಯಯನ ಹೊಸತಿರುವನ್ನು ಪಡೆದುಕೊಂಡಿತು. ೧೯೯೮ರಲ್ಲಿ ಅಂತಾರಾಷ್ಟ್ರೀಯ ಜಾನಪದ ಸಂಶೋಧನಾ ಸಂಸ್ಥೆಯು (ISFNR) ಗೋಟೆಂಗನ್‌ನ ಹನ್ನೆರಡನೇ ಅಧಿವೇಶನದಲ್ಲಿ ಜಾನಪದ ಸಂಸ್ಕೃತಿ ಹಾಗೂ ಪುರಾಣವನ್ನು ಲಿಂಗದ ನೆಲೆಯಲ್ಲಿ ಚಿಂತಿಸುವ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು. ಇಲ್ಲಿ ಮಂಡಿತವಾದ ಪ್ರಬಂದಗಳು ESTUDOS DE LITERATUREAORAL No. 5/1999ರಲ್ಲಿ ಈ ಹೆಸರಿನಲ್ಲಿ ಪ್ರಕಟವಾಯಿತು. ಆಲಿನೆನೋಲ ಬರೆದ 'Gender, Culture and Folklore' ಎನ್ನುವ ಪ್ರಬಂಧವು ಜಗತ್ತಿನ ನಾನಾ ಭಾಗದ ಜನಪದ ಪುರಾಣಗಳನ್ನು, ಆಚರಣೆಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಶ್ಲೇಷಣೆಗೊಳಪಡಿಸಲಾಯಿತು. ಭಾರತದಲ್ಲಿಯು ಅಮೇರಿಕದ 'Ford Foundaiton' ಸಹಯೋಗದಲ್ಲಿ ದಕ್ಷಿಣ ಭಾರತದ ಸಾಹಿತ್ಯವನ್ನು ಲಿಂಗದ ನೆಲೆಯಲ್ಲಿ ಅಧ್ಯಯನ ಮಾಡುವ ಸಲುವಾಗಿ ೨೦೦೧ರಲ್ಲಿ ಮಧುರೈನ ಕಾಮರಾಜ ವಿಶ್ವವಿದ್ಯಾನಿಲಯದ CENTAOREನಲ್ಲಿ 'Folklore and Gender' ಎಂಬ ಕಾರ್ಯಗಾರರನ್ನು ಅಮೇರಿಕದ ರುಥ್ ಭಾಟ್ಟಿಮೊರ್ ನಿರ್ದೇಶನದಲ್ಲಿ ಆಯೋಜಿಸಲಾಗಿತ್ತು. ದಕ್ಷಿಣ ಭಾರತದಾದ್ಯಂತ ಅತ್ತೆ ಸೊಸೆಗೆ ಸಂಬಂಧಿಸಿದ ಕತೆಗಳನ್ನು ಚರ್ಚೆಗೊಳಪಡಿಸಲಾಯಿತು. ಹಾಗೆಯೇ ಮಹಿಳೆಯರು ಹೇಳುವ ಕತೆಗಳ ವಸ್ತು, ಭಿನ್ನತೆಯ ನೆಲೆ, ಸಶಕ್ತ ಜನಪದ ಸಾಹಿತ್ಯದ ಮಹಿಳಾ ಮಾದರಿಗಳ ಕುರಿತಾಗಿ ಚಿಂತನೆಗಳು ಜರುಗಿದವು. ಈ ಚಿಂತನೆಗಳು ಪುರಾಣ ಸ್ತ್ರೀವಾದಿ ಸಾಹಿತ್ಯ ಅಧ್ಯಯನಕ್ಕೆ ಪೂರಕವಾಗಿವೆ.

ಫಿನ್‌ಲ್ಯಾಂಡ್ ದೇಶದ ಮೌಖಿಕ ಮಹಾಕಾವ್ಯವಾದ ಕಲೇವಾಲವು ಮಾತೃಪ್ರಧಾನ್ಯತೆಯ ನೆಲೆಯನ್ನು ಒಳಗೊಂಡಿರುವುದನ್ನು Alli Nenola ತಮ್ಮ Folklore, Gender and Myth' ಈ ಲೇಖನದಲ್ಲಿ ಗುರುತಿಸಿದ್ದಾರೆ. ಪುರಾಣವನ್ನು ಹಾಗೂ ಜಾನಪದ ಕಾವ್ಯಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡುವವರಿಗೆ ಹಲವು ಮಹತ್ವದ ಸುಳಿವುಗಳನ್ನು ಇದರಲ್ಲಿ ನೀಡಿದ್ದಾರೆ. ಅಮೇಜಾನ್ ತೀರ ಪ್ರದೇಶ ಹಾಗೂ ದಕ್ಷಿಣ ಅಮೇರಿಕದಲ್ಲಿನ ಜನಪದ ಪುರಾಣಗಳಲ್ಲಿ ಮೊದಲಿಗೆ ರಾಜಕೀಯ ಅಧಿಕಾರ ಹೊಂದಿದವರು ಮಹಿಳೆಯರೆಂದು, ಕ್ರಮೇಣ ಪುರುಷ ಅದನ್ನು ತನ್ನ ಸ್ವಾಧೀನಪಡಿಸಿಕೊಂಡ ಎಂಬುದರ ಕುರಿತಾಗಿಯೂ ತಿಳಿಸಿದ್ದಾರೆ. ಈ ನದೀ ತೀರದ ಸಮುದಾಯಗಳಲ್ಲಿನ ಸಾಂಸ್ಕೃತಿಕ ಅಂಶಗಳಾಗದ ಕೊಳಲು, ಹಾಡು, ಆಚರಣೆ ಎಲ್ಲವು ಮಹಿಳೆಯರಿಂದಲೆ ಮೊದಲಿಗೆ ಹುಟ್ಟಿತೆಂದು ಹಾಗೂ ಹಲವಾರು ವರ್ಷಗಳ ಕಾಲ ಆಕೆಯ ಅಧೀನದಲ್ಲಿ ಅವುಗಳು ಇದ್ದುದಾಗಿ ಈ ಅಧ್ಯಯನಗಳು ಗುರುತಿಸಿವೆ. ಕಾಲಾನಂತರ ಪುರುಷನ ಆಕ್ರಮಣಕ್ಕೊಳಗಾಗಿ ಪ್ರಧಾನ ನೆಲೆಯಲ್ಲಿದ್ದ ಆಕೆಯು ಅಧೀನಳಾದ ಸ್ಥಿತಿಯನ್ನು ತಿಳಿಸುತ್ತದೆ. ಭಾರತೀಯ ಸಂದರ್ಭದಲ್ಲೂ ಮಾತೃಪ್ರಧಾನ ಕುಟುಂಬಗಳು ಪಿತೃಪ್ರಧಾನ ಕುಟುಂಬವಾಗಿ ಬದಲಾದದ್ದನ್ನು ಸ್ಮರಿಸಬಹುದು. ಕೃಷಿ ನಾಟಿ ವೈದ್ಯ ಪದ್ಧತಿ ಇವುಗಳು ಮೊದಲಿಗೆ ಮಹಿಳೆಯದ್ದೇ ಆದರೂ ಕಾಲಾನಂತರ ಪುರುಷ ಸ್ವಾಧೀನಪಡಿಸಿಕೊಂಡ. ಆಕೆಯು ಒಪ್ಪದಿದ್ದಲ್ಲಿ ಅಥವಾ ಪ್ರತಿರೋಧ ವ್ಯಕ್ತಪಡಿಸಿದಲ್ಲಿ ಪುರುಷನ ಕ್ರೌರ್ಯಕ್ಕೆ ಆಕೆ ಬಲಿಯಾಗಿದ್ದಾಳೆ, ಘೋರಶಿಕ್ಷೆಗೆ ಒಳಗಾಗಿದ್ದಾಳೆ ಎಂಬುದನ್ನು ಈ ಅಧ್ಯಯನಗಳು ತಿಳಿಸಿವೆ. "Myths are reinforced with concrete sanctions so that, for example a woman who somehow breaks the rules set by men is punished by being raped and murdered (1999, 28) ಎನ್ನುವ ಈ ಮಾತುಗಳು ಅಲ್ಲಿಗಷ್ಟೇ ಸೀಮಿತವಲ್ಲ, ಭಾರತೀಯ ಸಂದರ್ಭಕ್ಕೂ ಅನ್ವಯವಾಗುತ್ತದೆ.

ಕರ್ನಾಟಕ ಜನಪದ ಅಧ್ಯಯನವನ್ನು ಈ ಹಿನ್ನೆಲೆಯಲ್ಲಿ ಗುರುತಿಸಬಹುದು. ಹೊಸಗನ್ನಡದ ನವೋದಯ ಸಾಹಿತ್ಯದ ಕಾಲಘಟ್ಟವು ರಾಮಾಯಾಣದ ಹಿನ್ನೆಲೆಯಲ್ಲಿ ಪುರಾಣ-ಇತಿಹಾಸದ ಮಹಿಳೆಯರನ್ನು ವೈಭವೀಕರಿಸಿದಂತೆ, ಆಧುನಿಕ ಜಾನಪದ ವಿದ್ವಾಂಸರು ಸಹಾ ಇದೇ ಬಗೆಯ ಮಾದರಿಗಳನ್ನು ವೈಭವೀಕರಿಸಿದರು. ಆರಂಭದಲ್ಲಿನ ಜನಪದ ಸಂಗ್ರಹಗಳು ಕೇವಲ ತವರನ್ನು ಕುರಿತು ಮತ್ತು ಜನಪದ ತ್ರಿಪದಿಗಳಲ್ಲಿ, ಕಥನ ಕವನಗಳಲ್ಲಿ ಶೀಲ ಹಾಗೂ ತ್ಯಾಗದ ಮಾತೆಯರಾಗಿದ್ದ ಸ್ತ್ರೀಯರನ್ನು ವೈಭವೀಕರಣಗೊಳಿಸಿದವು. ವಿದ್ವಾಂಸರ ಈ ಎಲ್ಲ ಚಿಂತನೆಗಳ ಪ್ರೇರಣೆಯಿಂದ ಇಂದು ಕರ್ನಾಟಕದ ಜನಪದ ಸಾಹಿತ್ಯವನ್ನು ಅನೇಕ ಚಿಂತಕಿಯರು ತಮ್ಮ ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ನಡೆಸಿದ್ದಾರೆ. ಈ ನಿಟ್ಟಿನಲ್ಲಿ ಗಾಯತ್ರಿ ನಾವಡ, ಧರಣಿದೇವಿ ಮಾಲಗತ್ತಿ, ಶಾಂತ ಇಮ್ರಾಪುರ, ಜಯಶ್ರೀ ತಾದಂಡೆ, ಪ್ರೀತಿ ಶುಭಚಂದ್ರ, ಸುಶೀಲ ಉಪಾಧ್ಯಾಯ, ಶೈಲಜ ಹಿರೇಮಠ, ಆರ್. ಸುನಂದಮ್ಮ, ಸಂಧ್ಯಾ ರೆಡ್ಡಿ, ಶಾಲಿನಿ ರಘುನಾಥ್ ಮುಖ್ಯರಾಗಿದ್ದಾರೆ.

ತುಳು ಜನಪದ ಪ್ರಪಂಚದ ಮಹಾಕಾವ್ಯ ಸಿರಿಸಂಧಿಯನ್ನು ಗಾಯತ್ರಿ ನಾವಡ ಸ್ತ್ರೀವಾದಿ ನೆಲೆಯಿಂದ ಅಧ್ಯಯನ ಮಾಡಿದ್ದಾರೆ. ಇದು ನಾಲ್ಕು ತಲೆಮಾರುಗಳ ವಿಶಿಷ್ಟ ಸಂಧಿಯುಳ್ಳದ್ದಾಗಿದೆ. ಇದನ್ನು ಮಹಿಳೆಯರೇ ಹೆಚ್ಚಾಗಿ ಹಾಡುತ್ತಾರೆ. ಇತಿಹಾಸದ ಯಾವುದೋ ಒಂದು ಕಾಲಘಟ್ಟದಲ್ಲಿ ನಡೆದಿದೆ ಎನ್ನಲಾದ ಈ ಕತೆ ಪವಾಡ, ಪೌರಾಣಿಕತೆ, ಅತಿಮಾನುಷ ಅಂಶಗಳನ್ನು ತನ್ನೊಳಗಿರಿಸಿಕೊಂಡು ಆರಾಧನಾ ಪಠ್ಯವಾಗಿದೆ. "The Myths constantly reiterate that women did not know how to handle power when they had it (Bamberger (ed); 1999, 28-20) ಅಧಿಕಾರವನ್ನು ಹೊಂದಿದಾಗ ಅದನ್ನು ಉಳಿಸಿಕೊಳ್ಳಲಾಗದ ಹೆಣ್ಣಿನ ಅಸಹಾಯಕತೆಯು ಈ ಮಾತುಗಳಲ್ಲಿ ವ್ಯಕ್ತವಾಗಿದೆ. ಈ ಬಗೆಯ ಪುರಾಣಗಳ ಅಧ್ಯಯನದಿಂದ ಹಿಂದೊಮ್ಮೆ ಹೆಣ್ಣು ಹೊಂದಿದ್ದ ಉನ್ನತವಾದ ಸ್ಥಾನಮಾನಗಳನ್ನು ಮರಳಿ ಪಡೆಯುವ ಪ್ರಯತ್ನವನ್ನು ಇವುಗಳ ಮೂಲಕ ಪಡೆದು ಸಶಕ್ತ ಸ್ತ್ರೀ ಮಾದರಿಗಳನ್ನು ಇವುಗಳ ಮೂಲಕ ನಿರ್ಮಿಸಬೇಕಾಗಿದೆ.

### ೭.೧. ಪುರಾಣ ಜಾನಪದ ಸ್ತ್ರೀವಾದ

ಭಾರತೀಯ ಸಾಂಸ್ಕೃತಿಕ ಪರಂಪರೆಯನ್ನು ರೂಪಿಸುವಲ್ಲಿ ರಾಮಾಯಣ ಮಹಾಭಾರತಗಳು ವಹಿಸಿದ ಪಾತ್ರ ಅಸದೃಶವಾದುದು. ಜನಪದ ಸಮುದಾಯದಿಂದ ಶಿಷ್ಟ ಸಮುದಾಯದವರೆಗೆ ಹಬ್ಬಿ ಹರಡಿರುವ ಅವುಗಳ ಸಾಹಿತ್ಯವೇ ಇದನ್ನು ಸ್ಪಷ್ಟಪಡಿಸುತ್ತವೆ. ಆರ್ಯ - ದ್ರಾವಿಡ ಸಂಕೀರ್ಣ ಸ್ವರೂಪದ ಸಾಂಸ್ಕೃತಿಕ ಜಟಿಲತೆಯನ್ನು ಈ ಪಾತ್ರಗಳು ಹೊಂದಿವೆ. ರಾಮಾಯಣ ಆರಾಧನಾ ಮಾದರಿಯನ್ನೊಳಗೊಂಡರೆ, ಮಹಾಭಾರತ ಜೀವನ ವೈವಿಧ್ಯದಿಂದಾಗಿ ವಾಸ್ತವಿಕವೆನಿಸಿದೆ. ಪ್ರಾಚೀನ ಕಾಲದ ನಂಬಿಕೆ, ಸಂಪ್ರದಾಯ ಮತ್ತು ಪುರಾಣ ರೂಪಗಳ ಸಂಗ್ರಹಿತ ಸ್ವರೂಪ ಮಹಾಭಾರತದ್ದು. ಆರ್ಯ ಮತ್ತು ಸಮೂಹ ಸಂಸ್ಕೃತಿಯ ವಾಸ್ತವಿಕ ನೆಲೆಯನ್ನು ಇದು ಹೊಂದಿದ್ದು ಆ ಕಾಲದ ಇತಿಹಾಸ ಮತ್ತು ಪುರಾಣಗಳ ಜೊತೆಗೆ ಕಥಾಕಲ್ಪನೆ ಸೇರಿ ಬೆಳವಣಿಗೆಯಾದದ್ದು. ಇವು ವಿವಿಧ ಕಾಲಗಳಲ್ಲಿ ಮತ್ತು ಸ್ತರಗಳಲ್ಲಿ ಬೆಳೆಯುತ್ತಾ ಬಂದು ಇವತ್ತಿನ ರೂಪ ಪಡೆದಿರಬಹುದು. ಆರ್ಯ ಸಂಸ್ಕೃತಿಯು ಭಾರತದ ಇತರೆ ಸಂಸ್ಕೃತಿಗಳ ಮೇಲೆ ಪ್ರಭಾವ ಬೀರುತ್ತಾ ಬಂದಿದ್ದು ಇಂದು ಆರ್ಯ-ದ್ರಾವಿಡ ಭೇದವನ್ನು ಗೆರೆ ಎಳೆದು ತೋರಿಸಲು ಸಾಧ್ಯವಾಗದಷ್ಟು ಎರಡು ಸೇರಿಹೋಗಿವೆ. ಆದರೆ ಸ್ತ್ರೀಯ ವಿಚಾರದಲ್ಲಿ ದ್ರಾವಿಡ ಸಂಸ್ಕೃತಿಯಲ್ಲಿದ್ದ ಇತ್ಯಾತ್ಮಕ ಅಂಶಗಳು ದುಡಿಯುವ ವರ್ಗದಲ್ಲಿ ಹಾಗೂ ವೈದಿಕ ಸಂಸ್ಕೃತಿಯ ಪ್ರಭಾವಕ್ಕೆ ಹೆಚ್ಚಾಗಿ ತೆರೆದುಕೊಳ್ಳದ ಜನವರ್ಗದಲ್ಲಿರುವುದನ್ನು ಕಾಣುತ್ತೇವೆ. ಇಂತಹ ಜನರು ರಚಿಸಿದ ಕಾವ್ಯಗಳು ಹೆಣ್ಣಿನ ಗುಣಾತ್ಮಕ ಅಂಶಗಳಿಗೆ ಆದ್ಯತೆ ನೀಡಿವೆ. "ಆದರೆ ಅದೇ ವರ್ಗದಿಂದ ಬಂದ ಮತ್ತು ಕರ್ನಾಟಕದಲ್ಲಿ ಕಂಡುಬರುವ ಲೌಕಿಕ ವೃತಿಗಾಯಕರು ಹಾಡುವ ಮಹಾಭಾರತ ಮತ್ತು ರಾಮಾಯಣ ಮಹಿಳೆಯೊಬ್ಬಳು ಹಾಡುವ ಕಾವ್ಯಕ್ಕಿಂತ ಭಿನ್ನವಾಗಿದೆ. ಗಾಯಕರು ಹಾಡುವ ಸಂಪೂರ್ಣ ರಾಮಾಯಣದ ಭಾಗವು ಶಿಷ್ಟ ರಾಮಾಯಣದ ಮಾದರಿಯಲ್ಲಿಯೇ ಕಂಡು

ಬರುತ್ತದೆ. ಪುರುಷ ಕೇಂದ್ರಿತ ನೆಲೆಯ ಹಲವಾರು ಭಾವನೆಗಳನ್ನು ಇಲ್ಲಿ ಕಾಣುತ್ತೇವೆ" (ಆರ್. ಸುನಂದಮ್ಮ, ೧೯೯೭, ೧೨). ಈ ಮಾತುಗಳು ಮಹಿಳಾ ಜಾನಪದದ ಅಗತ್ಯವನ್ನು ತಿಳಿಸುತ್ತವೆ. ಅಲ್ಲದೇ ಹೊಸಗನ್ನಡ ಸಾಹಿತ್ಯದಲ್ಲಿ ಪೌರಾಣಿಕ ಸ್ತ್ರೀಪಾತ್ರಗಳನ್ನು ಸ್ತ್ರೀಯರು ಪುರುಷನಿಗಿಂತ ಹೇಗೆ ಭಿನ್ನವಾಗಿ ಕಂಡಿದ್ದಾರೆ ಹಾಗೂ ಇದರ ಅಧ್ಯಯನದ ಅನಿವಾರ್ಯತೆಯ ನೆಲೆಯನ್ನು ಈ ಮಾತುಗಳು ಸಮರ್ಥಿಸುತ್ತಿವೆ. ಈ ಮೂಲಕವೇ ಪುರಾಣ ಸ್ತ್ರೀವಾದವನ್ನು ಬಲಪಡಿಸಲು ಸಾಧ್ಯ.

ಉಲ್ಲೇಖಗಳು


೧. ಶ್ರೀಮತಿ ಎಚ್.ಎಸ್. ೨೦೦೩, ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೨. ಶ್ರೀಮತಿ ಎಚ್.ಎಸ್. ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೩. ಶಾಂತಾ ಇಮ್ರಾಪೂರ. ೨೦೦೩, ಧರ್ಮ, ಮಹಿಳೆ ಮತ್ತು ಸಮಾಜ, ಚೇತನ ಪ್ರಕಾಶನ, ಧಾರವಾಡ.

೪. ಗೋಪಾಲಕೃಷ್ಣಯ್ಯ ಕೆ.ಎಲ್. ೧೯೮೭, ಕನ್ನಡ ಸಾಹಿತ್ಯದಲ್ಲಿ ಪುರಾಣ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಸುನಂದಮ್ಮ ಆರ್. ೧೯೯೭, ಜನಪದ ಸಾಹಿತ್ಯ ಮಹಿಳಾ ಜಗತ್ತು, ಸಮತಾ ಅಧ್ಯಯನ ಕೇಂದ್ರ, ಬೆಂಗಳೂರು.

೬. William J Hundy and Max West Book (Ed), 1976, 20th Centudy Criticism, Light and File Publishers, New Delhi.

7. Karen A Foos, Sonja K Foos, Cindy L griffin (Ed), 1998, Feminist Rhetorical Theories, Sage Publication, New Delhi.

8. Bamberger (Ed), 1995/5, Estudos Deliterature Oral ISFNR, Gottingem.

# ಮಡಿಲ ಬೆಂಕಿ

ಸಬಿತಾ ಬನ್ನಾಡಿ

**ಕ**ನ್ನಡ ಸಾಹಿತ್ಯಲೋಕ ಮತ್ತೆ ಮತ್ತೆ ಹೆಣ್ಣಿನ 'ವೈಧವ್ಯ'ವನ್ನು ತಮ್ಮ ಕೃತಿಗಳೊಳಗೆ ಆವಾಹಿಸಿಕೊಂಡಿದೆ. ಆಶ್ಚರ್ಯಕರವಾಗಿ ಇವರೆಲ್ಲಾ ಹೆಚ್ಚಾಗಿ ಬ್ರಾಹ್ಮಣ ವಿಧವೆಯರೇ ಆಗಿದ್ದಾರೆ. ಎಸ್. ನಾಗವೇಣಿಯಂತ ಬ್ರಾಹ್ಮಣೇತರ ಲೇಖಕಿಯೂ 'ಗಾಂಧಿ ಬಂದ'ದಲ್ಲಿ ಎದುರಾಗುವುದು ಬ್ರಾಹ್ಮಣ ವಿಧವೆಯೊಬ್ಬಳನ್ನು ಫಣಿಯಮ್ಮ, ಘಟಶ್ರಾದ್ಧ, ವೈಶಾಖಗಳಲ್ಲಿ ಎದುರಾದ ಇವರೆಲ್ಲಾ ನಮ್ಮ ಕಣ್ಣಂಚನ್ನು ಒದ್ದೆ ಮಾಡಿದ್ದಾರೆ. ಬೇಂದ್ರೆಯವರ 'ಪುಟ್ಟ ವಿಧವೆ'ಯನ್ನು ಮರೆಯುವುದೆಂತು? ಇಲ್ಲೆಲ್ಲಾ ವಿಧವೆಯ ಒಂದು ಬಗೆಯ ಬದುಕಿನ ಎಳೆಯನ್ನು ಬ್ರಾಹ್ಮಣ ಜಗತ್ತಿನ ಮೌಢ್ಯವನ್ನು ಅಥವಾ ಆ ಮೂಲಕ ಹೆಣ್ಣಿನ ಶೋಷಣೆಯನ್ನು ದರ್ಶನ ಮಾಡಲಾಗಿದ್ದರೆ, ಇದಕ್ಕಿಂತ ಭಿನ್ನ ಪಾತಳಿಯ ವಿಧವೆಯರು ಕಾರಂತರಲ್ಲಿ ಕಾಣುತ್ತಾರೆ. ಬಾಲ ವಿಧವೆ, ಕೇಶಮುಂಡನದ ಬವಣೆಯ ಚಿತ್ರಣಕ್ಕಿಂತ ತನ್ನ ಬದುಕನ್ನು ಅದರೆಲ್ಲಾ ಕಾಠಿಣ್ಯಗಳೊಂದಿಗೆ ಎದುರಿಸುವ ಛಲವಂತ ಹೆಂಗಸರು ಕಾರಂತರ ಕಾದಂಬರಿಗಳಲ್ಲಿ, ಕಾದಂಬರಿಯ ಒಂದು ಭಾಗವಾಗಿ ಬರುತ್ತಾರೆ. ಇಡೀ ಬದುಕಿನ ಸವಾಲಿಗೇ ಸವಾಲಾಗಿ ನಿಂತು, ತನ್ನ ಸಮುದಾಯದ ಆಚರಣೆಗಳನ್ನು ಒಪ್ಪಿಕೊಂಡು ಸಮೂಹದೊಂದಿಗೆ ಸಾಗಿ ಹೋಗುವ, ಜೀವನೋತ್ಸಾಹವನ್ನು ಕಳೆದುಕೊಳ್ಳದ ವಿಧವೆಯರು ವೈದೇಹಿಯವರ ಕತೆಗಳಲ್ಲಿ ಜೀವ ತಳೆಯುತ್ತಾರೆ. ವೈದೇಹಿಯವರ 'ಪುಟ್ಟಮ್ಮತ್ತೆ ಮತ್ತು ಮಗಳು' ಕತೆಯ ಪುಟ್ಟಮ್ಮತ್ತೆ ವಿಧವೆ ಅನುಕಂಪದ ಹಂಗು ತೊರೆದ ಛಲಗಾತಿಯಾಗಿ ಕಾಣುತ್ತಾಳೆ. ಮೂರನೆಯ ತಲೆಮಾರಿನ ವಿದ್ಯಾವಂತ ಹೆಣ್ಣೊಬ್ಬಳು ಸಮುದಾಯದ ಭಾಗವಾಗಲಾರದೇ ಅಂತರಂಗದಲ್ಲಿ ಒಂಟಿಯಾಗುವುದನ್ನು ಚಿತ್ರಿಸುತ್ತಾ ವೈದೇಹಿ ಪುಟ್ಟಮ್ಮತ್ತೆಯ ಕಡೆ ನಮ್ಮ ನೋಟವನ್ನು ತಿರುಗಿಸುವಲ್ಲಿ, ಬದುಕನ್ನು ಅರ್ಥೈಸಿಕೊಳ್ಳಬೇಕಾದ ಕ್ರಮವನ್ನೂ ಸೂಚಿಸುತ್ತಾರೆ.

ಈಚೆಗೆ, ವಸುಧೇಂದ್ರರ 'ಮನೀಷೆ' ಸಂಕಲನದ 'ಮೌಢ್ಯೋಪಾಸನೆ' ಕತೆಯನ್ನು ಓದಿದಾಗ ಅದು ನನ್ನನ್ನು ವಿಶೇಷವಾಗಿ ಕಾಡಲಾರಂಭಿಸಿತು. (ಈ ಸಂಕಲನದ 'ನಮ್ಮ ವಾಜೀನೂ ಆಟಕ್ಕೆ ಸೇರಿಸ್ಕೊಳ್ರಿ' ಕೂಡ) ಇಲ್ಲಿ ಬರುವ ಮೂರು ತಲೆಮಾರಿನ ಹೆಣ್ಣುಮಕ್ಕಳ ಜಗತ್ತಿನೊಳಗಿನ ಏರುಪೇರುಗಳು ಬ್ರಾಹ್ಮಣ ವಿಧವೆಯರು ಅನುಸರಿಸುವ ಮಡಿವಂತಿಕೆಯನ್ನು ಭಿನ್ನನೆಲೆಯಿಂದ ನೋಡುವಂತೆ ಒತ್ತಾಯಿಸುತ್ತದೆ. ಮೂಲತಃ ಲೇಖಕರು ಇದನ್ನು 'ಮೌಢ್ಯ'

ಎಂಬ ಪಾತಳಿಯಲ್ಲೇ ಗುರುತಿಸಿದ್ದಾರಾದರೂ, ಇದು ಮೌಢ್ಯದಾಚಿನ ಸಂಗತಿಯನ್ನು ತನಗರಿವಿಲ್ಲದೆಯೇ ನಿರೂಪಿಸುತ್ತದೆ. 'ಮಡಿ' ಎಂಬ ಕಲ್ಪನೆಯು ಬ್ರಾಹ್ಮಣೇತರರಿಗೆ ಕಾಣಿಸುವುದಕ್ಕೂ ಆ ಜಗತ್ತಿನೊಳಗಡೆ ಇರುವವರ ಅನುಭವಕ್ಕೂ ವ್ಯತ್ಯಾಸವಿದೆ. ಪ್ರಜ್ಞಾವಂತ ಬ್ರಾಹ್ಮಣರು ಇದನ್ನು ವಿಷಾದದಿಂದ ಮತ್ತು ಈ ಕತೆಯ ಮೂರನೆಯ ತಲೆಮಾರಿನ ಹೆಣ್ಣುಮಗಳಂತೆ ಆಕ್ರೋಶದಿಂದ ನೋಡುತ್ತಾರೆ. ಪ್ರಜ್ಞಾವಂತ ಬ್ರಾಹ್ಮೇತರರು ಇದನ್ನು ಅಸ್ಪೃಶ್ಯತೆಯ ಒಂದು ಅಂಗವಾಗಿ, ಅವಮಾನಿಸುವ ಒಂದು ಅಸ್ತ್ರವೆಂಬ ಅನುಮಾನದಿಂದ, ಆಕ್ರೋಶದಿಂದ ನೋಡುತ್ತಾರೆ. ಈ ಯಾವ ನೋಟವನ್ನೂ ಅಲ್ಲಗಳೆಯಬೇಕಾಗಿಲ್ಲವಾದರೂ ಈ ಕತೆ ಇನ್ನೂ ಒಂದು ನೋಟಕ್ಕೆ ಪ್ರೇರಣೆ ನೀಡುತ್ತದೆ. ಮಡಿಯ ಆಚರಣೆಯನ್ನು ಕಠಿಣವಾಗಿ ಆಚರಿಸುವವರಲ್ಲಿ ಬ್ರಾಹ್ಮಣ ವಿಧವೆಯರದು ಮೇಲುಗೈ. ಇವರ ಕರ್ಮಕತೆಯು ಆಯ್ಕೆಯದಾಗಿರುವುದಕ್ಕಿಂತಲೂ ಅನಿವಾರ್ಯತೆಯದು, ಇವರ ಬದುಕಿನ ಈ ಪಾಡು ಕೇವಲ ಮೌಢ್ಯದಷ್ಟೇ ಆಗಿರದೆ ಬದುಕು ಅವರಲ್ಲಿ ಹುಟ್ಟು ಹಾಕುವ ಒತ್ತಾಯಗಳ ಫಲ ಎಂಬುದನ್ನು ಈ ಕತೆ ಪರಿಣಾಮಕಾರಿಯಾಗಿ ಅನಾವರಣ ಮಾಡುತ್ತದೆ.

ಮುಖ್ಯವಾಗಿ, ಈ ಕತೆ ಓದುವ ತನಕವೂ 'ಮಡಿ' ಎಂಬುದು ಮನೆಯ ಹೊರಗಿನವರೊಂದಿಗೆ, ಅನ್ಯ ಜಾತಿಯವರೊಂದಿಗೆ ಆಚರಿಸುವ ವಿಧಿ ಎಂಬ ಭಾವನೆ ನನಗಿತ್ತು. (ಅನೇಕ ಪ್ರದೇಶಗಳಲ್ಲಿ ಅದು ಹಾಗೇ ಇರುವುದು ಎಂಬುದೂ ನಿಜ) ಆದರೆ, ಇದು ಮನೆಯೊಳಗೆ ಮಾತ್ರವಲ್ಲ, ಹೆತ್ತ ಮಕ್ಕಳೊಂದಿಗೂ ಆಚರಿಸಲ್ಪಡುತ್ತದೆ ಎಂಬ ವಿಚಾರ ಅಚ್ಚರಿಗೆ ಎಡೆ ಮಾಡಿತು. ಹೀಗಾಗಿ ಮಡಿ ಅಥವಾ ಅಸ್ಪೃಶ್ಯತೆ ಕೇವಲ ಇತರ ಜಾತಿಯವರೊಂದಿಗೆ ನಡೆಸುವ ವ್ಯವಹಾರವಲ್ಲ ಎಂಬುದು ಚಿಂತನೆಯನ್ನು ಬೇಡುವ ವಿಚಾರವಾಗಿ ಕಾಣಿಸುತ್ತಿದೆ. ಇಲ್ಲಿ ಮಡಿಯ ಮೂಲಕ ಇತರರನ್ನು ಅವಮಾನಿಸುವುದಕ್ಕಿಂತಲೂ, ತಾವೇ ಸಿಲುಕಿಕೊಂಡಿರುವ ಬಲೆಯೊಳಗಿನಿಂದ ಬಿಡಿಸಿಕೊಳ್ಳಲಾರದೆ ತಮ್ಮನ್ನೇ ಶೋಷಿಸಿಕೊಳ್ಳುವ ಸ್ವಯಂ ಶಾಪವಾಗಿ ಕಂಡು ಬರುತ್ತದೆ.

ಸ್ವಂತ ಮಗಳು ಮಾಡುವ ಅಡುಗೆಯೂ ತಾಯಿಗೆ ಅಸ್ಪೃಶ್ಯವಾಗುವ ಸನ್ನಿವೇಶವೊಂದು ಮೌಢ್ಯೋಪಾಸನೆ ಕತೆಯಲ್ಲಿ ಬರುತ್ತದೆ. ಅಲ್ಲಿ ಕ್ಯಾನ್ಸರ್‌ಗೆ ತುತ್ತಾದ ತಾಯಿ ಅನಿವಾರ್ಯವಾಗಿ ಆಸ್ಪತ್ರೆ ಸೇರುತ್ತಾಳೆ. ಮಡಿ ಹೆಂಗಸಾದ (ಮುಡಿ ಕೊಟ್ಟಿರುವ ಕೆಂಪು ಸೀರೆಯ ವಿಧವೆ) ಆಕೆ ಅನಿವಾರ್ಯವಾಗಿ ಮಗಳು ಮಾಡಿ ತಂದ ಅಡುಗೆಯನ್ನು ತಿನ್ನ ಬೇಕಾಗುತ್ತದೆ. ಮೊದಲು ನಿರಾಕರಿಸಿದರೂ ನಂತರ ಆಸ್ಪತ್ರೆ ಅಂದರೆ ದೇವಸ್ಥಾನವಿದ್ದಂತೆ, ಇಲ್ಲಿ ಯಾವುದೂ ಮೈಲಿಗೆಯಲ್ಲ ಎಂಬ ಡಾಕ್ಟರರ ಮಾತಿಗೆ ಒಪ್ಪುವ ಆಕೆ ಊಟ ಮಾಡಲಾರಂಭಿಸುತ್ತಾಳೆ. ಮಾತ್ರವಲ್ಲ, ಮಗಳು ರುಚಿಕಟ್ಟಾಗಿ ಮಾಡುವ ಅಡುಗೆಗೆ ಮನಸೋಲುತ್ತಾಳೆ. ಮಗಳು ಮಾಡುವ ಅಡುಗೆಯ ರುಚಿ ನೋಡಲೂ ಅವಳಿಗೆ ಅದುವರೆಗೆ ಆಗಿರಲಿಲ್ಲ ಎಂಬುದನ್ನು ಗ್ರಹಿಸುವುದೇ ಕಷ್ಟ ಸಾಧ್ಯ. ತಾನು ಅನುಸರಿಸುತ್ತಿರುವ ಬದುಕಿನ ಕ್ರಮಕ್ಕೆ ಅವಳು ಸಲ್ಲಿಸುವ ವ್ರತಸ್ವರೂಪಿ ನಿಷ್ಠೆಯನ್ನು ಅರ್ಥೈಸಿಕೊಳ್ಳುವುದೇ ಪ್ರಯಾಸವೆನಿಸುತ್ತದೆ.

ಇಂತಹ ತಾಯಿ, ಆಸ್ಪತ್ರೆಯಿಂದ ಬಿಡುಗೆಯಾಗುವ ದಿನ ಹತ್ತಿರ ಬಂದಂತೆಯೇ ದುಃಖಿತಳಾಗ ತೊಡಗುತ್ತಾಳೆ. ಚಡಪಡಿಸ ತೊಡಗುತ್ತಾಳೆ. ಇದರ ಅರ್ಥ ಮಗಳಿಗಾಗು ವುದಿಲ್ಲ. ಮನೆಗೆ ಬಂದ ಮೇಲೆ ತಾಯಿಯ ತಾಯಿ-ಅವಳೂ ಮಡಿಹೆಂಗಸು, ತನ್ನ ಮಗಳಿಗೆ ಅಡುಗೆ ಮಾಡುವ ಅವಕಾಶವನ್ನು ನೀಡುವುದಿಲ್ಲ. ತನ್ನ ತಾಯಿ ಮನೆಗೆ ಬರುವುದಕ್ಕೆ ಯಾಕೆ ಹಿಂಜರಿದಳು ಎನ್ನುವುದು ಮಗಳಿಗೆ ಈಗ ಅರ್ಥವಾಗುತ್ತದೆ. ಆಧುನಿಕ ಪ್ರಜ್ಞೆಯ ಮಗಳು ಇದನ್ನು ತೀವ್ರವಾಗಿ ವಿರೋಧಿಸುತ್ತಾಳೆ. ಆದರೆ, ಅಜ್ಜಿ ಮೌನವಾಗಿ ಇತರ ಎಲ್ಲಾ ಸೇವೆಯನ್ನೂ ಮಗಳಿಗೆ ಮಾಡುತ್ತಾಳೆ. ಎಲ್ಲವನ್ನೂ ಅರ್ಥಮಾಡಿಕೊಂಡಂತೆ ತಾಯಿ ಮಗಳ ಬಾಯಿ ಮುಚ್ಚಿಸಿ ತಾನೂ ಮೌನವಾಗುತ್ತಾಳೆ. ತಾಯಿ ಸತ್ತ ಹಲವು ವರ್ಷಗಳ ನಂತರ ನಾಟಕೀಯ ಎಂಬಂತೆ ಅಜ್ಜಿಯೂ ಕ್ಯಾನ್ಸರ್‌ಗೆ ಬಲಿಯಾಗಿ ಆಸ್ಪತ್ರೆ ಸೇರುತ್ತಾಳೆ. ಮಗಳು ತನ್ನೊಳಗಿನ ಆಕ್ರೋಶವನ್ನು ಮುಚ್ಚಿಡಲಾರದೆ ಅಜ್ಜಿಯನ್ನು ಹಂಗಿಸುತ್ತಾಳೆ. ನನ್ನ ತಾಯಿಯ ಗತಿಯೇ ನಿನಗೂ ಬಂತಲ್ಲ, ಈಗ ನೀನೂ ಆಸ್ಪತ್ರೆಯ ಊಟ ಮಾಡಬೇಕಲ್ಲ ಎಂಬಂತೆ. ಅಜ್ಜಿ 'ಅವಳು ನಿನ್ನನ್ನು ಹಡೆದ ತಾಯಿಯಾದರೆ, ನಾನು ಹಡೆದ ಮಗಳಾಗಿದ್ದಳು' ಎಂಬ ತನ್ನ ದುಃಖ ತೋಡಿಕೊಂಡು ತನ್ನ ಪರಿಸ್ಥಿತಿಯನ್ನು ವಿವರಿಸುತ್ತಾಳೆ. ಬೇರೆ ದುಡಿಮೆ ಇಲ್ಲದ ತಮ್ಮೆಲ್ಲರ ಹೊಟ್ಟೆಪಾಡು ನಡೆಯಬೇಕಾಗಿದ್ದೇ ಕಂಡವರ ಮನೆಯ ಅಡುಗೆ ಮಾಡಿ. 'ಮಡಿ' ಕೆಟ್ಟರೆ ಯಾರೂ ತಮ್ಮನ್ನು ಅಡುಗೆಗೆ ಕರೆಯುವುದಿಲ್ಲ. ಹೀಗಾಗಿ ತಾನು ಹೆತ್ತ ಮಗಳನ್ನೇ ಅಡುಗೆಗೆ ಕರೆಯುವುದಿಲ್ಲ. ಹೀಗಾಗಿ ತಾನು ಹೆತ್ತ ಮಗಳನ್ನೇ ಅಡುಗೆಗೆ ಸೇರಿಸುವುದು ಸಾಧ್ಯವಿರಲಿಲ್ಲ ಎಂದು ವಿವರಿಸುತ್ತಾಳೆ.

'ಮಡಿ' ಇಲ್ಲಿ ತನ್ನ ಇನ್ನೊಂದು ವಿರಾಟ್ ರೂಪವನ್ನು ತೆರೆದುಕೊಳ್ಳುತ್ತದೆ. ಹೊಟ್ಟೆ ಪಾಡಿನ ಅನಿವಾರ್ಯತೆಯಾಗಿ ಇಲ್ಲಿ ಮಡಿ ನಿವಾರಿಸಿಕೊಳ್ಳಲಾರದ ವಿಷಯವಾಗುತ್ತದೆ. ಈ ಕತೆ ಬಿಚ್ಚಿ ತೋರುವ ಈ ಮಗ್ಗುಲು ಈ ಕತೆಯನ್ನು ವಿಶಿಷ್ಟವಾಗಿಸುತ್ತದೆ. ಅಷ್ಟೇ ಅಲ್ಲ, ಇಲ್ಲಿ ಬೆರಗು ಹುಟ್ಟಿಸುವುದು ಇವರುಗಳ ನಿಷ್ಠೆಯ ಜಗತ್ತು. ಮನೆಯೊಳಗೆ, ಇವರು ಹೇಗಿರುತ್ತಾರೆ, ಯಾರು ಮಾಡಿದ ಅಡುಗೆ ಊಟ ಮಾಡುತ್ತಾರೆ ಇತ್ಯಾದಿ ವಿವರಗಳು ಹೊರಗಿನವರಿಗೆ ತಿಳಿಯುವುದಾದರೂ ಹೇಗೆ? ಆದರೆ, ಈ ಅಸಹಾಯಕ ಹೆಣ್ಣುಮಕ್ಕಳು ಇದನ್ನು ಇಷ್ಟೊಂದು ಕಠಿಣ ವ್ರತದಂತೆ ಆಚರಿಸಿದರಲ್ಲ, ಇದರ ಹಿಂದಿರುವ ನಂಬಿಕೆಯ ಜಗತ್ತು ಯಾವುದು? ಸ್ವ-ನಿಷ್ಠೆಯ ಕಾಠಿಣ್ಯವನ್ನು ವಿಧಿಸಿಕೊಳ್ಳುವುದು ತಮ್ಮ ನಂಬಿಕೆಗೋ ಅಥವಾ ಹೊರಗಿನವರ ನಂಬಿಕೆಗೆ ಭಂಗ ಬರಬಾರದು ಎಂಬುದಕ್ಕೋ ಅಥವಾ ಬಾಳಬಳ್ಳಿಯ ಆಶ್ರಯವೇ ಕಡಿದು ಬಿದ್ದೀತೆಂಬ ಆತಂಕಕ್ಕೋ ಇವರು ಈ ನಿಷ್ಠೆಯ ಗೂಟಕ್ಕೆ ತಮ್ಮನ್ನು ಕಟ್ಟಿಕೊಂಡಿರಬಹುದು.

ಇದೇ ಸಂದರ್ಭದಲ್ಲಿ ನೆನಪಿಗೆ ಬರುವ ಇನ್ನೊಂದು ಪ್ರಸಂಗ, ಮಡಿವಂತಿಕೆಯ ಮತ್ತೊಂದು ಮುಖವನ್ನು ತೋರಿಸುವಂತಿದೆ. ಮಡಿವಂತಿಕೆಯ ಬಗ್ಗೆ ನಂಬಿಕೆ ಇದ್ದೂ, ಅನಿವಾರ್ಯ ಪ್ರಸಂಗದಲ್ಲಿ ಅದನ್ನು ಮೀರುವ ಈ ಪ್ರಸಂಗವು 'ಬಾಳು ಸೊಗಸಾದರೂ...'

ಎಂಬ ಆತ್ಮಕಥನದಲ್ಲಿ ನಿರೂಪಿತವಾಗಿದೆ. ಸುನಿತಾ ದೇಶಪಾಂಡೆಯವರ ಮರಾಠಿ ಆತ್ಮಚರಿತ್ರೆಯ ಕನ್ನಡ ಅನುವಾದ ಇದಾಗಿದೆ. ಇದರಲ್ಲಿನ ಸನ್ನಿವೇಶವೊಂದು ಹೀಗಿದೆ: ಲೇಖಕಿ ಬಾಲಕಿಯಾಗಿದ್ದಾಗ, ಅವಳ ಮನೆಗೆ ಬುಟ್ಟಿ ಮಾರುವ ದಲಿತ ಹೆಂಗಸೊಬ್ಬಳು ಬರುತ್ತಿದ್ದಳು. ಚೌಕಾಸಿಯ ನಂತರ ಲೇಖಕಿಯ ತಾಯಿ ಆ ಬುಟ್ಟಿಗಳಿಗೆ ನೀರು ಚುಮುಕಿಸಿ ಒಳಗೆ ತರುತ್ತಿದ್ದಳು. ತಿಂಡಿ, ಹಳೆ ಬಟ್ಟೆ ಇತ್ಯಾದಿಗಳನ್ನು ಕೊಡುತ್ತಿದ್ದಳು. ಒಮ್ಮೆ ಆಕೆ ಬಂದಾಗ ಆಕೆ ಸ್ವಲ್ಪ ಕುಂಟುತ್ತಿದ್ದುದನ್ನು ಗಮನಿಸಿದ ಲೇಖಕಿಯ ತಾಯಿ ಆ ಬಗ್ಗೆ ಅವಳನ್ನು ವಿಚಾರಿಸಿದಳು. "ಅಮ್ಮ, 'ನೋಡುವಾ?' ಎಂದೆನ್ನುತ್ತ ಅವಳ ಕಾಲನ್ನು ಹಿಡಿದಳು. ಮುಂದೆ ಬಿಸಿ ನೀರು, ಪೊಟ್ಯಾಶಿಯಂ ಪರಮ್ಯಾಂಗನೇಟು, ಹತ್ತಿ, ಬ್ಯಾಂಡೇಜಿಗೆಂದು ಹಳೆಯ ದೋತರದ ಪಟ್ಟಿಗಳು, ಗಾಯವನ್ನು ತಪ್ಪದೆ ಗುಣಪಡಿಸುವ 'ಶೆಟ್ಟಿಯ ಮಲಮು' ನಮ್ಮಿಂದ ಕೊಂಡು ತರಿಸುವುದು, ಅಲ್ಲದೆ ಇಷ್ಟೆಲ್ಲ ಸಿದ್ಧತೆಗಳಾದ ಬಳಿಕ ಅಮ್ಮ ಅವಳ ಕಾಲಿನ ಗಾಯವನ್ನು ಹಿಂಡಿ, ಹಿಸುಕಿ ಕೀವನ್ನು ಹೊರ ತೆಗೆದು ಅದಕ್ಕೆ ಸರಿಯಾದ ಆರೈಕೆಯನ್ನು ನೀಡಿ ಬ್ಯಾಂಡೇಜು ಮಾಡಿದಳು". ಇವೆಲ್ಲಾ ಮುಗಿದ ಮೇಲೆ, "ಅಂತೂ ಕೊನೆಗೊಮ್ಮೆ ಅವಳ ಡ್ರೆಸ್ಸಿಂಗು ಮುಗಿಯಿತು. ಅಮ್ಮ ಕೀವಿನಿಂದ ತುಂಬಿದ ಅರಳೆಯ ತುಂಡುಗಳನ್ನೆಲ್ಲ ಒಂದು ಹಾಳೆಯಲ್ಲಿ ಸುತ್ತಿ 'ಕಾಡಿನಲ್ಲಿ ಎಸೆದು ಬಿಡು' ಎಂದು ಹೇಳಿ ಅವಳಿಗೆ ಅದನ್ನು ನೀಡಿದಳು. ಅದಾದ ಬಳಿಕ ಅಮ್ಮ ಬಿದಿರು ಬುಟ್ಟಿಗಳ ಮೇಲೆ ನೀರು ಸುರಿವಂತೆ ನಾವು ಅವಳ ತಲೆಯ ಮೇಲೆ ತುಂಬಿದ ಕೊಡಗಳನ್ನು ಸುರಿದೆವು. ಅಮ್ಮ ಮಿಂದು ಮನೆಯಲ್ಲಿ ಬಂದಳು. ಒಂದು ಕಿರಿದಾದ ಡಬ್ಬಕ್ಕೆ ಒಂದಿಷ್ಟು ಮಲಮನ್ನು ತುಂಬಿ ತಪ್ಪದೆ ಮತ್ತೆ ಒಂದೆರಡು ಬಾರಿಯಾದರೂ ಅದನ್ನ ಗಾಯಕ್ಕೆ ಹಚ್ಚುವಂತೆ ಹೇಳಿ ಅದನ್ನವಳಿಗೆ ನೀಡಿದಳು. ಅಂದು ನಡೆದ ಆ ಘಟನೆಯಲ್ಲಿ ಅಸಂಗತವಾದುದೇನಾದರೂ ಇತ್ತೆಂದು ಅವಳಿಗಾಗಲಿ, ಅಮ್ಮನಿಗಾಗಲಿ, ನಮಗಾಗಲಿ ಅನ್ನಿಸಿರಲಿಲ್ಲ" (ಪು. ೨೦).

ಇಲ್ಲಿ, ದಲಿತ ಹೆಣ್ಣುಮಗಳನ್ನು ಮುಟ್ಟುವುದರ ಬಗ್ಗೆ ಲೇಖಕಿಯ ತಾಯಿಗೆ ಯಾವುದೇ ಹಿಂಜರಿಕೆ ಇರುವುದು ಕಾಣುವುದಿಲ್ಲ. ಆದರೆ, ಮುಟ್ಟಿದ್ದನ್ನು ಶುದ್ಧಗೊಳಿಸಿಕೊಳ್ಳುವ ಪ್ರಕ್ರಿಯೆಯಾಗಿ ತಲೆ ಮೇಲೆ ನೀರು ಸುರಿದುಕೊಳ್ಳುವುದು - ಕೇವಲ ಶುದ್ಧಗೊಳಿಸಿಕೊಳ್ಳುವ ಪ್ರಕ್ರಿಯೆಯಂತೆ ಕಾಣಿಸುತ್ತಿಲ್ಲ. ಅದಕ್ಕಿಂತಲೂ, ಇನ್ಯಾರನ್ನೋ ತೃಪ್ತಿಗೊಳಿಸಲು ಮಾಡುವ ಕ್ರಿಯೆಯಂತೆ ಕಾಣಿಸುತ್ತದೆ. ಸಮಾಜ ವಿಧಿಸಿದ ನಿರ್ಬಂಧಗಳನ್ನು ಮೀರುವ ದುಸ್ಸಾಧ್ಯತೆಯ ಪ್ರತೀಕವೆಂಬಂತೆ ಅವರ ವರ್ತನೆಗಳಿವೆ. ಈ ನಿರ್ಬಂಧವನ್ನು ಒಪ್ಪಿಕೊಂಡೇ ಅದರೊಳಗೆ ಅವಕಾಶವೊಂದನ್ನು (Space) ನಿರ್ಮಿಸಿಕೊಳ್ಳುವ ಹೆಣ್ಣುಮಕ್ಕಳ ಈ ಜಗತ್ತು ಅಸ್ಪೃಶ್ಯತೆಯ ಆಚರಣೆಯನ್ನೂ, ವರ್ಗಭೇದವನ್ನೂ ಕೇವಲ ಸರಳರೇಖೆಯ ವಿಭಜನೆಯೊಳಗಷ್ಟೇ ನೋಡುವ ಚಿಂತನೆಗಳಿಗೆ ಸೆಡ್ಡು ಹೊಡೆಯುವ ರೀತಿಯಲ್ಲಿದೆ. ಬಾಹ್ಯ ಜಗತ್ತಿನಲ್ಲಿನ ಅಸ್ಪೃಶ್ಯತೆಯೆಂದರೆ, ಎಂದೆಂದೂ ಮಟ್ಟದೇ ಇರುವ ಕಠಿಣ ಪ್ರತಿಜ್ಞೆಯಲ್ಲ ಎಂಬುದನ್ನು ಸೂಚಿಸುವ ಈ ನಿಜ ಘಟನೆ ಒಂದೆಡೆ ಇದ್ದರೆ, ಮಡಿಯೆಂಬುದು ಅನ್ಯರನ್ನು ಕೀಳ್

ಗೈಯುವುದು ಎಂಬ ಕಲ್ಪನೆಯನ್ನು ಭಂಜಿಸುವಂತೆ ಮೌಢ್ಯೋಪಾಸನೆ ಕತೆಯೊಳಗಣ ಘಟನೆ ಕಾಣುತ್ತದೆ. ಎಷ್ಟೋ ಬಾರಿ ಮೇಲ್ನೋಟದ ವಿವರಗಳು ನಮ್ಮ ಗ್ರಹಿಕೆಯ ಸತ್ಯವನ್ನಷ್ಟೇ ಅನಾವರಣ ಮಾಡುತ್ತವೆ. ಸ್ವಲ್ಪ ಅಪ್ರಾಸಂಗಿಕವೆನಿಸಿದರೂ, ಜಯಂತ ಕಾಯ್ಕಿಣಿಯವರ ಅನುಭವವೊಂದು ಇಲ್ಲಿ ನೆನಪಾಗುತ್ತಿದೆ - "ಒಂದಿನ ನಾನು ರೈಲ್ವೆ Over Bridge ಮೇಲೆ ಹೋಗ್ತಿದ್ದಾಗ ವ್ಯಕ್ತಿಯೊಬ್ಬ ಮೂರ್ಛೆ ರೋಗ ಬಂದು ಒದ್ದಾಡ್ತಾಯಿದ್ದ. ಜನ ಬಂದು ನೋಡಿದರು, ಹೋದರು. ಯಾರೋ ಒಬ್ಬ ಬಂದು ಗಾಳಿ ಹಾಕಿದ. ಇನ್ನೊಬ್ಬ ಕೈಗೆ ಕಬ್ಬಿಣ ಕೊಟ್ಟ, ಮತ್ತೊಬ್ಬ ಬಾಯಿಗೆ ಚಪ್ಪಲಿಯಿಟ್ಟ. ಆದರೆ ಯಾರೊಬ್ಬರೂ ಅಲ್ಲಿ ನಿಲ್ಲಿಲ್ಲ. ಆಗವನ ಕಿಸೆಯಲ್ಲಿ ಕಾಗದವಿತ್ತು. ಯಾರೋ ಒಬ್ಬ ಅದನ್ನ ತೆಗೀರಿ, ಅವನ ಮನೆ ವಿಳಾಸವಿರಬಹುದು ಅಂತಂದ. ತೆಗೆದರೆ ಅದರಲ್ಲೊಂದು ವಿಚಿತ್ರ ನಕಾಶೆ. ಅದು ಭಾರತ ದೇಶ, ಕರ್ನಾಟಕ ಎಲ್ಲಾ ರೀತಿ ಕಾಣುವ ನಕಾಶೆ. ಅಯ್ಯೋ, ಇದು ಯಾರೋ ಸ್ಮಗ್ಲರ್, ನಮಗೆ ಕಷ್ಟ ಬರುತ್ತೆ ಅಂತ ಒಬ್ಬ ಅಂದ. ಮತ್ತೊಬ್ಬನೂ ಅದನ್ನೆ ಹೇಳಿದ ಪೋಲೀಸ್‌ಗೇ ಕೊಡೋಣ ಅಂದ.

ಆದರೆ ಅಲ್ಲಿಯೇ ನನ್ನ ಸ್ನೇಹಿತನ ಸಣ್ಣ ಮಗನಿದ್ದ. ಆತ ನಕಾಶೆ ನೋಡಿ ಹೇಳಿದ. ಅಪ್ಪಾ ಇದು ಸಣ್ಣ ಮಗುವಿನ ಪಾದದ ಗುರುತು ಅಂದ. ಅಂದರೆ ಆ ವ್ಯಕ್ತಿ ಸಮ್ನ ಮಗನ ಪಾದದ ಗುರುತು ತಂದು ಚಪ್ಪಲಿ ತಗೊಳ್ಳುವ ಯೋಚನೆಯಲ್ಲಿದ್ದ... (ಕನ್ನಡ ಮನಸ್ಸು ಬೌದ್ಧಿಕ ಸ್ವಾತಂತ್ರ್ಯ, ಆಳ್ವಾಸ್‌ನುಡಿಸಿರಿ, ೨೦೦೫, ಪು. ೨೦೩) ನೋಡುವ ನೋಟಗಳು ಅವುಗಳ ಪೂರ್ವಗ್ರಹಿಕೆಗಳಿಗನುಗುಣವಾಗಿ ಸತ್ಯಗಳನ್ನು ಗ್ರಹಿಸುವುದನ್ನು ಈ ಅನುಭವ ಹೇಳುತ್ತದೆ. ಹಾಗೆಯೇ ತಮ್ಮದಲ್ಲದ ತಪ್ಪುಗಳಿಗಾಗಿ ಮಡಿ ಹೆಂಗಸರಾಗುವ ವಿಧವೆಯರ ಬಗೆಗಿನ ಚಿಂತನೆಗಳಲ್ಲೂ ಹಲವು ಮಗ್ಗುಲುಗಳಿವೆ. ಇವರು ಬೇರೆಯವರನ್ನು ಅಸ್ಪೃಶ್ಯರನ್ನಾಗಿ ಸುತ್ತಿದ್ದಾರೋ, ಸ್ವಯಂ ಅಸ್ಪೃಶ್ಯತೆಗೆ ಒಳಗಾಗಿದ್ದಾರೋ ಎಂಬಷ್ಟು ಅನುಮಾನ ಇದರ ಬಗ್ಗೆ ಹುಟ್ಟಿಕೊಳ್ಳುತ್ತದೆ. ವಿಧವೆಯರೆಂದರೆ, ಕೇವಲ ದೈಹಿಕ ಕಾಮನೆಗಳ ವಿರುದ್ಧ ಹೋರಾಡುವ ಅಸಂತೃಪ್ತರು ಎಂಬಂತಹ ಚಿತ್ರಣಗಳು ನವ್ಯದ ಕತೆಗಳಲ್ಲಿ ಹಾದುಹೋಗಿವೆ ಅಥವಾ ಅದೇ ಅವರ ಪರಮಸಮಸ್ಯೆ ಎಂಬ ಧೋರಣೆಯೊಂದು ಅಲ್ಲಿ ಕೆಲಸ ಮಾಡುತ್ತದೆ. ಇದನ್ನು ಮೀರಿ ಅವರ ಬದುಕಿನ ಜೊತೆಗಿನ ಅವರ ಸಾಂಗತ್ಯದ ವಿಭಿನ್ನ ನೆಲೆಗಳನ್ನು ಕಾರಂತ, ಎಂ.ಕೆ. ಇಂದಿರಾ, ವೈದೇಹಿ, ವಸುಧೇಂದ್ರ ಮುಂತಾದವರು ತಮ್ಮ ಕೃತಿಗಳಲ್ಲಿ ಅನಾವರಣ ಮಾಡುತ್ತಾರೆ. ಈ ಕಥಾನಕಗಳು ಹೀಗೆ ಅನಾವರಣಗೊಳ್ಳುತ್ತಲೇ ಹೊಸ ಸತ್ಯಗಳ ಬಾಗಿಲುಗಳನ್ನು ತೆರೆಯುತ್ತವೆ.

# ಹೂವಿನದಂಟು : ಚಲವಾದಿ ಗೌರಮ್ಮ

ಆರ್.ಜಿ. ಮಠಪತಿ



"ಮರದ ಒಳಗಿನ ಪದವ
ಇರುಳು ಹಾಡುತಲಿತ್ತು
ಬಯಲಿತ್ತು ನಾದದ ಬೀಜದಲ್ಲಿ,
ಹಗಲ ಹಾದಿಯ ಬದಿಗೆ
ಬಿಸಿಲ ಕೊಯ್ದಿಟ್ಟಂತೆ
ಆತ್ಮೋನ್ನತಿ ಅರ್ಥ ಹುಡುಕುತಿತ್ತು,
ಕೊಳೆತ ಕಾಲದ ಗುಂಟ
ಮೊಳೆತ ಹೂವಿನದಂಟು
ಪರಿಮಳವ ಚೆಲ್ಲಿತ್ತು ಸಂತೆಯೊಳಗೆ" - ಶಂಕರ ಕಟಗಿ
"ಬಯಲನಾದದ ಬೀಜ"

ನೋಟದೊಳು ನಿರ್ಮೋಹಿಯಾಗಿ, ಆಡಿದ ಪ್ರತಿ ಮಾತಿನ ಗುರಿಯನ್ನೂ ಆತ್ಮೋನ್ನತಿಯಾಗಿರಿಸಿಕೊಂಡು, ಪದಗಳನ್ನು ಹಾಡುತ್ತಲೇ ಬಯಲಿಗೆ ನಾದದ ಬೀಜ ಬಿತ್ತುತ್ತ, ಜಂಗಮವಾಗಿದ್ದ, ಕನಕದಾಸರನ್ನು ಕುರಿತು ಬರೆದ ಮೇಲ್ಕಾಣಿಸಿದ ಪದ್ಯ 'ಗಾಘರ್ ಮೆ ಸಾಗರದಂತೆ. ಇಲ್ಲಿ ಯಾರು, ಯಾರನ್ನು ಕುರಿತು ಬರೆದರು? ಎನ್ನುವುದಕ್ಕಿಂತ ಯಾವ ಪರಂಪರೆಗೆ ಯಾವ ಹೊಸ ಅರ್ಥ ವ್ಯಾಪ್ತಿಯನ್ನು ದೊರಕಿಸಿಕೊಟ್ಟಿತು ಎನ್ನುವುದರಲ್ಲಿ, ಕವಿಯ, ಕವಿತೆಯ ಹಾಗೂ ಅದರ ಬಾಹು-ಬಾಚುವಿಕೆಯೊಳಪಡುವವರೆಲ್ಲರ ಸೌಂದರ್ಯ ನೂರ್ಮಡಿಸುತ್ತದೆ. ಬಯಲ ಬೈರಾಗಿಗಳಂತೆ ಬದುಕಿಯೂ ನಾಡು ಮತ್ತು ನಾಡವರ ಬುದ್ಧಿ, ಭಾವ ಹಾಗೂ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಎಲ್ಲ ಜನಪದ ಕವಿಗಳು, ಕಾಡವರು, ನಾಡವರು ಈ ಕವಿತೆ ಸಾರಿದ್ದನ್ನೇ ಬದುಕಿದವರು. ಹೀಗಾಗಿ ತತ್ವಪದಕಾರಳಾಗಿ ಬಾಳಿದ್ದ 'ಚಲವಾದಿ ಗೌರಮ್ಮ'ನ ಈ ಲೇಖನಕ್ಕೂ ಇದು ಅನ್ವಯಿಸುತ್ತದೆ ಎಂದು ಹೇಳಬೇಕಾಗಿಲ್ಲ.

ಚಲವಾದಿ ಗೌರಮ್ಮಳದೂ ಮರದ ಒಳಗಿನ ಪದವ ಕೆದಕುವ, ನಾದದಲ್ಲಿ ತತ್ವದ ಬೀಜ ಬಿತ್ತುವ, ಬಿಸಿಲ ಕೊಯ್ದಿಟ್ಟು ಬಾಳಿನ ಅರ್ಥ ಹುಡುಕುವ, ಕಳೆಗುಂದುವ ಕಾಲದ ಎದೆಯೊಳಗೊಂದು ಹೂವಿನ ದಂಡೆಕಟ್ಟಿ, ಪರಿಮಳದ ಕನಸು ಕಾಣುವ, ಹರ ಸಾಹಸದ

ಬದುಕು. ಚಲವಾದಿ ಗೌರಮ್ಮಳ ಬಾಳನ್ನೇನೂ ನಾನು ನೇರವಾಗಿ ಕಂಡವನಲ್ಲ. ಆದರೆ ಕಾಲ ದೇಶಗಳಿಂದ ಅತೀತವಾದ ಸಂಗೀತ ಎನ್ನುವ ಭಾಷೆಯನ್ನು ಬಳಸಿಕೊಂಡು ನಾಡಿನುದ್ದಕ್ಕೂ ಬೆಳಕು ಬಿತ್ತಲು ಪ್ರಯತ್ನಿಸಿದ ಅವಳ ಸಂಸ್ಕಾರ ನನ್ನ ಬಾಲ್ಯವನ್ನೂ ಸೋಂಕಿಲ್ಲ ಎಂದು ಹೇಳುವುದು ಪ್ರಮಾದವಾದೀತು. ಯಾಕೆಂದರೆ ಸಂಗೀತ ಎಲ್ಲೋ, ಯಾರಲ್ಲೋ, ಯಾವ ಕಾಲಕ್ಕೋ ಹುಟ್ಟಿ, ಇನ್ನೆಲ್ಲೋ, ಯಾರನ್ನೋ, ಯಾವುದೋ ಕಾಲಕ್ಕೂ ಮುಟ್ಟುವ ಜೀವನದಿ.

ಚಲವಾದಿ ಗೌರಮ್ಮ ಈ ಜೀವನದಿಯ ಒಂದು ಶ್ರೋತ. ಬದುಕಿದ್ದೂ ದೀರ್ಘ, ಇವಳ ಮುಗಿಯದ ಹಾಡುಗಳ, ಕಥೆಗಳ ಇತಿಹಾಸ ಇನ್ನೂ ಸುದೀರ್ಘ. ಇವಳು 'ಅಸಾಮಾನ್ಯ'ಳು ಎಂಬ ಸವಕಲು ಪದಕ್ಕೆ ಸಿಲುಕಿ ಸತ್ತು ಹೋಗಿದ್ದರೆ ನಾನಿವಳ ಕುರಿತು ಬರೆಯಬೇಕಾಗಿರಲಿಲ್ಲವೇನೊ. ಇವಳು ಸಾಮಾನ್ಯಳೇ, ಆದರೆ ನಾವು ಅವಳ ಅವಸಾನದ ನಂತರವೂ ಮೆಲುಕು ಹಾಕುವಂತಾದಳಲ್ಲ, ಇದಕ್ಕೆ ಕಾರಣವೇನು? ಎಂದು ಪ್ರಶ್ನಿಸಿಕೊಳ್ಳುತ್ತ ಮತ್ತೆ ಬರೆಯಬೇಕಾಗಿದೆ. ಅಷ್ಟೆ. ಆಶ್ಚರ್ಯವೆಂದರೆ ಚಲವಾದಿ ಗೌರಮ್ಮ ನಮಗಾರಿಗೂ ಗೊತ್ತಿಲ್ಲದರ ಕುರಿತು ಹಾಡಿ ದೊಡ್ಡವಳಾದಳು ಎಂದೂ ಕೂಡಾ ನೀವೆಂದುಕೊಳ್ಳಲಾಗದು, ಯಾಕೆಂದರೆ ಇವಳು ಹಾಡಿದ್ದೆ ಹಳ್ಳಿಗಳ ಅವಿಭಕ್ತ ಕುಟುಂಬ, ಅತ್ತೆ, ಮಾವ, ಮೈದುನ, ನಾದುಗಿ, ನೆಗೆಯಣ್ಣೆ, ಬರಗಾಲ ಬವಣೆ, ಅಳಿಯನ ಹಠ. ತವರ ಹಂಬಲ, ಹೊಲದ ಹಸಿರು, ತರತರದ ಬಯಕೆಯ ಹೆಣ್ಣಿನ ಬಸಿರು, ಸಂಸಾರ, ತೊಟ್ಟತೊಡಿಗೆ, ಉಂಡ ಊಟ, ಮನೆಯೊಳಗಿನ ಜಗಳ, ಕದನಗಳಂಥ ನೆಲಕ್ಕಂಟಿದ ವಿಷಯಗಳನ್ನೇ ಕುರಿತು. ಈಕೆ ಸಿದ್ಧಾಂತಗಳನ್ನೇನೂ ಸ್ಥಾಪಿಸಲಿಲ್ಲ. ವಿಶ್ವವಿದ್ಯಾಲಯಗಳಲ್ಲಿ ಇವಳ ಕುರಿತಾದ ಪೀಠಗಳೇನೂ ಇಲ್ಲ. ಅಕ್ಕನ ಮಾತುಗಳಲ್ಲೇ ಹೇಳಬೇಕೆಂದರೆ ಚಲವಾದಿ ಗೌರಮ್ಮ 'ಎರೆಯಂತೆ ಕರಕರಗಿ, ಮಳಲಂತೆ ಜರಿಜರಿದು, ಆಪತ್ತಿಗೆ ಸಖಿಯರಾರನೂ ಕಾಣದೆ' ಸಂಸಾರ ಎಂಬ ತಿರುಗಣೆಯಲ್ಲಿ ಸಿಕ್ಕು ಒದ್ದಾಡಿ, ತಾ ಪಟ್ಟ ಪಾಡೇ ಹಾಡಾಗಿ ಕೊಟ್ಟವಳು. ಲೇಖಕಿ ನೀಲಗಂಗಾ ಚರಂತಿಮಠ ಗೌರಮ್ಮನ ಬಗ್ಗೆ ಹೇಳುವಂತೆ ಈಕೆ 'ಜೀವವಾಗಿ ಹುಟ್ಟಿ ದೇವಳಾಗುವ ಬಯಕೆ' ಹೊಂದಿದವಳು. ಗೌರವ್ವ, ಬೆಳೆದಳು, ಹೆಮ್ಮರವಾದಳು, ಹಾಡಾದಳು, ನಾಡಿನ ಜನಪದ ಭಂಡಾರವಾದಳು. ಲೌಕಿಕ ಬಂಡಾರ ಒಂದು ದಿನ ಕರಗಿ ಹೋಗಬಹುದೇನೊ, ಆದರೆ ಸಾಂಸ್ಕೃತಿಕ ಭಂಡಾರವಾದ ಈಕೆ ಬರೆದೂ ತೀರದ ಬದುಕು ಹಾಗೂ ಹಾಡಿಯೂ ತೀರಿಸದ ಹಾಡು.

ಚಲುವಾದಿ ಗೌರಮ್ಮ ನಿರಕ್ಷರಿಯಾಗಿದ್ದಳು ಎನ್ನುವುದು ಅವಳ ಕಡೆಗೆ ಅನುಕಂಪಕೊಂದು ನೆಪವಾಗಬೇಕಿಲ್ಲ. ಯಾಕೆಂದರೆ ಅಕ್ಷರ ಲೋಕಕ್ಕೂ ಮತ್ತು ತತ್ವಾನುಭೂತಿಗೂ ಯಾವುದೇ ಸಂಬಂಧ ಇಲ್ಲಾ ಎನ್ನುವುದನ್ನು ನಮ್ಮ ಜನಪದರು ಬಹಳ ಚೆನ್ನಾಗಿ ಸಾಧಿಸಿ ತೋರಿಸಿದ್ದಾರೆ. ನಮ್ಮ ಗೌರಮ್ಮ ತನ್ನ ಕಂಚಿನ ಕಂಠದಿಂದ ಹಾಡಿ ಅಮರಗೊಳಿಸಿದ ತತ್ವಪದಕಾರರಾದ ಶಿಶುನಾಳ ಶರೀಫ, ಕಡಕೋಳದ ಮಡಿವಾಳೇಶ, ಸಿದ್ಧಾರೂಢ, ನಿಜಗುಣ ಶಿವಯೋಗಿ,

ಬಬಲಾದಿ ಶರಣರು, ಗೌರಮ್ಮನ ಮೇಲೆ ಅಗಾಧ ಪರಿಣಾಮ ಬೀರಿದ್ದ ತಾಯಿ ಎಲ್ಲವ್ವ, ಆಕೆಯ ಗೆಳತಿ ಶೆಟ್ಟೆವ್ವ, ಯಾರೂ ಕೂಡಾ ಅಕ್ಷರ ಲೋಕದಿಂದ ಬಂದವರಲ್ಲ. ಹಾಗೆಯೇ ಬಯಲು ವಿಶ್ವವಿದ್ಯಾಲಯದ 'ಬೆಡಗಿನ ಹಾಡುಗಾರ್ತಿ', 'ದೀಡ ಸಾವಿರ ಹಾಡಿನದೊರೆಸಾನಿ', 'ಜನಪದ ಯಕ್ಷಿಣಿ', 'ಶೋಷಿತ ವರ್ಗದ ಶಾರದೆ; ಮತ್ತು 'ಜನಪದ ಸಿರಿ' ಎಂದೆಲ್ಲ ಕರೆಯಿಸಿಕೊಂಡ ಗೌರಮ್ಮನೂ ಕೂಡಾ ನಿರಕ್ಷರ ಲೋಕದ ಸುಸಂಸ್ಕೃತ ಮಹಿಳೆ.

ಶರಣ ಸಂಸ್ಕೃತಿಯ ಸಾಕಾರ ರೂಪದಂತಿದ್ದು, ಅದರಲ್ಲೂ ವಿಶೇಷವಾಗಿ ಬಸವಣ್ಣ ಹಾಗೂ ಆಯ್ದಕ್ಕಿ ಮಾರಯ್ಯರ ಸರಳ ಜೀವನ ಶೈಲಿಯನ್ನು ಆದರ್ಶವಾಗಿರಿಸಿಕೊಂಡಿದ್ದ ಗೌರಮ್ಮ ತತ್ವಪದ, ಬೀಸುವ ಪದ, ಸೋಬಾನ ಪದ, ನಿಬ್ಬಣ ಪದ, ಬಸವಣ್ಣನ ಪದ, ಗುರುವಿನ ಪದಗಳ ಜೊತೆಗೆ, ಕಂಡದ್ದು, ಕೇಳಿದ್ದು, ಅನುಭವಿಸಿದ್ದು, ಕಲಿಸಿದ್ದು ಸೇರಿಸಿ ಸ್ವಯಂ ತಾನು "ಅಕ್ಷರ ಕಲಿಯದಿದ್ದರೂ ಅಕ್ಷರ ಲೋದ ಭಂಡಾರಕ್ಕೆ ತನ್ನ ಬಂಗಾರದ ಪದಗಳ ಉಡಿ ತುಂಬಿದವಳು" ಎಂಬ ಶ್ರೀ ಪ್ರಕಾಶ ಖಾಡೆ ಅವರ ಮಾತು ಅರ್ಥಪೂರ್ಣ ವಾದುದು. ಪುಸ್ತಕಗಳನ್ನು ಆಧರಿಸಿದ ನಮ್ಮ ಸಾಧನೆಗೊಂದು ಪರ್ಯಾಯ ದೊರೆತೀತೇನೊ? ಆದರೆ ನಿಸರ್ಗ, ಆಚರಣೆ, ಋತುಮಾನಗಳನ್ನು ನಂಬಿ ಸಂಸ್ಕೃತಿಯನ್ನು ಕಟ್ಟಿಕೊಟ್ಟ ಜನಪದ ಆಶುಕವಿಗಳಿಗೆ, ಗರ್ದಿ ಗಮ್ಮತ್ತಿನವರಿಗೆ, ಹಾಲಕ್ಕಿ ಒಕ್ಕಲಿಗರಿಗೆ, ಹೆಳವರಿಗೆ, ಬಹುರೂಪಿ ಗಳಿಗೆ, ಕಿಳ್ಳೇಕ್ಯಾತರಿಗೆ, ಡೊಂಬರಿಗೆ, ಸುಡುಗಾಡ ಸಿದ್ಧರಿಗೆ, ಕೊರವಂಜಿಯವರಿಗೆ, ಶಕುನದವರಿಗೆ ಯಾವ ಪರ್ಯಾಯ ಹೇಳಿ? ನಮ್ಮ ಅಧ್ಯಯನ ಪೀಠಗಳು, ಕ್ಯಾಮರಾ, ಡಾಕ್ಯೂಮೆಂಟ್ರಿಗಳು, ಮಾಧ್ಯಮ, ಅಕಾಡೆಮಿಗಳು, ಗೌರಮ್ಮನ ನೆರಳು ಸೆರೆ ಹಿಡಿಯುವಲ್ಲಿ ಸಮರ್ಥವೇ ವಿನಃ ಹಾಡಿನ ಗೌರಮ್ಮನನ್ನಲ್ಲ. ಯಾಕೆಂದರೆ ನಮ್ಮ ಆವಿಷ್ಕಾರಗಳೆಲ್ಲವೂ ಪ್ರನಾಳ ಶಿಸುಗಳು. ನಾವು ಗೌರಮ್ಮನನ್ನಾಗಲಿ ಅಥವಾ ಇನ್ನಾವುದೇ ಜನಪದ ಕಲಾವಿದೆಯನ್ನು ಮತ್ತೆ ಮತ್ತೆ ಸ್ಮರಿಸಿಕೊಳ್ಳಬೇಕಾಗಿದೆ, ಅದಕ್ಕಿರುವ ಕಾರಣ ಅವಳು ಈ ನಾಡಿನ ಕಲೆಯ ಸೆಲೆಯನ್ನು ಕಾಯ್ದಿರಿಸಿಕೊಂಡು ಬಂದ ಹಿಂದುಳಿದ ಜನಾಂಗಕ್ಕೆ ಸೇರಿದವಳು ಆಗಿರುವುದಕ್ಕಾಗಿ. ಗದುಗಿನ ಶ್ರೀಸಿದ್ಧಲಿಂಗ ಮಹಾಸ್ವಾಮಿಗಳು ಹೇಳುವಂತೆ "ಹಿಂದುಳಿದ ಜನಾಂಗ ನಾಗರಿಕತೆಯ ಪ್ರಭಾವಕ್ಕೆ ಬೇಗ ಒಳಗಾದುದರಿಂದ ಆ ಜನಾಂಗದಲ್ಲಿ ಇನ್ನೂ ಜನಪರವಾದ, ಜನಪದದ ಸಾಹಿತ್ಯ ಉಳಿದುಕೊಂಡು ಬಂದಿದೆ. ಹಳೆಯ ದಿನಮಾನದ ಪಳೆಯುವಿಕೆಯಂತಿರುವ ಬಾಗಲಕೋಟೆಯ ಶ್ರೀಮತಿ ಗೌರಮ್ಮ ಚಲವಾದಿ ಒಂದರ್ಥದಲ್ಲಿ ಜನಪದ ಸಾಹಿತ್ಯದ ಸಾಗರ".

ಆಫರುಲಪುರ ತಾಲೂಕಿನ ಹಿರೇಮಣ್ಣೂರು ಗ್ರಾಮದವಳಾಗಿದ್ದ ಗೌರಮ್ಮ ಉರ್ದು, ಮರಾಠಿ ಹಾಗೂ ಕನ್ನಡದಲ್ಲಿ ವ್ಯವಹರಿಸುತ್ತಲೇ ಬೆಳೆದವಳು. ಬೀಸುತ್ತ, ಕೌದಿ ಹೊಲಿಯುತ್ತ, ಅವ್ವನ ಗರಡಿಯಲ್ಲಿ ಪದ ಕಟ್ಟುವುದನ್ನು ಕಲಿತಳು. ಬಾಲ್ಯವಿವಾಹಕ್ಕೆ ಬಲಿಯಾಗಿ ಶೋಡಷಿ ಯಾಗುವ ಮೊದಲೇ, ವೈಧವ್ಯಕ್ಕೊಳಗಾದಳು. ಮರುಮದುವೆಯಾಗಿ ಇಬ್ಬರು ಮಕ್ಕಳನ್ನು ಪಡೆಯುತ್ತಲೇ ನಡುಯೌವ್ವನದಲ್ಲಿ ಮತ್ತೆ ವಿಧವೆಯಾದಳು. ಸ್ವಾಭಿಮಾನದ ಗೌರಮ್ಮ

ತನ್ನ ದುರ್ದೈವಕ್ಕಾಗಿ ಯಾರನ್ನೂ ದೂಷಿಸದೆ ಮಕ್ಕಳೊಂದಿಗೆ ಗಂಡನೂರು ಸಾಲೋಟಗಿ ಬಿಟ್ಟು, ಗುಳೇ ಹೊರಟು, ಧಾರವಾಡ ಜಿಲ್ಲೆಯ ನವಲಗುಂದಕ್ಕೆ ಬಂದಳು.

ನವಲಗುಂದಿ-ನರಗುಂದ ಹಿರೇಮಠದ ಪಟ್ಟದ್ದೇವರ ಕೃಪಾಪೋಶಿತಳಾಗಿ, ತಾಲೂಕಿನಾದ್ಯಂತ ೨೫ ವರ್ಷ ಕಾಲ 'ಚೆಲವಾದಿ ಬಟ್ಟಲು' ಹಿಡಿದು ಸ್ತ್ರೀ ಲೋಕಕ್ಕೆ ವಿನೂತನ ಮಾದರಿ ಯಾದಳು. ೧೯೬೫-೬೬ರಲ್ಲಿ ಹಾಡುಗಾರಳಾಗಿ ಆಕಸ್ಮಿಕವಾಗಿ ಗುರುತಿಸಿಕೊಂಡ ಗೌರಮ್ಮ

ತಾಳ್ಯಾಕ ತಂತ್ಯಾಕ

ರಾಗದ ಚಿಂತ್ಯಾಕ - ಎಂದು ಬಳಗವಂತಿ ಗೌರವ್ವ ಬಂಧುಗಳೆಲ್ಲರ ಹೆಸರು ಪೋಣಿಸಿ ಹಾಡಲಾರಂಭಿಸಿದವಳು, ೨೦೦೨ರವರೆಗೆ, ನಿರಂತರ ಸುಮಾರು ನಾಲ್ಕು ದಶಕಗಳವರೆಗೆ ಸತ್ತಲ್ಲಿ, ಹುಟ್ಟಿದಲ್ಲಿ, ಅಪಾರ ಶ್ರೋತೃಗಳ ಸಮ್ಮುಖದಲ್ಲಿ, ಪೂಜ್ಯರ ಸನ್ನಿಧಾನದಲ್ಲಿ, ಮಠ, ಮಂದಿರ, ಗೋಷ್ಠಿ, ಸಮಾರಂಭ, ಸರಕಾರಿ, ಅರೆಸರಕಾರಿ, ಖಾಸಗಿ ಎಲ್ಲ ರೀತಿಯ ಕೇಳುಗರ ಮುಂದೆ ತನ್ನ ಗಾನ ಗಂಗೆಯನ್ನು ಹರಿಸಿದಳು. ಉಸಿರಿರುವವರೆಗೂ ಕನ್ನಡದ ಕುಲಗುರು ಗದುಗಿನ ತೋಂಟದ ಸಿದ್ಧಲಿಂಗಮಹಾಸ್ವಾಮಿಗಳನ್ನು, ಅಣ್ಣಿಗೇರಿ ಆರಾಧ್ಯ ಮಠದವರನ್ನು ಸ್ಮರಿಸಿ ಹಾಡಿದ ಗೌರಮ್ಮ ವಾದ್ಯೋಪಕರಣಗಳ ನೆರವಿಲ್ಲದೆ ಹಾಡುತ್ತಿದ್ದುದು ಅವಳ ಕಂಠಶಕ್ತಿಗೆ ಸಾಕ್ಷಿಯಾಯಿತು. ಗುರುಪರಂಪರೆಯ ತೀವ್ರ ಅನುರೋಧಕಳಾಗಿದ್ದ ಗೌರಮ್ಮ 'ಗುರುವಿನ ನೆನಿಮನವ, ಮರೆದಿಯೊಳಗ ಇರಬ್ಯಾಡ' ಎಂದು ಸದಾ ಎಚ್ಚರಿಸಿದಳು. ಅನಕ್ಷರಸ್ಥ ಗೌರವ್ವ ನಾಡಿನ ಉದ್ದಗಲಕ್ಕೂ ಹಾಡಿದ್ದು ತಾನು ಹಾಡದೇ ಇರಲಾರದ್ದಕ್ಕಾಗಿ. ಹಾಡು ಆಕೆಯ ಅಂತರಂಗದ Urgencyಯಾಗಿತ್ತೇ ವಿನಃ ಪದವಿ, ಪುರಸ್ಕಾರ, ಪ್ರಶಸ್ತಿ ಅವಳ ಮುಖ್ಯ ಗುರಿಯಾಗಿರಲಿಲ್ಲ. 'ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ' ಎನ್ನುವ ಹಾಗೆ ಹೆಸರು, ಕೀರ್ತಿ ಇರುವ ಕಾಲದಲ್ಲೂ ತನಗಾಗಿ ತನ್ನ ಕುಟುಂಬಕ್ಕಾಗಿ ಗೌರಮ್ಮ ಸರಕಾರ ಮತ್ತು ಯಾರೆದುರೂ ಕೈ ಚಾಚಲಿಲ್ಲ. ಶರೀಫರಂತೆ, ಹಾಡುವುದರಲ್ಲಿ ಅವಳು ಗುರು ಸ್ಮರಣೆಗಾಗಿ ಹಾಗೂ ಪರಶಿವನ ಧ್ಯಾನಕ್ಕಾಗಿ ಬಂದು ಪರಿಹಾರೋಪಾಯವನ್ನು ಕಂಡುಕೊಳ್ಳುತ್ತಿದ್ದಳು. ಆದಾಗ್ಯೂ ಆಕೆಗೆ ಬಂದ ಪ್ರಶಸ್ತಿಗಳು ಅನೇಕ. ಮುಖ್ಯವಾಗಿ 'ಜನಪದ ಶ್ರೀ', 'ರಾಜ್ಯ ಪ್ರಶಸ್ತಿ', 'ಡಾ. ಅಂಬೇಡ್ಕರ್ ಪ್ರಶಸ್ತಿ'ಗಳು, '೬ಲನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ', 'ಲಕ್ಕುಂಡಿ ಉತ್ಸವ', 'ಗ್ರಾಮೀಣ ರಂಗೋತ್ಸವ' ದಲ್ಲಿ ಸನ್ಮಾನ ಇವು ಗೌರಮ್ಮನಿಗೆ ಸಂದ ಗೌರವಗಳಲ್ಲಿ ಕೆಲವು ಮಾತ್ರ. ವರ್ತಮಾನವನ್ನು ನೋಡಿ ಚೆಲವಾದಿ ಗೌರಮ್ಮನ ಪುತ್ರರಾದ ಮಲ್ಲಿಕಾರ್ಜುನ ಚಲುವಾದಿಯವರು ಹೇಳುವ ಪ್ರಕಾರ "ಕಾಡುಹಕ್ಕಿಗೆ ಸಲ್ಲಬೇಕಾದುದು ಇನ್ನೂ ಬಹಳ ಇತ್ತೇನೊ, ಆದರೆ ಎಂದೊ, ಯಾರಿಗೂ, ಏನನ್ನೂ ಕಲೆಯ ಹೆಸರು ಹೇಳಿ ಬೇಡ ಕೊಡದು ಎಂದ ಕಟ್ಟಾಜ್ಞೆ ಹೊರಡಿಸಿದ್ದ ಅವ್ವ ಯಾವುದಕ್ಕಾಗಿಯೂ ಆಶಿಸಲಿಲ್ಲ" ಎನ್ನುತ್ತಾರೆ. ಇದು ಗೌರಮ್ಮನ ಒಂದೆರಡು

ಮುಖಿಗಳ ಪರಿಚಯವಾದರೆ ಇಲ್ಲಿ ಪರಿಚಯಿಸಲೇಬೇಕಾದ ಇನ್ನೊಂದು ಪ್ರತಿಭೆ ಅವಳಲ್ಲಿತ್ತು. ಅದನ್ನು ಅವಳ ಬಾಳಿನ ಕೊನೆಯ ದಿನಗಳಲ್ಲಿ ಅಂದರೆ ೧೯೯೯ರ ಆಚೆ ಡಾ. ಸರೋಜನಿ. ಆಯ್. ಪಾವಟೆಯವರು ಹೊರತಂದಿದ್ದಾರೆ. ಹಾಡುಗಳ ಬತ್ತದ ಒರತೆಯಾಗಿದ್ದ ಗೌರಮ್ಮ, ಮುಗಿಯದ ಕತೆಗಳ ಮಹಾನ್‌ಕೋಶವೂ ಆಗಿದ್ದಳು. ಸಾಮಾನ್ಯವಾಗಿ ಗೌರಮ್ಮ ಚಲವಾದಿಯ ಸಮಕಾಲೀನ ಜನಪದ ಹಾಡುಗಾರ್ತಿಯರಾದ ಗೌರವ್ವ ಮಾದರ, ಸುಕ್ರಿಗೌಡ, ತುಳಸಿಗೌಡ, ಫಕೀರಪ್ಪ ಗುಡಿಸಾಗರ ಹಾಡೊಂದರಲ್ಲಿಯೇ ವಿಶಿಷ್ಟರಾದರೆ, ಗೌರಮ್ಮ ಮಾತ್ರ ಕಥಾ ಕೋಶದಲ್ಲಿಯೂ ತನ್ನ ಹೆಜ್ಜೆ ಮೂಡಿಸಿ ಹೋದಳು. ಇನ್ನೂ ಸಕಾಲಕ್ಕೆ ಪ್ರಾರಂಭಿಸಿದ್ದರೆ, ಕಥಾಲೋಕಕ್ಕೂ ನಿಬ್ಬೆರಗುಗೊಳಿಸಬಹುದಾದ ಕಥೆಗಳನ್ನು ಗೌರಮ್ಮನಿಂದ ಪಡೆಯಬಹುದಿತ್ತೇನೋ? ೧೯೯೯, ಅಂದರೆ ಆಕೆಯ ನೆನಪುಗಳ ಬುತ್ತಿಗೆ ಮರೆವು ಮುತ್ತುವ ಕಾಲ. ಅಂಥ ವೇಳೆಯಲ್ಲಿ ಒಂದು ತಿಂಗಳು ದಿನಾಲು ಭೇಟಿಯಾಗಿ ಕಥೆಗಳನ್ನು ಸಂಗ್ರಹಿಸಿದ ಸರೋಜನಿ ಪಾವಟೆಯವರು ಹಾಡಿನ ಗೌರಮ್ಮನನ್ನು, ಕಥೆಗಳ ಗೌರಮ್ಮನಾಗಿಯೂ ದಾಖಲಿಸಿ, ಕನ್ನಡ ಜನಪದ ಕಥಾಕೋಶವನ್ನು ಶ್ರೀಮಂತಗೊಳಿಸಿದ್ದಾರೆ. ಗೌರಮ್ಮನ ಕಥೆ ಗಳನ್ನು ಓದಿದಾಗ, ನಾವು ಕಳೆದುಕೊಂಡ ಭಾಷಾ ಭಂಡಾರ, ಹೃದಯ ಶ್ರೀಮಂತಿಕೆ, ಮೌಲಿಕ ಧ್ರುವೀಕರಣ, ನೈತಿಕ ಅಧಃಪತನ, ಪ್ರಜ್ಞಾವಂತ ಮನಸ್ಸಿಗೆ ಬೇತಾಳದಂತೆ ಬೆನ್ನಟ್ಟುತ್ತವೆ. ಗೌರಮ್ಮನಂಥ ನಮ್ಮ ಸಾವಿರ ಸಾವಿರ ಜನಪದರ ನಿರ್ಗಮನ ಸಾಂಸ್ಕೃತಿಕ ಲೋಕಕ್ಕೆ ಎಂಥ ನಷ್ಟ ಎಂಬುದನ್ನು ಸಾಬೀತುಪಡಿಸುತ್ತದೆ.

ಇವುಗಳಿಂದ ಹೊರತಾದ ಗೌರಮ್ಮನ ವೈಯಕ್ತಿಕ ಬದುಕೂ ಅಷ್ಟೇ ಸ್ವಚ್ಛ ಹಾಗೂ ಪ್ರಾಮಾಣಿಕ. ಬಸವಣ್ಣ ಆಕೆಯ ಆರಾಧ್ಯ ದೈವ. ಅವರ ಮಗ ಮಲ್ಲಿಕಾರ್ಜುನರು ಸ್ಮರಿಸಿಕೊಳ್ಳುವಂತೆ "ಅವ್ವಾರು ಉಳಿದ ದೇವರ ಪಟ್ಟಿ, ವಿಷಯ ಬಂದ್ರೆ ೨೫ ರೂಪಾಯಿ ಕೊಡುವವರು. ಬಸವಣ್ಣನ ವಿಷಯಕ್ಕೆ ಮಾತ್ರ ತಮ್ಮ ಬದುಕಿನ ಕೊನೆಯವರೆಗೂ ೧೨೫ ರೂಪಾಯಿ ಕೊಡ್ತಿದ್ರು" ಎಂದು ನಗುತ್ತಾರೆ. ತನ್ನದಲ್ಲದೆ, ತನಗೆ ಒಗ್ಗದ, ಎಂಥ ಅಮೂಲ್ಯ ವಸ್ತುವನ್ನೂ ಆಕೆ ಬಳಸಲಿಲ್ಲ. ಸಾಮಾನ್ಯವಾಗಿ ಸಾಹಿತಿಗಳು, ಕಲಾವಿದರು ತಮ್ಮ ಸಾಧನೆಯೊಂದಿಗೆ ತಮ್ಮ ಆಶೆ ಬುರುಕತನವನ್ನು ಬೆಳೆಸಿಕೊಂಡಿರುತ್ತಾರೆ. ಆದರೆ ಗೌರಮ್ಮಳದು ಹಾಗಲ್ಲ. ಆಕೆಗೆ ಜನರ ಪ್ರೀತಿ, ಆಸ್ಥೆಗಿಂತ ಮಿಗಿಲಾಗಿ ಏನೂ ಇರಲಿಲ್ಲ. ಹೀಗಾಗಿ ಪ್ರಶಸ್ತಿಗಳ ಖಾಲಿತನವನ್ನು ತಿಳಿದವಳಾಗಿದ್ದ ಗೌರಮ್ಮ ಯಾವುದೇ ಸನ್ಮಾನ ಹಾಗೂ ಪ್ರಶಸ್ತಿಗಳನ್ನು ಒಂದು ಹಾಡು ಹೇಳದೆ ಸ್ವೀಕರಿಸುತ್ತಿರಲಿಲ್ಲ. ಯಾಕೆಂದರೆ ಕಾಲದ ಪ್ರಹಾರಕ್ಕೆ ಕೊಟ್ಟ ಪ್ರಶಸ್ತಿಗಳು ಅರ್ಥ ಕಳೆದುಕೊಳ್ಳಬಹುದು. ಆದರೆ ಹಾಡು ನಿರಂತರ. ಅದರ ನೆನಪು ಅಮರ.

೧೪ ಜೂನ್ ೨೦೦೨. ಈ ಲೋಕದ ನಂಟಿಂದ ಗೌರಮ್ಮ ದೈಹಿಕವಾಗಿ ಗಂಟು ಹರಿದುಕೊಂಡವಳು. ನಾಡು ತೊರೆದು ಕಾಡಹಕ್ಕಿ ಹಾಡು ನಿಲ್ಲಿಸಿತು. "ಗೌರಮ್ಮ ಜನಪದ

ಯಜ್ಞದಲ್ಲಿ ತನ್ನ ತಾ ಬೇಯಿಸಿಕೊಂಡವಳು. ಅಪರಂಜಿ ಎಂಬತ್ತು ಭರಿಸಿ ಬೆಳ್ಳಿ ಬೆಳಕಾದಳು" ಸಾತ್ವಿಕ-ಶರಣೆ ಕಥೆಗಾರ್ತಿ, ಹಾಡಿಸಿ ಗಾರಮ್ಮನ ವಿದಾಯವನ್ನು ಕವಿ ವಿಜಯ ಮಠರು ಬಹಳ ಸುಂದರವಾಗಿ ದಾಖಲಿಸಿದ್ದಾರೆ.

"ಧ್ವನಿಯಳಿದರೂ ಪದವುಳಿಯಿತು
ಆರಿದರೂ ದೀಪ,
ಹಾಡೆಂದರೂ ದನಿಯಿಲ್ಲವೆ
ಸೊಲ್ಲಡಗಿತೊ ಪಾಪ."

**ಗ್ರಂಥಋಣ**


೧. ಪ್ರಕಾಶ ಖಾಡೆ, ೨೦೦೫, **ಚಲವಾದಿ ಗಾರಮ್ಮ**, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರ ತೋಂಟದಾರ್ಯ ಸಂಸ್ಥಾನಮಠ, ಗದಗ.

೨. ನೀಲಗಂಗಾ ಚರಂತಿಮಠ, ೨೦೦೨, **ನಾದ**, ಅಮೃತ ಪ್ರಕಾಶ, ಸದಾಶಿವನಗರ, ಬೆಳಗಾಂ.

೩. ಸರೋಜಿನಿ.ಪಾವಟೆ., ೨೦೦೦, **ಚಲವಾದಿ ಗೌರಮ್ಮನ ಕಥೆಗಳು**, ಪಾವಟೆ ಪ್ರಕಾಶನ, ಬಾಗಲಕೋಟೆ.

# ಪುರುಷ ಅಹಂಕಾರಕ್ಕೆ ಸವಾಲು

ಮರಾಠಿ ಮೂಲ : ತಾರಾಬಾಯಿ ಶಿಂದೆ
ತೆಲುಗಿನಿಂದ ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ

**ಈ** ದಿನಗಳಲ್ಲಿ ವಾರ್ತಾ ಪತ್ರಿಕೆಗಳು ಅಸಹಾಯಕರಾದ, ಅಬಲೆಯರಾದ ಮಹಿಳೆಯರ ಬಗ್ಗೆ, ಅವರ ನಡವಳಿಕೆಗಳ ಬಗ್ಗೆ ಹೆಚ್ಚಾಗಿ ಬರೆಯುತ್ತಿವೆ. ನಿಮ್ಮಲ್ಲಿ ಯಾರೂ ಈ ವಿಪರೀತಗಳನ್ನು ನಿಲ್ಲಿಸುವುದಕ್ಕೆ ಮುಂದೆ ಬರುವುದಿಲ್ಲವೇಕೆ?

ವಿಧವೆಯರು ಮರುಮದುವೆ ಮಾಡಿಕೊಳ್ಳಬಾರದೆಂಬ ಆಚಾರ ಒಂದು ಕಾಯಿಲೆಯಂತೆ ಅನೇಕ ಪ್ರದೇಶಗಳಿಗೆ, ಜಾತಿಗಳಿಗೆ ಹೇಗೆ ಹರಡಿದೆ. ಸಾವಿರಾರು ಸಂಖ್ಯೆಯಲ್ಲಿರುವ ವಿಧವೆಯರು ಅನುಭವಿಸುವ ದುರ್ಭರವಾದ ವೇದನೆಯನ್ನು ಊಹಿಸುವುದು ಕೂಡಾ ಕಷ್ಟವೇ! ಇದರಿಂದ ಎಷ್ಟು ವಿಪರೀತಗಳು ನಡೆಯುತ್ತವೆಯೋ! ಮನುಷ್ಯರನ್ನು ಮನೆಗಳಲ್ಲಿ ಬಂಧಿಸಿ ಅವರ ಆಲೋಚನೆಗಳ ಮೇಲೆ ಯಜಮಾನಿಕೆಯನ್ನು ಚಲಾಯಿಸಿ ನಾವೆಂದಾದರೂ ಸ್ತ್ರೀಧರ್ಮವನ್ನು ಕಾಪಾಡಿಕೊಂಡಿದ್ದೇವಾ? ಮಹಿಳೆಯರು ಅವರ ಮನಸ್ಸಲ್ಲಿ, ಕಣ್ಣಲ್ಲಿ ಏನೇನು ಮಾಡುತ್ತಿದ್ದರೋ ಅವೆಲ್ಲ ಕೂಡಾ ಅವರನ್ನು ಅಷ್ಟೇ ಅಪರಾಧಿಗಳಾಗಿ ಮಾಡುತ್ತವಲ್ಲವೇ! ಮಹಿಳೆಯರ ಮುತ್ತೈದೆ ಚಿಹ್ನೆಗಳನ್ನೆಲ್ಲ ಅಳಿಸಿ ಹಾಕುವುದರಿಂದ, ಒಬ್ಬ ಮಹಿಳೆಯ ತಲೆ ಬೋಳಿಸಿ, ಇನ್ನೊಬ್ಬ ಮಹಿಳೆಯ ಬೊಟ್ಟು ಒರೆಸಿ ಹಾಕಿದ ಮಾತ್ರಕ್ಕೆ ಏನು ಒದಗುತ್ತದೆ? ಆ ಮಹಿಳೆಯರಿಗೂ ಒಳಗೆ ಅದೇ ಹೃದಯಗಳಿವೆ. ಒಳಿತು ಕೆಡಕುಗಳ ಬಗ್ಗೆ ಅನೇಕ ಆಲೋಚನೆಗಳಿವೆ. ಬಾಹ್ಯ ಶರೀರವನ್ನು ನಗ್ನವಾಗುವವರೆಗೂ ತೆಳ್ಳಗೆ ಸುಲಿಯಬಹುದು. ಆದರೆ ಅಂತರಂಗವನ್ನು ಯಾರೂ ಏನೂ ಮಾಡಲಾರೆವಲ್ಲವೇ! ನಿಜಕ್ಕೂ ಸ್ತ್ರೀಧರ್ಮವೆಂದರೇನು? ಎಲ್ಲ ವೇಳೆಯಲ್ಲೂ ಗಂಡನ ಆಜ್ಞೆಯನ್ನು ಚಾಚೂ ತಪ್ಪದಂತೆ ಪಾಲಿಸುವುದು, ಅವನು ಬಯಸಿದ್ದನ್ನೆಲ್ಲ ಮಾಡುವುದು. ಅವನು ನಿಮ್ಮನ್ನು ಒದೆಯಬಹುದು, ಬಯ್ಯಬಹುದು, ಅವನು ಹಾದರ ಮಾಡಬಹುದು, ಕುಡಿಯಬಹುದು, ಜೂಜಾಡಬಹುದು, ಹಣ ಕಳೆದುಕೊಂಡು ಲಬೋ ಲಬೋ ಬಾಯಿ ಬಡಿದುಕೊಳ್ಳಬಹುದು, ಕಳ್ಳತನ ಮಾಡಬಹುದು, ಖೂನಿ ಮಾಡಬಹುದು, ಮೋಸ ಮಾಡಬಹುದು, ಸಹವರ್ತಿಗಳ ಮೇಲೆ ಅಪನಿಂದೆ ಹೊರಿಸಬಹುದು, ದೋಚಿಕೊಳ್ಳಬಹುದು, ಮನುಷ್ಯರನ್ನು ಲಂಚಕ್ಕಾಗಿ ಪೀಡಿಸಬಹುದು, ಮಾಡಬೇಕಾದ್ದೆಲ್ಲವನ್ನು ಮಾಡಿ ಅವನು ಮನೆಗೆ ಬರುವ ಹೊತ್ತಿಗೆ ಸ್ತ್ರೀ

ಧರ್ಮ ಪಾಲಿಸಿ ಹೆಂಗಸರು ಹೇಗೆ ಯೋಚಿಸಬೇಕೋ ಗೊತ್ತಾ? "ಮನೆಗೆ ಈಗ ಯಾರು ಬರುತ್ತಿದ್ದಾರೋ? ನನ್ನ ಸ್ವಾಮಿ, ಮುದ್ದುಕೃಷ್ಣ ಗೋಪಿಯರ ಹತ್ತಿರ ಹಾಲು, ಮೊಸರು ಕದ್ದು, ಚಂದ್ರಾವಳಿ ಮೇಲೆ ನೆಪ ಹಾಕಿ ಬರುತ್ತಿದ್ದಾನೆ" ಎಂದುಕೊಂಡು ಕಿರುನಗೆಯಿಂದ ಅವನಿಗೆ ಸ್ವಾಗತ ಹೇಳಿ, ಭಕ್ತಿಯಿಂದ ಅವನೇ ದೇವರು ಎಂಬಂತೆ ಸೇವೆ ಮಾಡುವುದಕ್ಕೆ ಅವನೆದುರು ನಿಲ್ಲಬೇಕು. ಆದರೆ ಒಂದು ಸಾರಿ ಮನುಷ್ಯರಲ್ಲಿ ಒಳಿತು ಕೆಡುಕಿನ ಬಗ್ಗೆ ಯೋಚನೆ ಕೆರಳಿದ ನಂತರ ಅವರಿಗೆ ಈ ಸ್ತ್ರೀ ಧರ್ಮದ ಮೇಲೆ ನಂಬುಗೆ ಹೇಗಿರುತ್ತದೆ? ಮಹಿಳೆಯರು ಮಾತ್ರ ಗಂಡನನ್ನು ದೇವರಂತೆಯೇ ಪೂಜಿಸಬೇಕು. ಆದರೆ ಈ ದಿನಗಳಲ್ಲಿ ಮನಸ್ಫೂರ್ತಿಯಿಂದ ಹಾಗೆ ಮಾಡುವವರು ಯಾರಿದ್ದಾರೆ. ಅಂದಿನ ಸಾವಿತ್ರಿ ಕತೆ ನಮಗೆ ತಿಳಿದೇ ಇದೆ. ಪತಿವ್ರತಾ ಧರ್ಮದ ಬಗ್ಗೆ ಸಾರಿ ಹೇಳುವುದಕ್ಕೆ ಈ ದಿನಗಳಲ್ಲಿ ಯಾವ ಮಹಿಳೆಯಾದರೂ ಅದನ್ನು ಚಾಚೂ ತಪ್ಪದೇ ಪಾಲಿಸಬಲ್ಲಳೇ? ಅಂತಹವರನ್ನು ಒಬ್ಬರ ನ್ನಾದರೂ ತೋರಿಸಬಲ್ಲಿರಾ?

ಆ ಕಥೆ ಏನು ಹೇಳುತ್ತದೆಯೆಂದರೆ ನಿಮ್ಮ ಗಂಡ ನಿಮ್ಮನ್ನು ಕಾಲಿನಿಂದ ಒದ್ದರೆ ನೀವು ತಿರುಗಿ ಕಿರುನಗೆಯಿಂದ "ಸ್ವಾಮಿ! ಪ್ರಭೂ, ಹಾಗೆ ಮಾಡಬೇಡಿ, ನಿಮ್ಮ ಪಾದ ನೋಯುತ್ತದೆ" ಎಂದು ಕೂಡಲೇ ಕೆಳಗೆ ಕುಳಿತುಕೊಂಡು ಆತನ ಪಾದ ಒತ್ತಲು ಮೊದಲು ಮಾಡೆಂದು. ಆತನು ಮುಷ್ಟಿಯಿಂದ ಗುದ್ದಿದರೂ, ದೊಣ್ಣೆಯಿಂದ ಬಡಿದರೂ ನಿಮ್ಮ ಕಣ್ಣಲ್ಲಿ ನೀರು ಬರಬಾರದು. ಮೇಲಾಗಿ ನೀವು ಕಿರುನಗೆಯಿಂದ ಒಳಕ್ಕೆ ಹೋಗಿ ತಾಜಾ ಬೆಣ್ಣೆ ತಂದು ಅವನ ಕೈಗಳಿಗೆ ನೀವುತ್ತ "ಸ್ವಾಮಿ, ಆ ಹೊಡೆತಗಳಿಂದ ನಿಮ್ಮ ಕೈಗಳು ಉರಿಯುತ್ತಿವೆ ಯೇನೋ!" ಎನ್ನಬೇಕು. ನಿಮ್ಮ ಮನೆಯಲ್ಲಿ ಬೆಣ್ಣೆ ಇಲ್ಲದಿದ್ದರೆ ಪಕ್ಕದ ಮನೆಯಿಂದ ತಂದು ಬಳಿಯಬೇಕು. ಅಲ್ಲಿಯೂ ಇಲ್ಲದಿದ್ದರೆ ಪೇಟೆಗೆ ಓಡಿ ಹೋಗಿ ಬೆಣ್ಣೆ ತರಬೇಕು. ಆದರೆ ಈ ದಿನಗಳಲ್ಲಿ ಇವೆಲ್ಲ ಯಾರು ಮಾಡುತ್ತಿದ್ದಾರೆ? ಮತ್ತೆ ಇಂದಿನ ಮಹಿಳೆ ಅಂತಹ ಗಂಡನ ಕೈಯನ್ನು ಸವರುವುದಕ್ಕೆ ಬದಲು ಒಲೆಯುಲ್ಲಿ ಇಡೆಂದು ಹೇಳಬಹುದು. ಅವನಿಗೆ ಒಂದು ಬಗೆಯ ಅಡುಗೆ ಇಷ್ಟವಾಗದೆ ಹೋದರೆ ಆಕೆ ಕೂಡಾ ಅದನ್ನು ತಿನ್ನಬಾರದು. ಆದರೆ ನಿಜಕ್ಕೂ ನಡೆಯುತ್ತಿರುವುದು ಇದಕ್ಕೆ ಪೂರ್ತಿ ವಿರುದ್ಧವಾಗಿ. ಅವನು ಪಕ್ಕಕ್ಕೆ ತಳ್ಳಿದ್ದನ್ನು ಆಕೆ ಕಣ್ಣಿಗೊತ್ತಿಕೊಂಡು ತಿನ್ನುತ್ತಾಳೆ. ಬಹುಶಃ ಅದು ಯಾವುದಾದರೂ ರುಚಿಕರವಾದ ಪದಾರ್ಥವಾಗಿರಬೇಕು. ಹಾಗಾಗದೆ ಅದು ಮಾಮೂಲಿ ಕ್ಯಾರೆಟ್, ಸೋರೆಕಾಯಿಯಾದರೆ ಆಕೆ ಕೂಡಾ ಅದನ್ನು ಯಾವತ್ತೂ ಮುಟ್ಟುವುದಿಲ್ಲ. ಗಂಡ ಇಷ್ಟಪಡದ ಯಾವುದೇ ವಸ್ತುವನ್ನು ಆಕೆ ಕೂಡಾ ಬಿಟ್ಟು ಬಿಡುತ್ತಾಳಾ? ನಿಜಕ್ಕೂ ಬಿಡುವುದಿಲ್ಲ. ಗಂಡ ಕುಡಿಯುವ ನೀರು ಕೇಳುವ ಹೊತ್ತಿಗೆ ಆಕೆ ಮಿಂಚುವ ಕಂಚಿನ ಚೆಂಬಲ್ಲಿ ನೀರಿಡಿದು ಎದುರಲ್ಲಿ ನಿಲ್ಲುತ್ತಾಳೆಯೇ? ಆಕೆ ಏನನ್ನುತ್ತಾಳೋ ಗೊತ್ತಾ? "ನಾನು ಕೂಡಾ ಇಷ್ಟು ಹೊತ್ತಿನಿಂದ ಬಾಯಾರಿಕೆಯಿಂದ ಸಾಯುತ್ತಿದ್ದೇನೆ. ಅಲ್ಲಿಯೇ ಬಿಂದಿಗೆಯಲ್ಲಿ ನೀರಿವೆ.

ನೀವು ಕೊಂಚ ಕುಡಿದು ನನಗೂ ಕೊಂಚ ಕೊಡಿ ಆ ಕೈಯಿಂದಲೇ. ನಾನೇನೂ ಮಾಡಲಿ, ಈ ಹಸುಗೂಸು ಕೈ ಬಿಡುತ್ತಿಲ್ಲ" ಎಂದು.

ಗಂಡ 'ಸ್ನಾನ' ಎಂಬ ಮಾತು ಅಂದ ಕೂಡಲೇ ಆಕೆ ಎತ್ತರದ ಮಣೆ ಹಾಕಿ, ಒಂದು ಬಕೆಟ್ ಬಿಸಿ ನೀರಿಟ್ಟು ಅವನ ಕಾಲು ಉಜ್ಜುವುದಕ್ಕೆ ಸಿದ್ಧವಾಗಿ ನಿಲ್ಲಬೇಕು. ನಿಜಕ್ಕೂ ಆಕೆ ಯಾರೋ ಒಬ್ಬರನ್ನು ಕೂಗುತ್ತಾಳೆ. "ಅಲ್ಲಿ ಯಾರಾದರೂ ಇದ್ದೀರಾ? ಓ ರಾಮಯ್ಯ! ಇಲ್ಲಿ ಬಾ. ಅವರು ಸ್ನಾನ ಮಾಡುತ್ತಾರಂತೆ. ನೀರು ಮೊಗೆದು, ಆತನ ಪಂಚೆ ಮಡಿಸಿ ಅಲ್ಲಿಡು" ಎಂದು. ತನ್ನ ಬಗ್ಗೆ ಕೇಳಿದರೆ ಟೀ ಕುಡಿಯುತ್ತಿದ್ದೇನೆನ್ನುತ್ತಾಳೆ. ಆಕೆಯ ಗಂಡ ಊಟಕ್ಕೆ ಬರುತ್ತಲೇ ಮಣೆ ಹಾಕಿ, ಕುಡಿಯುವ ನೀರು ಕೊಟ್ಟು, ಅವನಿಗಿಷ್ಟವಾದ ಖಾದ್ಯ ಅಡುಗೆಗಳಿಂದ ಊಟ ಬಡಿಸಿ, ಅನಂತರ ಪಕ್ಕದಲ್ಲಿ ಕುಳಿತುಕೊಂಡು, ಕಾಲವನ್ನು ಕಳೆಯುತ್ತ ಅವನ ಊಟವಾಗುವವರೆಗೂ ಸಲ್ಲಾಪದಿಂದ ಕಾಲಕ್ಷೇಪ ಮಾಡಬೇಕು. ಆದರೆ ಈ ದಿನಗಳಲ್ಲಿ ಅವನು "ಆಗಿದೆಯೇ ಇಲ್ಲವೋ? ಬೇಗ ಬಡಿಸು ಒಂಬತ್ತಾಯಿತು" ಎನ್ನುತ್ತಾನೆ. "ಆ ಬರ್ತಿದ್ದೀನಿ, ಆಗೋಯ್ತು. ಸ್ವಲ್ಪ ಸೊಪ್ಪು ಬೇಳೆ ಒಗ್ಗರಣೆ ಆಗುವವರೆಗೆ ಇರಬಾರದಾ? ಬೇಯಬೇಕಲು ಅನ್ನ ಬಡಿಸು ಅಂತೀರಾ? ಪ್ರತಿದಿನ ಇದೇ ಆತುರ. ಪ್ರತಿದಿನ ಒಂಬತ್ತು ಗಂಟೆಗೆಲ್ಲ ಇದೇ ವರಸೆ" ಎನ್ನುತ್ತ ಆಕೆ ಸಮಾಧಾನ ಹೇಳುತ್ತಿರುತ್ತಾಳೆ. ಆ ನಂತರ ಅವನ ತಾಂಬೂಲದ ಸಂಗತಿ. ಮತ್ತೆ ಇಬ್ಬರೂ ಅದೆ ವರಸೆ. "ಸ್ವಲ್ಪ ತಾಂಬೂಲ ಸುತ್ತಿ ಕೊಡ್ತೀಯಾ?" ಎಂದು ಆತ ಕೇಳಿದರೆ "ಆ ಗೋಡೆಯ ಗೂಡಲ್ಲಿ ತಾಂಬೂಲದ ಪೆಟ್ಟಿಗೆ ಇದೆ. ತಾಂಬೂಲವನ್ನು ಸರಿಯಾಗಿ ಮಡಿಸಲು ಕೂಡಾ ಬರಲ್ಲ ನಿಮಗೆ. ಹಾಗಲ್ಲ, ಹೀಗೆ ಕೈಯಲ್ಲಿ ಎಲ್ಲ ವಸ್ತುಗಳನ್ನು ಹಾಕಿಕೊಳ್ಳಬೇಕು" ಎಂದು ಹೇಳುತ್ತಾಳೆ. ಮಾಡುವುದಿಲ್ಲದೆ ಆ ಗಂಡಸು ಮಹಾರಾಜ ತಾಂಬೂಲದ ಪೆಟ್ಟಿಗೆಯನ್ನು ಹತ್ತಿರ ಹೋಗಿ ನೋಡಿದರೆ ಒಳಗೆ ಸುಣ್ಣ ಇರುವುದಿಲ್ಲ. "ನೋಡು, ಇದರಲ್ಲಿ ಸುಣ್ಣವಿಲ್ಲ, ಕೊಂಚ ತಂದು ಕೊಡ್ತೀಯಾ" ಎಂದು ಕೇಳುತ್ತಾನೆ. ಅದಕ್ಕೆ "ಇನ್ನೊಂದು ಪೆಟ್ಟಿಗೆಯಲ್ಲಿ ಚಿಕ್ಕ ಸಂಚಿಯಲ್ಲಿ ಅಡಿಕೆ ಪುಡಿಯಿದೆ ನೋಡಿ. ನೀವು ಅದನ್ನು ತಾಂಬೂಲಕ್ಕೆ ಹಾಕಿಕೊಂಡು ನನಗೆ ಕೂಡಾ ಕೊಂಚ ತಂದು ಕೊಡಿ. ಊಟ ಮಾಡಿದ ಮೇಲೆ ಬಾಯೆಲ್ಲ ಒಂಥರಾ ಇರುತ್ತದೆ" ಎಂದು ಹೇಳುತ್ತಾಳೆ. ಇದು ದಿನವೂ ನಾವು ನೋಡುವ ಬದುಕಿಗೆ ಹತ್ತಿರವಾಗಿಲ್ಲವೇ!

ಪತಿವ್ರತೆ ಎಂದರೆ ಈ ದಿನಗಳಲ್ಲಿ ಅರ್ಥ ಇದೇ ಮತ್ತೆ! ಮೊದಲಿನಿಂದ ಕೊನೆಯವರೆಗೆ ಈ ಕತೆಯನ್ನೆಲ್ಲ ನಿಮಗೆ ಹೇಳಬೇಕೆಂದರೆ ಪೂರ್ತಿಯಾಗಿ ಇನ್ನೊಂದು ಪುಸ್ತಕವನ್ನೇ ಬರೆಯಬೇಕಾಗುತ್ತದೆ. ನಿಜಕ್ಕೂ ಶಾಸ್ತ್ರಗಳೆಲ್ಲವನ್ನು ಮನುಷ್ಯ ಮಾತ್ರರಾದವರು ಯಾರು ಪೂರ್ತಿ ಆಚರಿಸಬಲ್ಲರು? ಇನ್ನೊಬ್ಬರು ಆಚರಿಸಬೇಕೆಂದು ಆಶಿಸಬಲ್ಲರು? ಒಬ್ಬ ಗಂಡ ತನ್ನ ಹೆಂಡತಿಗೆ ನಿಜಕ್ಕೂ ದೈವ ಸಮಾನನಾಗಬೇಕೆಂದರೆ ಅವನು ದೇವರಂತೆ ನಡೆದುಕೊಳ್ಳಬೇಡವೇ? ಹೆಂಡತಿಯರು ಗಂಡಂದಿರನ್ನು ದೇವರಂತೆ ಪೂಜಿಸಬೇಕು ಎಂದುಕೊಂಡರೆ, ಗಂಡಂದಿರಿಗೆ ತನ್ನ ಹೆಂಡತಿಯರ ಮೇಲೆ ನಿಜವಾದ ಅನುರಾಗವಿದ್ದು ಅವರ ಕಷ್ಟ ಸುಖಗಳಲ್ಲಿ

ದೇವರಂತೆಯೇ ಸ್ಪಂದಿಸಬೇಕಾಗಿಲ್ಲವೇ! ದೇವರಿಗೆ ಅವರ ಭಕ್ತರನ್ನು ನೋಡಿದರೆ ಸಂತೋಷ ಮತ್ತು ಸಂತೃಪ್ತಿ! ಮತ್ತೆ ಗಂಡಂದಿರು ಕೂಡಾ ಹಾಗೇ ಇರಬೇಕಲ್ಲವೇ! ಮತ್ತೆ ಗಂಡಂದಿರು ತಮ್ಮನ್ನು ಪೂಜಿಸುವ ಸ್ತ್ರೀಯರ ಸುಗುಣಗಳನ್ನು, ಲೋಪಗಳನ್ನು ನೋಡಿದಾಗ, ಅವನ್ನು ಗಮನಿಸಿ ಲೋಪಗಳನ್ನು ಪ್ರೇಮದಿಂದ ತಿದ್ದುವುದಕ್ಕೆ ಪ್ರಯತ್ನಿಸಬೇಕಾಗಿಲ್ಲವೆ! ಗಂಡ ಎಷ್ಟು ನೀಚನಾದರೂ ದೇವರಂತೆ ಯಾವ ಸ್ತ್ರೀ ಅವನನ್ನು ನೋಡಬಲ್ಲಳು? ಪಾಂಡವರ ಚಿಕ್ಕಪ್ಪ ಧೃತರಾಷ್ಟ್ರ ಕುರುಡನಾದದ್ದಕ್ಕೆ ಅವನ ಹೆಂಡತಿ ಗಾಂಧಾರಿ ಮದುವೆಯಾದ ಕೂಡಲೇ ಕಣ್ಣಿಗೆ ಬಟ್ಟೆ ಕಟ್ಟಿಕೊಂಡಳು. ಆದರೆ ಎಷ್ಟು ಮಂದಿಗೆ ಕಣ್ಣಿದ್ದು ನೋಡಬೇಡವೆಂದು ಹೇಳಿದರೆ, ಕುರುಡರಂತೆ ನಡೆದುಕೊಳ್ಳಬೇಕಾಗಿ ಬಂದರೆ ಭರಿಸುವ ಶಕ್ತಿ ಇರುತ್ತದೆ? ಎಷ್ಟು ಮಂದಿಗೆ ಇಂದ್ರಿಯ ನಿಗ್ರಹವಿರುತ್ತದೆ? ನನಗೆ ತಿಳಿದ ಅಂತಹವರು ಯಾರೂ ಇಲ್ಲ. ದೊಡ್ಡ ದೊಡ್ಡ ಮಾತುಗಳನ್ನೆಲ್ಲರೂ ಶಾಸ್ತ್ರಗಳನ್ನು ಓದಿಯೇ ಮಾತಾಡುತ್ತಾರೆ. ಶಾಸ್ತ್ರಗಳು, ಪುರಾಣಗಳು ಮೊದಲಾದ ಪುಸ್ತಕಗಳು ಬರೆದವರೆಲ್ಲರೂ ನಿಜಕ್ಕೂ ನಾಚಿಕೆ ಪಡಬೇಕು. ಏಕೆಂದು ಕೇಳಿರಿ? ಪೂರ್ವ ಕಾಲದಲ್ಲಿ ಕೊಂಚ ಮಂದಿ ಸ್ತ್ರೀಯರ ಬಗ್ಗೆ ಬರೆದಾಗ, ಆಗ ಆ ಸ್ತ್ರೀಯರು ಕೆಲವು ತಪ್ಪುಗಳನ್ನು ಮಾಡಿದರೂ, ಈ ದಿನಗಳಲ್ಲಿ ಶ್ರೇಷ್ಠ ಪತಿವ್ರತೆಗಳಾಗಿಯೇ ಭಾವಿಸಲ್ಪಡುತ್ತಿದ್ದಾರೆ. ಅದು ಅಷ್ಟು ಒಳ್ಳೆಯ ಕೆಲಸವೇ? ದ್ರೌಪದಿಯನ್ನು ನೋಡಿರಿ! ಆಗಲೇ ಐವರು ಗಂಡಂದಿರಿರುವ  ಆಕೆ ಕರ್ಣನನ್ನು ಗುಟ್ಟಾಗಿ ಕಾಮಿಸುವುದನ್ನು ಬಿಡಲೇ ಇಲ್ಲವಲ್ಲ! ಅಹಲ್ಯೆ ಇಂದ್ರನ ಮಡಿಲಲ್ಲಿ ಕುಳಿತು, ಮುಂದೆ ಕಲ್ಲಾಗಿ ಬದಲಾದ ನಂತರ ದೇವತೆಯಾದಳು. ಸತ್ಯವತಿ, ಕುಂತಿಯರು ಕನ್ಯೆಯರೇ ಅಲ್ಲವೇ! ಆದರೆ ಅವರಿಬ್ಬರೂ ವೇದಗಳ ಲೇಖಕ ವ್ಯಾಸನನ್ನು, ಕರ್ಣನನ್ನು ಹೆತ್ತ ಬಳಿಕ ಕೂಡ ಪತಿವ್ರತೆಗಳಾಗಿಯೇ ಪರಿಗಣಿತರಾಗಿದ್ದಾರಲ್ಲವೇ! ಒಬ್ಬಳು ತನ್ನ ಶರೀರದಿಂದ ದುರ್ಗಂಧವನ್ನು ಹೋಗಲಾಡಿಸಿದ ಮುನಿಯನ್ನು ನಂಬಿದಳು. ಎರಡನೆಯವಳು ಆ ಮಂತ್ರದ ಶಕ್ತಿಯೇನೋ ನೋಡೋಣವೆಂದು ಪ್ರಯತ್ನಿಸಿದಳು. ನಿಮ್ಮ ದೇವರುಗಳು, ಮುನಿಗಳು ಎಲ್ಲರೂ ಅದ್ಭುತವಾದ ವ್ಯಕ್ತಿಗಳಲ್ಲವೇ? ಒಬ್ಬೊಬ್ಬರೂ ಒಂದೊಂದು ರಹಸ್ಯದ ಮದುವೆ ಮಾಡಿಕೊಳ್ಳುವುದು, ನಂತರ ಹೋಗಿ ಶಂತನು, ಪಾಂಡುರಾಜನನ್ನು ತಗುಲಿಕೊಳ್ಳುವುದು, ಮತ್ತೆ ಅವರು ಮಾಡಿಕೊಂಡದ್ದು ಎರಡನೇ ಮದುವೆಯಲ್ಲದೆ ಮತ್ತೇನು? ಅನಂತರ ಅವರ ಸುಪುತ್ರರು ವ್ಯಾಸ, ದೊಡ್ಡ ಮನಸ್ಸಿರುವ ಕರ್ಣ ಎಷ್ಟು ಪವಿತ್ರರಾಗಿ ಹೋದರೆಂದರೆ ದೇವರುಗಳೇ ಬಂದು ಅವರ ಕಾಲ ಮೇಲೆ ಬಿದ್ದರು. ಈ ದಿನಗಳಲ್ಲಿ ಯಾರಿಗಾದರೂ ಹಾಗೆ ಸಂತಾನವುಂಟಾದರೆ ಅವರನ್ನು ಕೀಳಾದ ಹೆಸರುಗಳಿಂದ ಕರೆಯುತ್ತಾರಲ್ಲವೇ! ಒಬ್ಬ ದಾಸಿಯ ಮಗುವನ್ನು ಒಂದು ಬಗೆಯ ಸೂಳೆಯ ಮಗನೆಂದೂ, ಒಬ್ಬ ಬ್ರಾಹ್ಮಣ ವಿಧವೆ ಮಗನನ್ನು ಬೇರೆ ಹೆಸರಿನಿಂದ ಕರೆಯುತ್ತಾರೆ. ಮತ್ತೆ ವಿದುರನಂತಹವರು ಬೇರೆ. ಕೆಲವು ಮಂದಿಯ ದೃಷ್ಟಿಯಲ್ಲಿ ಅಂತಹ ಮಕ್ಕಳು ದಂಡದ ಖರ್ಚಿನ ಲೆಕ್ಕಗಳಿಗೆ ಬರುತ್ತಾರೆ. ಮತ್ತೆ ಈಗ ಹೇಳಿರಿ, ಮದುವೆಯಾಗದ ಸ್ತ್ರೀ ಹೆತ್ತ ಮಗುವನ್ನು ಏನೆಂದು ಕರೆಯಬೇಕೋ? ವ್ಯಾಸನಂತಹವನು ಶಾಸ್ತ್ರ, ಪುರಾಣಗಳಲ್ಲಿ

ನಿಷ್ಣಾತನಾಗಿ ಮಹಾಭಾರತದಂತಹ ಗ್ರಂಥವನ್ನು ಬರೆಯುತ್ತಾನೆ. ಇನ್ನು ಅವನ ತಾಯಿ ತಂದೆ ಪವಿತ್ರರಾಗಿ ಹೋದಂತೆಯೇ? ಇನ್ನು ಕರ್ಣನ ತಾಯಿ ಅವನು ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರ ಮೇಲೆ ಯುದ್ಧ ಮಾಡಿದಾಗ ಮತ್ತೆ ಮಹಾಶೀಲವತಿಯಾಗಿ ಹೋಗಿರಬೇಕೆಂದು ಕೊಳ್ಳುತ್ತೇನೆ.

ಈಗ ವಾನರನಾದ ವಾಲಿ ಹೆಂಡತಿ ತಾರ ಕತೆಗೆ ಬರೋಣ! ಸುಗ್ರೀವನು ವಾಲಿಯ ತಮ್ಮನೇ ಆಗಲಿ ವಾಲಿ ಅವನ ಹೆಂಡತಿ ರುಮಾನಿಯನ್ನು ಎತ್ತಿಕೊಂಡು ಹೋಗುತ್ತ ಆ ಕಪ್ಪುಕೋತಿ ಸುಗ್ರೀವನನ್ನು ಬಾಲ ಮುದುಡಿಕೊಂಡು ಓಡಿ ಹೋಗುವಂತೆ ಓಡಿಸಿದ. ನಂತರ ಸುಗ್ರೀವ ಸಾಕ್ಷಾತ್ ರಾಮನನ್ನು ಭೇಟಿಯಾದಾಗ ಅವರಿಗೆ ತಾವಿಬ್ಬರೂ ಒಂದೇ ಸ್ಥಿತಿಯಲ್ಲಿರುವಂತೆ ಅರ್ಥವಾಯಿತು. ರಾಮನ ಹೆಂಡತಿಯನ್ನು ರಾವಣನು ಎತ್ತಿಕೊಂಡು ಹೋದರೆ ಸುಗ್ರೀವನ ಹೆಂಡತಿಯನ್ನು ಅವನ ಅಣ್ಣನೇ ಎತ್ತಿಕೊಂಡು ಹೋದ. ಇನ್ನೇನು ಇಬ್ಬರೂ ಸೊಗಸಾಗಿ ಒಂದಾದರು. ರಾಮನು ಸುಗ್ರೀವನ ಮೇಲೆ ಕನಿಕರಿಸಿ ವಾಲಿಯನ್ನು ಮಾಯಾಜಾಲದಿಂದ ಸೋಲಿಸಿ ಸುಗ್ರೀವನ ಹೆಂಡತಿಯನ್ನು ಮದುವೆಯಾಗುವ ಏರ್ಪಾಟು ಕೂಡಾ ಮಾಡಿದ. ಪಾಪ ತಾರೆ ರಾಮನಿಗೆ ಮೊರೆಯಿಟ್ಟುಕೊಂಡಳು. 'ಮಹಾರಾಜ' ನೀನು ಇಂತಹ ಕೆಲಸ ಮಾಡಬಹುದೇ? ಗಂಡನ ತಮ್ಮ ಸ್ವಂತ ಮಗನ ಸಮಾನವಲ್ಲವೇ! ಇಂತಹ ಕೆಲಸ ಮಾಡಬಹುದೇ? ಇದೆಲ್ಲ ನನಗೆ ತಪ್ಪಾಗಿ ತೋರುತ್ತದೆ" ಎಂದು ಕೂಡಲೇ ರಾಮನು ಆಕೆಗೆ ಅಭಯ ನೀಡಿದ. "ಇದರ ಬಗ್ಗೆ ನೀನೇನೂ ನೊಂದುಕೊಳ್ಳಬೇಡ. ನಿನ್ನ ಗಂಡನ ತಮ್ಮನನ್ನಾದರೂ ಸರಿ ನೀನು ನಿಶ್ಚಿಂತೆಯಿಂದ ಎರಡನೇ ಮದುವೆ ಮಾಡಿಕೊಳ್ಳಬಹುದು. ನಿನ್ನ ಹೆಸರು ಪತಿವ್ರತೆಯರಲ್ಲಿ ಸ್ಥಿರವಾಗಿರುತ್ತದೆ". ಇದೆಲ್ಲ ನಡೆದು ಹೋಗಿದೆ ಸರಿ! ಶ್ರೀಧರಸ್ವಾಮಿ' ಎಂಬ ಲೇಖಕ ದೇವರಿಗಾದರೆ ಏನು ಮಾಡಿದರೂ ಸಲ್ಲುತ್ತದೆಯೆಂದು ಇನ್ನೂ ನಾಲ್ಕು ಪಂಕ್ತಿ ಜಾಸ್ತಿ ಬರೆದ. ಅಂದರೆ ಮಾನವ ಮಾತ್ರರು ಅಂತಹವನ್ನು ಮಾಡಬಾರದೆಂದಲ್ಲವೇ! ಆದರೆ ಮನುಷ್ಯರು ದೇವರನ್ನು ನೋಡಿ ಹಾಗೇ ಮಾಡುತ್ತಾರೆಂದು ಅವರನ್ನು ನೋಡಿ ಕಲಿತುಕೊಳ್ಳಬೇಕು ಎಂದುಕೊಳ್ಳುತ್ತಾರೆಂಬುದು ಸ್ವಾಮಿಗೆ ತಿಳಿಯದ ವಿಷಯವೇ? ಹಾಗಲ್ಲದೆ ಇನ್ನು ಹೇಗೆ ಮಾಡುತ್ತಾರೆ? ಇನ್ನು ಸ್ವಾಮಿಯ ಸಂಗತಿಗೆ ಬಂದರೆ ಆತ ಸುಗ್ರೀವನ ಪಟ್ಟಾಭಿಷೇಕ ನೋಡುವುದಕ್ಕೆ ಬಂದ ಜನವನ್ನು, ಅಲ್ಲಿನ ಗೊಂದಲವನ್ನು, ಆಡಂಬರವನ್ನು ವರ್ಣಿಸುತ್ತ ತನ್ನನ್ನು ತಾನು ಮರೆತು ಹೋದ. ಅದೇ ನಡೆಯದೆ ಇದ್ದಿದ್ದರೆ ಮಾನವ ಮಾತ್ರರಲ್ಲಿ ದೈವಭೀತಿ ಉಂಟುಮಾಡುವುದಕ್ಕೆ ಆತ ಇನ್ನೂ ಹೆಚ್ಚು ಪದ್ಯಗಳನ್ನು ಬರೆಯುತ್ತಿದ್ದ.

ರಾವಣ ಸೀತೆಯನ್ನು ಎತ್ತಿಕೊಂಡು ಹೋದ ಮೇಲೆ ತನ್ನ ತಪ್ಪನ್ನು ತಾನು ತಿಳಿದುಕೊಂಡ. ಅವನು ನಿಜಕ್ಕೂ ಆಕೆಯ ವ್ಯಾಮೋಹದಲ್ಲಿ ಬಿದ್ದು ಬಿಟ್ಟ, ನಿಟ್ಟುಸಿರು, ದುಃಖ ಮುಂತಾದವು ಗಳೊಂದಿಗೆ! ಆದರೆ ವ್ಯವಹಾರವೆಲ್ಲ ಈ ದಿನಗಳ ಪದ್ಧತಿಗಳ ರೀತಿ ಇದ್ದಿದ್ದರೆ ಬಹಳ ಸುಲಭವಾಗಿ ಪರಿಹಾರವಾಗುತ್ತಿದ್ದವು. ರಾವಣನು ರಾಮನ ಕೈಯಲ್ಲಿ ಮದುವೆ ಖರ್ಚುಗಳ

ನಿಮಿತ್ತ ಸಾವಿರಾರು ರೂಪಾಯಿಗಳು ಕೊಡುತ್ತಿದ್ದ. ಯಾರಿಂದ ಹೆಣ್ಣಿಗಾಗಿ ರಾಜ್ಯವನ್ನೇ ಕಳೆದುಕೊಂಡೆನೆನಿಸಿಕೊಳ್ಳದೆ ಅವನ ಜೀವನವನ್ನು ಅವನು ಕುಶಲವಾಗಿ ಕಳೆಯುತ್ತಿದ್ದ. ಆದರೆ ಪಾಪ ಅವನೇನು ಮಾಡಬಲ್ಲ? ಬ್ರಹ್ಮನೇನೋ ಅವನನ್ನು ಶಪಿಸಿದ! ಯಾವ ಪರಪುರುಷನ ಹೆಂಡತಿಯ ಮೇಲಾದರೂ ಬಲವಂತವಾಗಿ ಕೈ ಹಾಕಿದೆಯೆಂದರೆ ನಿನ್ನ ಶರೀರ ನೂರು ಚೂರಾಗುತ್ತದೆಯೆಂದು! "ಆ ಶಾಪ ಮೂಲದಿಂದ ಭಯಪಟ್ಟು ರಣರಂಗದಲ್ಲಿ ಸಾಯುವುದೇ ಮೇಲು ಎಂದುಕೊಂಡ. ಇಲ್ಲದಿದ್ದರೆ ಹತ್ತು ಮದುವೆಗೆ ಸರಿಯಾಗುವಷ್ಟು ಧಾರೆ ಎರೆದು ಸೀತೆ ಮತ್ತೆ ಅಯೋಧ್ಯೆಯ ಮುಖವನ್ನು ನೋಡದಂತೆ ಜಾಗ್ರತೆ ವಹಿಸುತ್ತಿದ್ದ. ಅವನು ತನ್ನ ಶಕ್ತಿ ವಂಚನೆ ಇಲ್ಲದಂತೆ ಎಲ್ಲ ಪ್ರಯತ್ನವನ್ನು ಮಾಡಿದನಾದರೂ ನಾಶವಾಗಿ ಹೋದ. ಅಷ್ಟೇ ಅಲ್ಲ, ನಿಮಗೆ ಇನ್ನೊಬ್ಬ ಪತಿವ್ರತೆಯ ದೃಷ್ಟಾಂತ ಕೂಡ ಹೇಳುತ್ತೇನೆ. ಅದೇನೆಂದರೆ ರಾವಣ ತನ್ನ ಹೆಂಡತಿ ಮಂಡೋದರಿ ಬಳಿ ಹೋಗಿ "ನೀನು ಶ್ರೇಷ್ಠ ಪತಿವ್ರತೆಯಲ್ಲವೇ! ಸೀತೆ ಬಳಿಗೆ ಹೋಗಿ ನೀನು ಆಕೆಗೆ ಸೋದರಿಯಂತವಳೆಂದು ನಂಬಿಸು" ಎಂದು ಹೇಳಿದ. ಆ ದಿನಗಳಲ್ಲಿ ಗಂಡನ ಆಜ್ಞೆಯನ್ನು ಹೆಂಡತಿ ಬಹಳ ಗೌರವಿಸುತ್ತಿದ್ದಳು. ಗಂಡನ ಆಜ್ಞೆಯನ್ನನುಸರಿಸಿ ನೀವು ಇನ್ನೊಬ್ಬರ ಹೆಂಡತಿಗೆ ಸುಳ್ಳು ಹೇಳಿದರೂ, ಆಕೆಯನ್ನು ನಿಮ್ಮ ಗಂಡನಿಗಾಗಿ ಕರೆದುಕೊಂಡು ಬಂದರೂ ಅದೇ ನಿಮ್ಮ ಗಂಡನ ಇಚ್ಛೆಯಾದರೆ ಅದರಲ್ಲಿ ಯಾವ ತಪ್ಪೂ ಇಲ್ಲ. ಮಂಡೋದರಿ ಬೆರಕೆಯಿಲ್ಲದ ಸ್ವಚ್ಛವಾದ ಪತಿವ್ರತಾ ಧರ್ಮವೆಂದರೆ ಅದೇ ಎಂದುಕೊಂಡಳು. ಇನ್ನೇನು, ಆಕೆ ಸೀತೆಯನ್ನು ನೋಡುವುದಕ್ಕೆ ಉತ್ತಮ ಸಲಹೆಗಳಿಂದ ಹೊರಟಳು. "ನೋಡು, ರಾಮನೂ ರಾವಣನೂ ಒಂದೇ ರಾಶಿಯಲ್ಲಿ ಜನಿಸಿದ್ದಾರೆ. ಅವರ ಹೆಸರಲ್ಲಿ ಮೊದಲ ಅಕ್ಷರ 'ರಾ' ಕೂಡಾ ಒಂದೇ. ಒಂದು ಸಾರಿ ರಾಕ್ಷಸ ರಾಜ ರಾವಣಾಸುರನನ್ನು ನೋಡು. ಅವನ ಸಾಹಸ ಕೃತ್ಯಗಳು, ಅವನ ಐಶ್ವರ್ಯ, ವೈಭವ, ಅವನ ದೊಡ್ಡ ರಾಜ್ಯ. ಮತ್ತೆ ನಿನಗೆ ಅಯೋಧ್ಯೆಗೆ ಹಿಂದಿರುಗಿ ಹೋದರೆ ಸಿಗುವುದೇನು? ಕಾಡಿನಲ್ಲಿ ಜೀವನ, ಮನೆಯಿಲ್ಲ, ರಾಜ್ಯವೂ ಇಲ್ಲ, ಅವಮಾನ ಹೊರತು ಸಿಗುವುದೇನೂ ಇಲ್ಲ". ಆಕೆ ಸೀತೆಯ ಮೇಲೆ ಈ ಸಲಹೆಗಳ ಮಳೆಯನ್ನು ಸುರಿಸಿದರೂ ಆ ಮಹಾರಾಣಿ ಈಕೆಯ ಮಾತುಗಳನ್ನು ಕೇಳಿಸಿಕೊಳ್ಳಲಿಲ್ಲ. ಸೀತೆ ಅದಕ್ಕೂ ಮುನ್ನ ಈ ಕತೆಯ ಬಗ್ಗೆ ಎರಡನೇ ಕಡೆ ಕೇಳಿದ್ದಳು. ಬಲಿರಾಜನ ಮನೆಯಲ್ಲಿ ದಾಸಿಯೊಬ್ಬಳು ನಮ್ಮ ನಾಯಕನನ್ನು ಅಂಗದನ ಉಯ್ಯಾಲೆಗೆ ತಲೆಕೆಳಗಾಗಿ ಕಟ್ಟಿ, ಹೇಗೆ ಅವಮಾನಪಡಿಸಿದಳೋ, ಆ ವೇಳೆ ಈತ ಹಸುಗೂಸಿನ ಮೂತ್ರ ಕುಡಿಯುವುದು ಬಿಟ್ಟು ಬೇರೇನೂ ಮಾಡಲಾಗದ ಸ್ಥಿತಿಯಲ್ಲಿ ಹೇಗೆ ಇದ್ದುಬಿಟ್ಟನೋ ಎಂಬುದರ ಬಗ್ಗೆ ಕೇಳಿದ್ದಳು. ಇನ್ನೇನು ಸೀತೆ ಮಂಡೋದರಿಗೆ ಸಮಾಧಾನವಾಗಿ ಕೆಲವು ಕಠೋರ ಸತ್ಯಗಳನ್ನು ಹೇಳಿ ಕಳುಹಿಸಿದಳು. ಅದು ಅಂದು ನಡೆದ ಸಂಘಟನೆಯ ಕತೆ. ಇನ್ನು ಮಂಡೋದರಿ ವಿಷಯಕ್ಕೆ ಬಂದರೆ ಗಂಡನ ಇಷ್ಟಕ್ಕೆ ಅನುಗುಣವಾಗಿ ಬೇರೊಬ್ಬರ ಹೆಂಡತಿಯನ್ನು ಮೋಸಗೊಳಿಸಲು ಪ್ರಯತ್ನಿಸುವುದು, ತನ್ನ ಗಂಡನ ಸುಖಕ್ಕಾಗಿ ಆಕೆ ಒಪ್ಪಿಸುವುದಕ್ಕೆ ಪ್ರಯತ್ನ, ಇವೆಲ್ಲ ಪತಿವ್ರತೆಯಾಗಿ

ಆಕೆಯ ಪತಿಪೂಜೆಯಲ್ಲಿ ಭಾಗಗಳೇ ಆಗಿವೆ. ಮೇಲಾಗಿ ಮಂಡೋದರಿಯಂತಹ ಪತಿವ್ರತೆಯನ್ನು ಪುರಾಣಗಳೆಲ್ಲ ದೊಡ್ಡದಾಗಿ ಹೊಗಳಿವೆ. ಆದ್ದರಿಂದ ನಿಜವಾಗಿ ಈ ಕತೆಯಲ್ಲಿ ಎರಡು ಬಗೆಯ ನೀತಿಗಳಿವೆ. ಗಂಡನು ತನ್ನ ಹೆಂಡತಿಯು ತನ್ನ ಸುಖಕ್ಕಾಗಿ ಪ್ರಯತ್ನಿಸಿ ಆಕೆ ಧರ್ಮವನ್ನು ಉಳಿಸಿಕೊಂಡಳೆಂದು ಸಂತೋಷಿಸಿದರೆ, ಹೆಂಡತಿ ತಾನು ಸಕ್ರಮವಾದ ಕೆಲಸ ಮಾಡಿದನೆಂದು ಸಂತೋಷಪಡುತ್ತಾಳೆ. ಇದರಲ್ಲಿ ಮೂರನೇ ವ್ಯಕ್ತಿಯೇ ಅಲ್ಲವೇ ಇದಕ್ಕೆಲ್ಲ ಮೂಲವಾಗಿ ಬಲೆಯಲ್ಲಿ ಬೀಳುವುದು. ಮೊದಲ ಇಬ್ಬರಿಗೆ ಆಕೆಯ ಬಗ್ಗೆ ಲೆಕ್ಕವಿಲ್ಲ. ದೇವತೆಗಳೆಲ್ಲರನ್ನು ಅಭಿನಂದಿಸಬೇಕಾದ್ದೇ! ಮತ್ತೆ ನಿಮ್ಮ ಪವಿತ್ರತೆಯ ನಿರ್ವಚನಗಳಿಗೆ ಮತ್ತಷ್ಟು ನಮಸ್ಕಾರಗಳು.

ನಿಜಕ್ಕೂ ಇಂತಹ ವಿಷಯಗಳಲ್ಲಿ ಕೊಂಚ ಪಾಪದ ಭಾರ ದೇವರ ಮೇಲೆಯೇ ಹಾಕಬೇಕೆಂದು ನಾವು ಯೋಚಿಸಬೇಕಾಗಿಲ್ಲವೇ? ನಿಜಕ್ಕೂ ಇದೆಲ್ಲದರಲ್ಲಿ ಸತ್ಯ ಯಾವುದು?- ಹೋಗಲಿ ಬಿಡಿ ಸತ್ಯವನ್ನು ಹಾಗೇ ಇರಲು ಬಿಡಿ - ನಮ್ಮ ಶಾಸ್ತ್ರಗಳೇನು ಹೇಳಿವೆಯೆಂದರೆ ಯುದ್ಧಭೂಮಿಯಲ್ಲಿ ತಂದೆಯೋ, ತಮ್ಮನೋ ಎದುರು ಬಂದರೆ ಸಾಯಿಸುವುದಕ್ಕೆ ಸಂದೇಹ ಪಡಬಾರದೆಂದು. ಲಕ್ಷ್ಮಣ ಇಂದ್ರಜಿತನನ್ನು ಹೊಡೆಯುವುದು ನೋಡಿ ರಾಮನು "ಸೋದರಾ! ಲಕ್ಷ್ಮಣಾ! ನೀನೇನು ಮಾಡುತ್ತಿದ್ದೀಯ? ಈ ಶೂರಧರ್ಮ ಎಷ್ಟು ಕಠಿಣವಾದುದು, ಭಾರವಾದುದು? ಎಲ್ಲರ ಮೇಲೆ-ಒಬ್ಬ ಅಳಿಯ, ಮಗನ ಮೇಲೆ ಕೂಡ-ಅಭಿಮಾನ ಕೊಂದುಕೋ ಎನ್ನುತ್ತದೆ" ಎಂದು ನೋವಿನಿಂದ ಹೇಳಿದ. ಆ ಸಮಯದಲ್ಲಿ ಸುಲೋಚನ ಪಾತಿವ್ರತ್ಯ, ಭಕ್ತಿಯನ್ನು ನೋಡಿ ರಾಮ ಇಂದ್ರಜಿತನಿಗೆ ಮತ್ತೆ ಪ್ರಾಣ ಕೊಟ್ಟು ಬದುಕಿಸಬೇಕಾಗಿತ್ತು. ಇಲ್ಲದಿದ್ದರೆ ರಾಮ, ಆಂಜನೇಯ, ವಿಭೀಷಣರು ಹೇಳಿದ ಮಾತು ಕೇಳಿ ಆ ಮಾಣಿಕ್ಯದಂತಹ ಸ್ತ್ರೀ ಉರಿಯಲ್ಲಿ ಬಿದ್ದು ಸುಟ್ಟು ಹೋಗುತ್ತಿದ್ದರೆ ನೋಡುತ್ತ ಸುಮ್ಮನಾದ. ಏನಾದರೂ ಇಂತಹ ಸತ್ಯ ನನ್ನ ಕಣ್ಣೆದುರು ಕಾಣಿಸುತ್ತಿದ್ದರೆ ನಿಮಗೆ ನೆನಪು ಮಾಡದೆ ತಪ್ಪುವುದಿಲ್ಲ. ಒಂದು ವೇಳೆ ಒಂದಿಬ್ಬರು ದೇವರ ತಪ್ಪುಗಳನ್ನು ನಾನು ಗುರುತಿಸಿದ್ದರೆ ಅವರನ್ನು ಕ್ಷಮಿಸೆಂದು ಪ್ರಾರ್ಥಿಸುತ್ತೇನೆ. ಅವರು ನನ್ನನ್ನು ಕ್ಷಮಿಸಬಹುದು. ಏನಾದರೂ ಅವರು ದೇವರಾಗಿಯೇ ಮುಂದುವರೆಯುತ್ತಾರಲ್ಲವೇ! ಇನ್ನು ಮುನಿಗಳ ಸಂಗತಿಯೇನು! ಒಬ್ಬ ಜಿಂಕೆಗೆ ಹುಟ್ಟಿದ್ದಾನೆ; ಆತ ಶೃಂಗಋಷಿ. ಇನ್ನೊಬ್ಬ ಪಕ್ಷಿಗೆ ಹುಟ್ಟಿದ್ದಾನೆ: ಆತ ಭರದ್ವಾಜ, ಕತ್ತೆಗೆ ಹುಟ್ಟಿದವನು ಗಾರ್ಧಭ ಋಷಿ. ಗೋವಿಗೆ ಹುಟ್ಟಿದವನು ವೃಷಭ ಋಷಿ. ಅವರಾರೂ ಈಗಿಲ್ಲ. ಆದರೆ ಅವರಿಗೆ ಜನ್ಮ ಕೊಟ್ಟ ಸ್ತ್ರೀಯರಿಗೆ ಮಾತ್ರ ಆ ಹೆಸರುಗಳು ಉಳಿದುಕೊಂಡಿವೆ. ಇವೆಲ್ಲವಕ್ಕೂ ಬಿಡುಗಡೆ ಯಾವಾಗ, ಪರಿಹಾರ ಯಾವಾಗ?

ಹೌದು, ನಿಜವೇ. ನಿಮಗೆ ಸಿಂಹಕ್ಕಿರುವಷ್ಟು ಧೈರ್ಯ ಇದೆ; ಭಗೀರಥನಷ್ಟು ಶ್ರಮವನ್ನು ಪಡಬಲ್ಲಿರಿ. ಚಾಮಿನಿಗಿರುವಷ್ಟು ವಿವೇಕವಿದೆ. ನೀವೆಷ್ಟೋ ಧೈರ್ಯಶಾಲಿಗಳು, ಭಯವರಿಯದ ನಾಯಕರು, ಸೋಲರಿಯದ ಶೂರರಾದ ಶತ್ರುಗಳನ್ನು ಸೋಲಿಸಿ ಅವರನ್ನು ಕೇವಲ ಕುರಿಮರಿಗಳನ್ನು ಬಿಟ್ಟುಬಿಡುವಂತೆ ಸುಲಭವಾಗಿ ಬಿಡುವ ವೀರರು. ಭಾರಿ ಅರಿವೀರ

ಭಯಂಕರನಾದ ಅಗ್ನಿಯಂತಹ ದೇವರನ್ನು ಹಿಡಿದುಕೊಂಡು ಅವನನ್ನು ಯಂತ್ರಗಳ ಮೂಲಕ ನಿಮಗೆ ಬೇಕಾದ ಕೆಲಸಗಳನ್ನೆಲ್ಲ ಮಾಡಿಸಿದರು. ವಾಯುದೇವನು ಅಗ್ನಿಗಿಂತಲೂ ಬಲಶಾಲಿ. ಬೆಂಕಿಯನ್ನು ನೀವು ಕಣ್ಣಿಂದ ನೋಡಬಹುದು. ಒಂದೊಂದು ಸಾರಿ ಕೈಯಿಂದಲೂ ಹಿಡಿಯಬಹುದು. ಆದರೆ ವಾಯುವನ್ನು ಕಣ್ಣಿನಿಂದ ನೋಡಲಾರೆವು, ಕೈಯಲ್ಲಿ ಹಿಡಿಯ ಲಾರೆವು. ಆದರೆ ಪುರುಷರು ಶಕ್ತಿಯನ್ನುಪಯೋಗಿಸಿ ಅವನನ್ನು ಕೂಡಾ ತಮ್ಮ ಅಧೀನಕ್ಕೆ ತಂದುಕೊಂಡಿದ್ದಾರೆ. ಮಿಂಚು ಎಲ್ಲಕ್ಕೂ ತಾಯಿಯಂತಹುದು, ಎಲ್ಲೋ ಎಷ್ಟೋ ಎತ್ತರದಲ್ಲಿ ಅನಂತಾಕಾಶದಲ್ಲಿ ಪಕ್ಷಿಗಳು ಕೂಡಾ ಹಾರದ ಮೋಡಗಳ ನಡುವೆ ಇರುತ್ತದೆ. ನೀವು ಆಕೆಯನ್ನು ಕೂಡ ಕೆಳಕ್ಕೆ ಎಳೆದು, ನಿಮಗಾಗಿ ಆಕೆ ಒಬ್ಬ ದಾಸಿಯಾಗಿ ಕಷ್ಟಪಡುವಂತೆ ಮಾಡಿದ್ದೀರಿ. ನೀವಿಷ್ಟು ಬಲಿಶಾಲಿಗಳಾದ ನಾಯಕರಾಗಿರುವಾಗ, ಪಾಪ ಯಾವ ದಾರಿಯಿಲ್ಲದ ವಿಧವೆಯರನ್ನು ಈ ಅವಮಾನಗಳ ಸುಳಿಯಿಂದ ಹೊರಗೆಳೆಯುವುದು ನಿಮಗೆ ಅಷ್ಟು ಅಸಾಧ್ಯವೇ? ಈ ಜಾತಿ ರೀತಿಗಳನ್ನು ಕೆಲವನ್ನು ದಾಟಿ ಅವರ ಹಣೆಯ ಮೇಲೆ ಮತ್ತೆ ಕುಂಕುಮವಿಟ್ಟು, ಮತ್ತೆ ಅವರು ಮದುವೆಯ ಬದುಕಿನ ಆನಂದವನ್ನು ಅನುಭವಿಸುವಂತೆ ಮಾಡಲಾರಿರಾ?

ಓ, ನಿಮ್ಮ ಶ್ರೇಷ್ಠತೆ, ನಿಮ್ಮ ಧೈರ್ಯ, ನಿಮ್ಮ ಮನೆಯ ಹೊರಗೆಂದೂ ಕೆಲಸ ಮಾಡು ವುದಿಲ್ಲವೇನೋ! ಇದು ಹೇಗಿದೆಯೆಂದರೆ ಒಬ್ಬ ಮುದಿ ಕುರುಡು ತಾಯಿಯ ನಡುವೆ ಕುಳಿತುಕೊಂಡರೆ ಐದಾರು ಸಣ್ಣಮಕ್ಕಳು ಆಕೆಯ ಸುತ್ತಲೂ ಆಡಿಕೊಳ್ಳುತ್ತ ಒಬ್ಬ "ನನಗೆ ರಾಜನಾಗಬೇಕೆಂದಿದೆ" ಎಂದರೆ ಎರಡನೆಯವನು "ಅಮ್ಮಾ ನಾನು ಮಂತ್ರಿ" ಎಂದರೆ, ಮೂರನೆಯವನು "ನಾನು ಸೇನಾಧಿಪತಿ", ಈಗ ನಾವು ರಾಜ್ಯವನ್ನು ಸ್ಥಾಪಿಸೋಣ, ಇದು ಸೈನ್ಯ, ಇದು ರಾಜರ ದಿವಾನೆ" ಎಂಬಂತಿದೆ. ಇದೇ ರೀತಿ ಬಿಸಿಲುಗುದುರೆಯಲ್ಲಿ ಪ್ರವಾಹದಂತೆ ನೀವೆಲ್ಲರೂ ನಡೆದುಕೊಳ್ಳುತ್ತ ಇರುತ್ತೀರಿ. ನಿಮ್ಮಲ್ಲಿ ಒಬ್ಬರು ಕೂಡಾ ನಿಜವಾದ ನಾಯಕ ನಂತೆ ಸವಾಲು ಸ್ವೀಕರಿಸಲಿಲ್ಲ. ಯೂಸಫ್ ಕತೆಗಳಲ್ಲಿ ಸಣ್ಣಿಲಿಗಳ ಸಮೂಹದಂತಹವರು ನೀವು. ಬೆಕ್ಕಿನ ಕೊರಳಿಗೆ ನಾವೆಲ್ಲ ತಪ್ಪದೆ ಗಂಟೆ ಕಟ್ಟಬೇಕು ಎಂದುಕೊಳ್ಳುತ್ತೀರಿ ನೀವು. ಹಾಗೆಯೇ ನಿಮ್ಮ ಬಾಯಲ್ಲಿ ಸುಧಾರಣೆಯ ಬಗೆಗಿನ ಮಾತುಗಳು ಯಾವಾಗಲೂ ಕೇಳುತ್ತಿ ರುತ್ತವೆ. ಆದರೆ ಅವನ್ನು ಆಚರಣೆಯಲ್ಲಿಡುವವರು ಯಾರು? ನೀವು ದೊಡ್ಡ ದೊಡ್ಡ ಸಭೆ ಏರ್ಪಡಿಸಿ, ಅದ್ಭುತವಾದ ಶಾಲುಗಳನ್ನು ಹೊದ್ದುಕೊಂಡು, ಹೂಗಳನ್ನು ಹೊಲಿದ ರುಮಾಲುಗಳನ್ನು ಇಟ್ಟುಕೊಂಡು ಮಣಗಟ್ಟಲೆ ಅಡಿಕೆಪುಡಿ, ಕವಳಿಗೆಗಟ್ಟಲೆ ವೀಳ್ಯದೆಲೆಯನ್ನು ಖರ್ಚು ಮಾಡುತ್ತ, ಬಗೆ ಬಗೆಯ ನಮಸ್ಕಾರ ಮಾಡುತ್ತ, ಒಂದು ಕೊಳದಷ್ಟು ಪನ್ನೀರು ಬಳಸಿ ಸೊಗಸಾಗಿ ಮನೆಗೆ ಬರುತ್ತೀರಿ ಅಷ್ಟೆ! ಅದೇ ನೀವು ಮಾಡಲಿರುವುದು. ಈ ನಕಲಿ ಸುಧಾರಣಾ ಸಂಘಗಳು ನಮ್ಮ ಮಧ್ಯೆ ಮೂವತ್ತೈದು ವರ್ಷಗಳಿಂದ ಇವೆ. ಆದರೆ ಅವುಗಳಿಂದ ಉಪಯೋಗವೇನು? ನೀವೆಲ್ಲ ಒಬ್ಬರ ಭುಜವನ್ನು ಒಬ್ಬರು ತಟ್ಟಿಕೊಳ್ಳುತ್ತ ಆನಂದ ಪಡುತ್ತಿದ್ದೀರೇನೋ! ಆದರೆ ಪರೀಕ್ಷಿಸಿ ನೋಡಿದರೆ ಅವುಗಳ ಪ್ರಯೋಜನ ನಿರೀಕ್ಷಿಸಿದಷ್ಟು ಆಗಿಲ್ಲ.

ಈ ವಿಷಯವನ್ನು ನೋಡಿರಿ. ಜಗತ್ತಿನಲ್ಲಿ ಎಲ್ಲವನ್ನೂ ಆಜ್ಞಾಪಿಸುವ ದೇವರು ತನ್ನ ತಿಳುವಳಿಕೆಯನ್ನೆಲ್ಲ ಉಪಯೋಗಿಸಿ ಈ ಪ್ರಪಂಚವನ್ನು ಅದ್ಭುತವಾದ ವಸ್ತುಗಳಿಂದ ತುಂಬಿದ್ದಾನೆ. ಆದರೆ ಎರಡೇ ವಸ್ತುಗಳು-ಐಶ್ವರ್ಯ ಮತ್ತು ಸ್ತ್ರೀ-ಎಲ್ಲರ ಮನಸ್ಸನ್ನು ಬಲವಾಗಿ ಆಕರ್ಷಿಸುತ್ತವೆ. ಇದರಲ್ಲಿ ಕೂಡ ಸ್ತ್ರೀಯರೇ ಮತ್ತಷ್ಟು ಆಕರ್ಷಕ ಶಕ್ತಿಯುಳ್ಳವರು. ಅವರು ನಿಮ್ಮ ಜೀವನವನ್ನು ಯಾವ ಸಂಪತ್ತು ನೀಡಲಾರದಷ್ಟು ಸೌಖ್ಯದಿಂದ ತುಂಬುತ್ತಾರೆ. ಒಂದು ಸಾರಿ ಊಹಿಸಿಕೊಳ್ಳಿರಿ! ನೀವೊಂದು ಅದ್ಭುತವಾದ ರಾಜಭವನ ನಿರ್ಮಿಸಿ ಎಲ್ಲ ಬಗೆಯ ಅನುಕೂಲಗಳ ನಡುವೆ, ಸುತ್ತಲೂ ಅಂದವಾದ ತೋಟಗಳಿಂದ, ಅನೇಕ ಬಗೆಯ ಬೆಲೆ ಬಾಳುವ ಅದ್ಭುತವಾದ ವಸ್ತುಗಳಿಂದ, ರಥಗಳಿಂದ, ಕುದುರೆಗಳಿಂದ, ಪಲ್ಲಕ್ಕಿಗಳಿಂದ, ಆನೆಗಳಿಂದ, ಒಂಟೆಗಳಿಂದ, ಸೈನಿಕರಿಂದ, ಅನೇಕ ಮಂದಿ ಸೇವಕರು ನಿಮ್ಮ ಸುತ್ತಲೂ ಇದ್ದು ರಾಜ ವೈಭವದಿಂದ ನೀವು ಬದುಕಬಹುದು. ಆದರೆ ಅವೆಲ್ಲವೂ ಸ್ತ್ರೀಯರನ್ನು ಬಿಟ್ಟು ನಿಮಗಾಗಿಯೇ ಏರ್ಪಾಟು ಮಾಡಿಕೊಳ್ಳಬಲ್ಲಿರಾ? ಹಾಗೆ ಮಾಡಿದರೆ ನಿಮ್ಮ ರಾಜಮಂದಿರವೇ ಒಂದು ಉರಿದುಹೋಗುವ ಬಯಲಾಗುತ್ತದೆ. ನಿಮ್ಮ ಹಂಸತೂಲಿಕಾತಲ್ಪ, ಮೆತ್ತನೆಯ ದಿಂಬುಗಳು ಸುಟ್ಟು ಹೋಗುವ ಕಾಷ್ಟವಾಗುತ್ತವೆ. ನಿಮ್ಮ ಸುತ್ತಲೂ ಇರುವ ಸೈನಿಕರು, ವಂದಿಮಾಗಧರು, ಸೇವಕರು, ಸ್ನೇಹಿತರಾಗದೆ ಶತ್ರುಗಳಾಗುತ್ತಾರೆ. ನೀವು ತಿನ್ನುವ ಮಧುರವಾದ ಕರಿದ ತಿಂಡಿಗಳೆಲ್ಲವೂ ನಿಮ್ಮ ಬಾಯಲ್ಲಿ ನಿಂಬೆಕಾಯಿಯ ಸಿಪ್ಪೆಯಂತೆ ಕಹಿಯಾಗಿ ಬದಲಾಗುತ್ತವೆ. ನೀವು ತೊಟ್ಟುಕೊಳ್ಳುವ ಬಟ್ಟೆಗಳು, ಧರಿಸುವ ಆಭರಣಗಳು ನಿಮ್ಮ ಮೈಯನ್ನು ಸುತ್ತಿಕೊಂಡ ಹಾವುಗಳೆನಿಸುತ್ತವೆ. ಇವೆಲ್ಲ ಸೇರಿ ನಿಮಗೆ ಹುಚ್ಚು ಹಿಡಿಯುವಂತೆ ಮಾಡುತ್ತವೆ. ದೇವರೇ ಇಳಿದು ಬಂದು ನಿಮ್ಮ ಮುಂದೆ ನಿಂತರೂ ನೀವು ಆ ಕ್ಷಣದಲ್ಲಿ ಆತನನ್ನು ಸಂದೇಹವಿಲ್ಲದೆ ಓಂದಕ್ಕೆ ಕಳುಹಿಸಿಬಿಡುತ್ತೀರಿ. ಒಂದು ಸಾರಿ ನೀವು ಎಂತಹ ಭಾವನೆಗಳಿಗೆ ಗುರಿಯಾಗುತ್ತೀರೋ ಯೋಚಿಸಿ. ಆ ಬಳಿಕ ಮತ್ತೆ ಪುರುಷನಿಲ್ಲದೆ ಸ್ತ್ರೀ ಆನಂದವಾಗಿ ಬದುಕಬಲ್ಲಳೇ ಎಂದು ಪ್ರಶ್ನಿಸಿಕೊಳ್ಳಿರಿ. ನೀವು ಎಂತಹ ಸ್ಥಿತಿಯಲ್ಲಿರುತ್ತೀರೋ ಆಕೆ ಕೂಡ ಅಂತಹದೇ ಸ್ಥಿತಿಯಲ್ಲಿ ಇರುತ್ತಾಳೆ. ಆಕೆ ಎಷ್ಟು ಐಶ್ವರ್ಯದ ನಡುವೆ ಬದುಕಿದರೂ ಒಟ್ಟಾರೆ ಜಗತ್ತನ್ನೇ ನೀವು ಆಕೆಯ ಕೈಯಲ್ಲಿಟ್ಟರೂ, ಏಕಾಕಿ ಆದರೆ ಆಕೆಯ ಪರಿಸ್ಥಿತಿಯನ್ನು ನೀವೊಂದು ಸಾರಿ ಊಹಿಸಿಕೊಳ್ಳಿರಿ. ಇಬ್ಬರು ಮನುಷ್ಯರು ಜೊತೆಯಾಗಿ ಜೀವಿಸಬೇಕೆಂಬುದೇ ನಿಜಕ್ಕೂ ದೇವರ ಯೋಚನೆ! ದೇವರು ತಾನು ಸೃಷ್ಟಿಸಿದ ಪ್ರತಿಯೊಂದರಲ್ಲೂ ಹೆಣ್ಣು ಜಾತಿಯನ್ನು ನಿರ್ಮಿಸಿದ. ಯಾವ ಸಂಕುಲದಲ್ಲೂ ಅದರ ಜೊತೆಯಿಲ್ಲದೇ ಸೊಗಸಾಗಲಿ, ಅಂದವಾಗಲಿ ಇಲ್ಲ. ಯಾವ ಕೆಲಸವನ್ನಾಗಲೀ ಇಬ್ಬರೂ ಸೇರಿ ಮಾಡದಿದ್ದರೆ ಪೂರ್ತಿಯಾಗದು. ಈ ಜಗತ್ತೆಂಬ ಕೀಕಾರಣ್ಯದಲ್ಲಿ ನಿಮ್ಮಷ್ಟಕ್ಕೆ ನೀವು ದಾರಿ ಹುಡುಕಿಕೊಳ್ಳಬಲ್ಲಿರಾ? ಈ ಭೌತಿಕ ಜೀವನವನ್ನು ನಿಮ್ಮಷ್ಟಕ್ಕೆ ನೀವು ಸಂಬಾಳಿಸಿಕೊಳ್ಳಬಲ್ಲಿರಾ? ಆ ದೊಡ್ಡ ಹೊಲದಲ್ಲಿ ಒಂದು ನೇಗಿಲನ್ನು ನೀವೊಬ್ಬರೇ ಎಳೆಯುತ್ತ, ಒಬ್ಬ ಸನ್ಯಾಸಿಯಂತೆ ಸ್ತ್ರೀಮುಖವನ್ನು ನೋಡದೆ ಕನಿಷ್ಟ ಒಂದೆರಡು ತಿಂಗಳಾದರೂ

ಬದುಕಬಲ್ಲಿರಾ? ನಿಮ್ಮ ಜೊತೆ ಒಬ್ಬ ಸ್ತ್ರೀ ಇಲ್ಲದೇ ಹೋದರೆ ನಿಮ್ಮ ಸ್ವಂತ ತಂದೆಯೋ ಅಥವಾ ಚಿಕ್ಕಪ್ಪನೋ ದಂಪತಿಗಳ ಪಕ್ಕದಲ್ಲಿ ನಿಮ್ಮನ್ನು ನಿಲ್ಲಿಸುವುದಕ್ಕೆ ಸಂದೇಹ ಪಡುತ್ತಾರೆ. ಯಾರೋ ಒಬ್ಬಂಟಿಯಾಗಿ ತನ್ನಿಷ್ಟಕ್ಕೆ ತಾನು ಬದುಕುವ ಒಬ್ಬ ಗಂಡಸಿನ ಬಗ್ಗೆ ಯಾರೂ ಗಮನಿಸುವುದಿಲ್ಲ.

ಹೆಂಡತಿ ಮಕ್ಕಳಿರುವ ಗಂಡಸಿಗೆ ತನ್ನ ದುರಭ್ಯಾಸಗಳಿಂದಲೋ, ಒಳ್ಳೆಯತನದಿಂದಲೋ ಕಷ್ಟಗಳು ಬಂದರೂ, ಅವನು ಉತ್ತಮರ ಆಸರೆಯನ್ನು ಕಳೆದುಕೊಂಡರೂ, ಬಡ್ಡಿ ವ್ಯಾಪಾರಿಗಳ ಬಲೆಯಲ್ಲಿ ಬಿದ್ದರೂ ಜನರು "ಅಯ್ಯೋ ಪಾಪ! ಅವನ ಮಕ್ಕಳ ಬಗ್ಗೆ ಯೋಚಿಸಿರಿ!" ಎನ್ನುತ್ತಾರೆ. ನಿಜಕ್ಕೂ ಅವನ ಬಗ್ಗೆ ಯಾರಿಗೂ ಲೆಕ್ಕವೇ ಇರುವುದಿಲ್ಲ. ಅವನ ಹೆಂಡತಿ ಮಕ್ಕಳ ಕುರಿತೇ ಜನ ಅವನನ್ನು ಕನಿಕರಿಸಿ ಬಿಡುತ್ತಾರೆ. ಅಗಸ್ತ್ಯನು ಕೂಡಾ ಸೀತೆಯಿಲ್ಲದ ರಾಮನನ್ನು ದರ್ಶನ ಮಾಡಿಕೊಳ್ಳುವುದಕ್ಕೆ ನಿರಾಕರಿಸಿದ. ರಾವಣ ಸೀತೆಯನ್ನೆತ್ತಿಕೊಂಡು ಹೋದಾಗ ರಾಮನ ಶಕ್ತಿಯನ್ನೆಲ್ಲ ತೆಗೆದುಕೊಂಡು ಹೋದ. ಆ ಬಳಿಕ ರಾಮನು ಮಾಡಿದ್ದು ಕಾಡಿನಲ್ಲಿ ಗುರಿಯಿಲ್ಲದೆ ಅಲೆಯುತ್ತ ಕನಿಕರವುಂಟಾಗುವಂತೆ "ಓ ನನ್ನ ಪ್ರಿಯ ಸಖಿ, ಜನಕಪುತ್ರಿ, ಸುಗುಣಗಳ ಗಣಿ, ಓ ಸೀತೆ ಸೀತೆ" ಎಂದು ಆಲಾಪಿಸಿದ್ದೇ! ಸ್ತ್ರೀಯರಿಗೆ ಅಷ್ಟು ಜಯಿಸುವ ಶಕ್ತಿಯಿದೆ. ನೀವೊಬ್ಬ ಬಲವಾದ ಶತ್ರುವನ್ನು ದೊಡ್ಡ ಸೈನ್ಯದಿಂದ, ಬಂದೂಕಿನಿಂದ, ಮಾರಣಾಯುಧಗಳಿಂದ ದಾಳಿ ಮಾಡಬಹುದು. ಅವನನ್ನು ಸರಪಳಿಯಿಂದ ಬಂಧಿಸಿ ಗುಲಾಮನನ್ನಾಗಿ ಮಾಡಿಕೊಳ್ಳಬಹುದು. ಎಷ್ಟೋ ಮಂದಿ ಬಲಶಾಲಿ ರಾಜರು ನಿಮ್ಮ ಸುತ್ತಲೂ ತಲೆ ಬಾಗಬಹುದು. ರಕ್ತ ಉಕ್ಕಿ ಹೊಳೆಯಂತೆ ಹರಿದ ಬಳಿಕ ಕೊನೆಗೆ ಗೆಲುವು ನಿಮ್ಮನ್ನು ವರಿಸಬಹುದು. ನೀವು ಹುಲಿಯನ್ನು ಹಿಡಿದುಕೊಂಡು ಬೋನಿನಲ್ಲಿ ಹಾಕಬಹುದು. ಭೀಕರವಾದ ಒಂದು ಸಿಂಹವನ್ನು ಕಡಿವಾಣ ಹಾಕಿ ಅದರ ಮೇಲೆ ಕುದುರೆಯಂತೆ ಸವಾರಿ ಮಾಡಬಹುದು. ಆದರೆ ನಿಮ್ಮ ಧೈರ್ಯ ಸಾಹಸ, ಧೀರತ್ವ ಎಲ್ಲ ಒಬ್ಬ ಅಬಲೆಯ ಮುಂದೆ, ಆಕೆಯ ಕಣ್ಣಲ್ಲಿ ಚುರುಕ್ಕೆನ್ನುವ ನೋಟದ ಮುಂದೆ ಮುದುಡಿ ಹೋಗುತ್ತವೆ. ನೀವು ಆಕೆಯ ಕಾಲುಗಳ ಮುಂದೆ ನಾಯಿಯಂತೆ ನೆಕ್ಕುತ್ತ ಬಿದ್ದು ಬಿಡುತ್ತೀರಿ. ಯಾವ ಮೂಢನಾದರೂ ಚಾಕು ತೆಗೆದುಕೊಂಡು ಯಾರನ್ನಾದರೂ ಗಾಯಗೊಳಿಸಬಹುದು. ಅದರಲ್ಲಿ ಧೀರತ್ವವೇನಿದೆ. ಆದರೆ ಎಷ್ಟೋ ದೂರದಿಂದ ಒಂದು ಕಣ್ಣ ನೋಟ ಬೀರಿ ಮನುಷ್ಯರನ್ನು 'ಆ', 'ಊ' ಎನ್ನುತ್ತ ನಿಟ್ಟುಸಿರು ಬಿಡುವಂತೆ ಮಾಡುವುದು ಬೇರೆ. ಇದರಲ್ಲಿ ಈಗ ಯಾರು ಹೆಚ್ಚು ಶಕ್ತಿಶಾಲಿಗಳು. ನೀವಾ? ಸ್ತ್ರೀಯರಾ?

ನಿಮ್ಮ ತಾಯಿಯ ವಿಷಯ ಕೂಡಾ ಅಷ್ಟೇ! ಆಕೆ ತನಗಿಂತಲೂ ನಿಮ್ಮನ್ನೇ ಹೆಚ್ಚಾಗಿ ಪ್ರೀತಿಸುತ್ತಾಳೆ. ನೀವು ಹಸುಗೂಸಾಗಿದ್ದಾಗಿಂದಲೂ ನಿಮಗೆ ಕಷ್ಟಗಳು ಬಂದಾಗಲೂ ಕಣ್ಣಲ್ಲಿ ಕಣ್ಣಿಟ್ಟು ಕಾಪಾಡುತ್ತಾಳೆ. ಮಿಂಚಿಗಿಂತಲೂ ವೇಗವಾಗಿ ನಿಮ್ಮ ಕರೆಗೆ ಓಗೊಡುತ್ತಾಳೆ. ನಿಮ್ಮ ಗೌರವಕ್ಕೆ ಸಮಾಜದಲ್ಲಿ ಯಾವ ರೀತಿಯ ಭಂಗ ಉಂಟಾಗದಂತೆ ಶ್ರದ್ಧೆ ವಹಿಸುತ್ತಾಳೆ. ನೀವು ತಲೆಯೆತ್ತಿ ನೋಡುವ ಹೊತ್ತಿಗೆ ಆಕೆ ನಿಮ್ಮ ಸೇವೆ ಮಾಡುವುದಕ್ಕೆ ಎದುರಾಗಿ

ನಿಂತಿರುತ್ತಾಳೆ. ಒಬ್ಬ ಆತ್ಮೀಯನಾದ ಋಷಿಯಂತೆ ನಿಮ್ಮ ಕಷ್ಟಸುಖಗಳಲ್ಲಿ ಕೊನೆಯವರೆಗೆ ಕಿರುನಗೆಯಿಂದ ಭಾರವನ್ನು ಹೊರುತ್ತಾಳೆ. ಅಸಲು ಸಂಗತಿಯೇನೆಂದರೆ, ನಿಮ್ಮ ಸಂತೋಷ ವನ್ನು ನಿರಂತರವಾಗಿ ಯಾರು ಕೋರುತ್ತಾರೋ ಆಕೆಯ ಮೇಲೆಯೇ ನೀವು ಈ ನಿಂದೆಗಳೆಲ್ಲ ವನ್ನು ಹಾಕಿ, ಪಾತಾಳಕ್ಕೆ ತುಳಿಯಬೇಕೆಂದು ನೋಡುತ್ತಿದ್ದೀರಿ. ನಿಮಗೆ ನಾಚಿಕೆಯಾಗು ವುದಿಲ್ಲವೇ? ಏ ಮೂರ್ಖರೇ! ಸ್ತ್ರೀಯರು ಸಹಜವಾಗಿ ಸೂಕ್ಷ್ಮವಾದವರು, ಸಂಕೋಚ ಸ್ವಭಾವದವರು, ಕೊಂಚ ಮುಗ್ಧರು. ಮತ್ತೆ ನೀವೋ? ಎಂತಹ ದೊರೆಗಳು, ಸ್ವಾಭಾವಿಕವಾಗಿ ಮುನ್ನುಗ್ಗುವ ಸ್ವಭಾವದವರು, ಧೈರ್ಯವಂತರು, ವಿದ್ಯಾವಂತರು. ಆದ್ದರಿಂದಲೇ ನಿಮ್ಮ ತುಟಿಗಳು ನಿಮ್ಮ ತಾಯಿಯ ಬಂಗಾರದೆದೆಯಿಂದ ಅಮೃತವನ್ನಾದರೂ ಸ್ಪರ್ಶಿಸದ ಮುನ್ನವೇ ನೀವು ಸ್ತ್ರೀಯರನ್ನು ಈ ಬಗೆಯ ಮಾತುಗಳಿಂದ ಆಡುತ್ತೀರಿ. ನೀವು ಬಲಶಾಲಿಗಳಾದ ಮಾತ್ರಕ್ಕೆ ಅದು ಒಳ್ಳೆಯ ಕೆಲಸವಾಗುತ್ತದೆಯೇ! ನೀವು ಹೆಂಗಸರಿಗೆ ಅನೇಕ ಬಗೆಯ ಅವಮಾನಕರವಾದ ಹೆಸರುಗಳನ್ನಿಟ್ಟು, ಅವರನ್ನು ಬಲಹೀನರೆಂದು, ಬುದ್ಧಿಹೀನರೆಂದು, ಯೋಚನೆಯಿಲ್ಲದವರೆಂದು ಕರೆದು ಅವರ ಹೆಸರುಗಳಲ್ಲಿರುವ ಪದಗಳನ್ನೇ ಅವಮಾನ ಗೊಳಿಸುತ್ತಿದ್ದೀರಿ. ಅವರನ್ನು ನಿರಂತರವಾಗಿ ಮನೆಗಳಲ್ಲಿ ಬಂದೀಖಾನೆಗಳಲ್ಲಿ ಮುಚ್ಚಿ ಹಾಕಿ ನೀವು ನಿಮ್ಮ ಅಧಿಕಾರ, ದೊಡ್ಡಸ್ತಿಕೆ ಬೆಳೆಸಿಕೊಳ್ಳುತ್ತ 'ಸ್ವಾಮಿಗಳು', 'ದೊರೆಗಳು', ವಗೈರೆ ಆಗುತ್ತಿರುತ್ತೀರಿ. ನಿಜಕ್ಕೂ ನಿಮ್ಮಲ್ಲಿ ನೀವು ಒಂದು ಸಾರಿ ಈ 'ಹೆಂಡತಿ' ಎಂಬುದು ಯಾವ ಪದಾರ್ಥ ಎಂದು ಯೋಚಿಸಿರಿ. "ಕೈಯಲ್ಲಿ ಮೊಲವಿರುವವನೇ ಬೇಟೆಗಾರ, ಉಳಿದದ್ದೆಲ್ಲ ಸುಳ್ಳು' ಎಂಬಂತೆ ಚಿಕ್ಕಂದಿನಿಂದ ಅವರ ಹಕ್ಕುಗಳನ್ನೆಲ್ಲ ನಿಮ್ಮ ಕೈಯಲ್ಲಿಟ್ಟು ಕೊಂಡು, ಸ್ತ್ರೀಯರನ್ನು ನಿಜವಾದ ಜಗತ್ತಿಗೆ ದೂರ ಮಾಡಿ ಕತ್ತಲ ಮೂಲೆಗಳಿಗೆ ತಳ್ಳಿ, ಪರದೆಯಿಂದ ಮುಚ್ಚಿಹಾಕಿ ಭಯವಿಟ್ಟು, ಒತ್ತಡ ಹಾಕಿ ಹೆಣ್ಣು ಗುಲಾಮರನ್ನಾಗಿ ಮಾಡಿ ಹತ್ತಿಕ್ಕುತ್ತೀರಿ. ಇಷ್ಟರಲ್ಲಿ ನಿಮ್ಮ ದೊಡ್ಡ ದೊಡ್ಡ ಗುಣಗಳಿಂದ ನಮ್ಮ ಕಣ್ಣು ಚದುರುವಂತೆ ಮಾಡುತ್ತಿದ್ದೀರಿ. ಯಾವಾಗೆಂದರೆ ಆವಾಗ ಮನೆಗೆ ಬಂದು ಹೊರಗೆ ಹೋಗುವುದು ಕೂಡಾ ಸ್ತ್ರೀಯರು ಮಾಡಬಾರದು. ಒಂದು ವೇಳೆ ಯಾವ ಸ್ತ್ರೀ ಆದರೂ ಮನೆಯ ಹೊರಗೆ ಹೋಗಿ ಬೇರೆ ಸ್ತ್ರೀಯರನ್ನು ಭೇಟಿಯಾದರೂ ಆ ಸ್ತ್ರೀಯರು ಕೂಡಾ ಏನೂ ತಿಳಿಯದವರೇ ಅಲ್ಲವೇ, ಅವರೆಲ್ಲರದು ಒಂದೇ ರೀತಿ. ಇನ್ನು ಆಕೆಗೆ ಒಂದು ಜ್ಞಾನವಾಗಲಿ, ತಿಳುವಳಿಕೆ ಯಾಗಲಿ ಹೇಗೆ ಬರುತ್ತದೆ?

ನಿಮ್ಮ ಪೂರ್ವಿಕರಾದರೂ ಹೆಂಡತಿಗೆ ಮುನ್ನ ಗಂಡನಾಗಲಿ, ಗಂಡನಿಗೆ ಮುನ್ನ ಹೆಂಡಿತಿ ಯಾಗಲಿ ಸತ್ತು ಹೋಗುವುದೇ ಒಳ್ಳೆಯದೆಂದು ದೇವರಿಂದ ನೇರವಾಗಿ ಸಾಕ್ಷಿಯನ್ನು ತೋರಿಸಬಲ್ಲಿರಾ? ಯಾರು ಸಾಯಬೇಕೋ ಯಾರು ಬದುಕಬೇಕೋ ಎಂಬುದು ಅತಿ ಶಕ್ತಿಶಾಲಿಯಾದ ಕೈಯಲ್ಲಿಯೇ ಇದೆ. ಆತನ ಹೆಸರು ಬಳಸಿಕೊಂಡು ಕಲ್ಲು ಹಾಕುವುದು ಬಿಟ್ಟು, ನಿಮ್ಮ ಕೈಯಲ್ಲೇನಿದೆ? ಯುವತಿ-ಯುವಕರು ಸತ್ತು ಹೋಗುವುದು, ಮುದುಕರು ಬದುಕುವುದರ ಬಗ್ಗೆ ಏನಾದರೂ ಕಾನೂನು ಇದೆಯಾ? ಕೆಲವು ಮಂದಿ ಹುಟ್ಟುತ್ತಲೇ,

ಕೆಲವು ಮಂದಿ ಸಂಪೂರ್ಣ ಯವ್ವನದಲ್ಲಿ, ಮತ್ತೆ ಕೆಲವು ಮಂದಿ ಜೀವನದಲ್ಲಿ ಅನುಭವಿಸ ಬೇಕಾದ್ದನ್ನೆಲ್ಲ ಅನುಭವಿಸಿದ ಮೇಲೆ ಹಣ್ಣು ಹಣ್ಣು ಮುದಿತನದಲ್ಲಿ ಸತ್ತು ಹೋಗುತ್ತಾ ರೆಂಬುದು ಸತ್ಯವಲ್ಲವೇ? ಇನ್ನು ಕೆಲವು ಮಂದಿ ಜೀವನದಲ್ಲಿ ಆನಂದವೆಲ್ಲ ಸವಿಯುವ ಸಮಯದಲ್ಲೇ ಹೊರಟು ಹೋಗುತ್ತಾರೇಕೆ? ಯಮನ ಕರೆ ಬಂದ ಕೂಡಲೇ ದೊಡ್ಡ ದೊಡ್ಡ ರಾಜ್ಯಗಳನ್ನು - ಆ ಭಾರವನ್ನು ಹೊರುವುದು ಆನಂದವಾಗಿದ್ದರೂ ಸರಿ, ಸಂಕಟ ವಾಗಿದ್ದರೂ ಸರಿ-ಬಿಟ್ಟು ರಾಜರು ಒಂದು ನಿಮಿಷ ನಿಲ್ಲದೆ ಹೆಂಡತಿ ಮಕ್ಕಳನ್ನು ಬಿಟ್ಟು ಹೊರಟು ಹೋಗುತ್ತಾರೇಕೆ? ಕೆಲವು ಮಂದಿ ಸಂತೋಷದಿಂದ, ಮತ್ತೆ ಕೆಲವು ಮಂದಿ ದುಃಖದಿಂದ, ಇಲ್ಲದಿದ್ದರಿಂದ! ಈ ವಿಷಯದಲ್ಲಿ ಬದಲಾವಣೆ ತರಬಲ್ಲವರಾರಾದರೂ ಇದ್ದಾರೆಂದು ನೀವೆಂದುಕೊಳ್ಳುತ್ತಿದ್ದೀರಾ? ಯಮದೂತರ ಮುಂದೆ ದೊಡ್ಡ ಮಹಾರಾಜನೇ ಏನೂ ಮಾಡಲಾರ. ಆದ್ದರಿಂದ ಒಬ್ಬ ಮಾಮೂಲಿ ಸ್ತ್ರೀ ಮಾತನ್ನು ಯಾರು ಕೇಳುತ್ತಾರೆ? ಈ ವಿಷಯದಲ್ಲಿ ಆಕೆಯೇನು ಮಾಡಬಲ್ಲಳು? ಇನ್ನು ನಿಮ್ಮ ಮಹಾಭಾರತಕ್ಕೆ ಬಂದರೆ ಅದರಲ್ಲಿ ಎಲ್ಲಿಯಾದರೂ ಒಬ್ಬ ಸ್ತ್ರೀ ಬ್ರಹ್ಮದೇವನನ್ನು ತನ್ನ ಸತ್ತು ಹೋದ ಗಂಡನನ್ನು ಬದುಕಿಸಿ ಕೊಡು ಎನ್ನುವುದು ನಿಮಗೆ ಕಾಣಿಸುತ್ತದಾ? ಅದು ಭಗವಂತನೂ, ಸೃಷ್ಟಿಕರ್ತನೂ ತಾನೇ ಸ್ವತಃ, "ಯಾವ ಸ್ತ್ರೀ ಕೂಡಾ, ಆಕೆ ಯಾರಾದರೂ ಸರಿ, ಒಂದು ಸಾರಿ ಗಂಡ ಸತ್ತ ನಂತರ ಎರಡನೇ ಸಾರಿ ಮದುವೆ ಮಾಡಿಕೊಳ್ಳಬಾರದೆಂದು ಹೇಳಿದ ನಂತರ, ಸಾವಿತ್ರಿ ಬಿಟ್ಟು ಬೇರೆ ಯಾವ ಸ್ತ್ರೀ ಯಮನ ಬಳಿ ಹೋಗಿ ತನ್ನ ಹೆಂಡತಿಯ ಸ್ಥಾನವನ್ನು ಮರಳಿ ಪಡೆಯಲಾರದಾಯಿತು. ಆಕೆ ಹೋಗಿದ್ದು ಸರಿ, ಗಂಡನನ್ನು ಮತ್ತೆ ಪಡೆದಳು. ಆಮೇಲೆ ಬಹಳ ವರಗಳನ್ನು ಯಮನಿಂದ ಪಡೆದಳು. ಸಾವಿತ್ರಿ ಒಬ್ಬ ಅಬಲೆಯಾದರೂ ಯಮನ ಆಸ್ಥಾನಕ್ಕೆ ಹೋಗಿ ತನ್ನ ಗಂಡನನ್ನು ಮತ್ತೆ ಪಡೆದದ್ದು ಸರಿ! ಮತ್ತೆ ಯಾವ ಪುರುಷನಾದರೂ ಹೆಂಡತಿಯನ್ನು ಬದುಕಿಸಿಕೊಳ್ಳುವ ಉದ್ದೇಶದಿಂದ ಯಮನ ಬಳಿಗೆ ಹೋದ ಸಂಗತಿ ಕೇಳಿದ್ದೀರಾ. ನಿಜಕ್ಕೂ ಆಕೆಯನ್ನು ಬದುಕಿಸಿಕೊಳ್ಳುವ ಸಂಗತಿಯನ್ನು ಬಿಟ್ಟು ಬಿಡಿ. ಒಂದು ಸಾರಿ ಸ್ತ್ರೀಯರು ಹೆಂಡತಿಯಾಗಿ ತಮ್ಮ ಸ್ಥಾನವನ್ನು ಕಳೆದುಕೊಂಡರೆ ಆ ನಂತರ ಅವರು ತಾವಾವುದೋ ಹತ್ಯೆಗಿಂತಲೂ ದೊಡ್ಡ ಅಪರಾಧವನ್ನು ಮಾಡಿದವರಂತೆ ತಮ್ಮ ಮುಖವನ್ನು ಮುಚ್ಚಿಟ್ಟುಕೊಂಡು ಕತ್ತಲ ಮೂಲೆಯಲ್ಲಿ ಬಂಧಿಗಳಾಗಿ ಜೀವಿತಾಂತ ಕೊಳೆತು ಹೋಗ ಬೇಕಾದ್ದೇ. ಹಾಗಾದರೆ ನೀವು ಕೂಡಾ ಹೆಂಡತಿಯರು ಸತ್ತು ಹೋದಾಗ ನಿಮ್ಮ ಮುಖ ಮುಚ್ಚಿಟ್ಟುಕೊಂಡು ತಲೆ, ಮೀಸೆಯನ್ನು ಬೋಳಿಸಿಕೊಂಡು ಕಾಡಿಗೆ ಹೊರಟು ಹೋಗಿ ಉಳಿದ ಜೀವನವನ್ನು ಕಳೆಯಬಹುದಲ್ಲವೇ! ನೀವಾ? ನೀವು ಹಾಗೆ ಮಾಡುವುದಿಲ್ಲ. ಹೆಂಡತಿ ಸತ್ತು ಹೋದ ಕೂಡಲೇ ಇನ್ನೊಬ್ಬಳನ್ನು ೧೦ನೇ ದಿನಕ್ಕೆ ತಂದುಕೊಳ್ಳುತ್ತೀರಿ. ಅದಕ್ಕೆ ಯಾವ ದೊಡ್ಡ ವಿವೇಕವಂತನಾದ ದೇವರು ನಿಮ್ಮನ್ನು ಹೀಗೆ ಮಾಡಲು ಹೇಳಿದನೆಂದು ಸಾಕ್ಷಿಯನ್ನು ತೋರಿಸಿರಿ! ನಿಜಕ್ಕೂ ಸ್ತ್ರೀಗೆ ಯಾವುದಾದರೆ ಒಳ್ಳೆಯದೋ ಪುರುಷರಿಗೆ ಕೂಡಾ ಅದೇ ಒಳ್ಳೆಯದಾಗಬೇಕಲ್ಲವೆ! ನಿಮ್ಮ ವಿಷಯದಲ್ಲಿ ನಿಜಕ್ಕೂ ಯಾವ ಭೇದವಿದೆ?

ನೀವೆಲ್ಲ ಯಾವುದೋ ಉದಾತ್ತವಾದ ನಾಯಕರೆಂದುಕೊಂಡು ದೇವರು ಸ್ವಾತಂತ್ರ್ಯವನ್ನು ಒಂದು ವಿಶಿಷ್ಟವಾದ ವರವೆಂದು ನಿಮಗೆ ಕೊಟ್ಟಿದ್ದಾನಾ?

ನಿಮಗೆ ದೊಡ್ಡ ಹೆಸರು, ಪ್ರತಿಷ್ಠೆ, ನಿಮ್ಮಲ್ಲಿವೆಯೆಂದುಕೊಳ್ಳುವ ಆ ಉನ್ನತವಾದ ಲಕ್ಷಣಗಳನ್ನು ಹಿಡಿದೇ ಬರುತ್ತವೆ. ಯಾರೂ ಆ ಉನ್ನತವಾದ ಲಕ್ಷಣಗಳನ್ನು ಜಾಗರೂಕತೆಯಿಂದ ಪರಿಶೀಲಿಸಿ ನೋಡದೆ ಹೋದರೆ! ನಿಜಕ್ಕೂ ನಮ್ಮ ಹೆಂಗಸರಿಗೆ ಝಾನ್ಸಿರಾಣಿಯಂಥವರು ದಾರಿ ತೋರಿಸಬೇಕಾಗಿಲ್ಲ. ಯಾವ ಬಂಧನವೂ ಇಲ್ಲದ ಮೂರು ನಾಲ್ಕುನೂರು ಮಹಿಳೆಯರನ್ನು ತೆಗೆದುಕೊಂಡು ಅವರ ಕೈಗೆ ಬಂದೂಕುಗಳನ್ನು ಕೊಟ್ಟು ಆ ಬಳಿಕ ನೋಡಿ. ಅವರು ನಿಮ್ಮನ್ನೇನು ಮಾಡಬಲ್ಲರೋ! ಆಮೇಲೆ ನಿಮಗೆ ಬಚ್ಚಿಟ್ಟುಕೊಳ್ಳುವುದಕ್ಕೆ ಸ್ಥಳ ಒಲೆಯ ಹತ್ತಿರ ಕೂಡಾ ಸಿಗುವುದಿಲ್ಲ. ಪೂರ್ವದ ಮರಾಠಾ ರಾಜ್ಯಗಳಲ್ಲಿ ಎಷ್ಟೋ ಮಂದಿ ನಿಜವಾದ ಶೂರರು, ಒಂದು ಕಾಲದಲ್ಲಿ ದೆಹಲಿಯನ್ನು ಆಳುತ್ತಿದ್ದರು. ಈಗ ಇಂಗ್ಲಿಶರ ರಾಜ್ಯ ಬಂದ ನಂತರ ನಿಮ್ಮ ಅದ್ಭುತವಾದ ಶಕ್ತಿಗಳೆಲ್ಲ ಹೋಗಿ ನಿಮ್ಮ ಆನಂದವೆಲ್ಲ ಕೊನೆಯಾಗಿ ಹೋದವು. ಹಳೆಯ ಗಾದೆ "ಯಾರೂ ನಿನ್ನನ್ನು ಹೊಗಳದೆ ಹೋದರೆ ನಿನ್ನನ್ನೇ ನೀನು ಹೊಗಳಿಕೊಳ್ಳಬೇಕು" ಎಂಬಂತೆ ರಣರಂಗದಲ್ಲಿ ಅಲ್ಲದೆ ಈ ದಿನ ಲೇಖನಿಯನ್ನು ಅಲ್ಲಾಡಿಸುವುದರಲ್ಲಿ ಮಾತ್ರವೇ ನಿಮ್ಮನ್ನು ನೀವು ಶೂರರೆಂದು ಕರೆದುಕೊಳ್ಳಬಹುದು. ಇಲ್ಲದಿದ್ದರೆ ನಿಮ್ಮನ್ನು ಯಾರು ಗಮನಿಸುತ್ತಾರೆ? ಇನ್ನೂ ಹೇಳಬೇಕೆಂದರೆ ಗಂಟಲಿನವರೆಗೆ ಊಟ ಮಾಡುವುದರಲ್ಲಿ ಮಾತ್ರವೇ ನೀವು ಶೂರರೆಂದು ಹೇಳಿಕೊಳ್ಳಬಹುದು. ಅದೇ ನಿಮಗೆ ನಿಜಕ್ಕೂ ಸರಿ ಹೋಗುವ ಹೆಸರು.

ನೀವು ನಿಜವಾಗಿ ಲೇಖನಿ ಉಪಯೋಗಿಸುವುದರಲ್ಲಿ ಚತುರತೆಯುಳ್ಳವರು, ಪವಿತ್ರರು, ದಯೆ ಕರುಣೆಯುಳ್ಳವರಾದರೆ, ನೀವು ಮೂವತ್ತೆರಡು ಸದ್ಗುಣಗಳನ್ನು ಉಳ್ಳವರಾದರೆ, ನಿಮಗೆ ನಿಮ್ಮ ಸಹಪ್ರಾಣಿಗಳ ಮೇಲೆ ಯಾವುದೇ ರೀತಿಯ ಪ್ರೇಮ ಇಲ್ಲವೇಕೆ? ನಿಮ್ಮಲ್ಲಿ ಮಾದರಿಗೂ ಒಂದು ಚಿಕ್ಕ ಪ್ರೀತಿ ಇಲ್ಲವೇಕೆ? ಇಲ್ಲದಿದ್ದರೆ ನೀವು ನಿಮ್ಮಲ್ಲಿನ ಪ್ರೇಮವನ್ನೆಲ್ಲ ಕಾಡಿನಲ್ಲಿ ಹುಲಿಗಳಿಗೆ ಎರವಲು ನೀಡಿದ್ದೀರಾ?

ನಿಮ್ಮ ಅಭಿಪ್ರಾಯದಲ್ಲಿ ನಮ್ಮ ಸ್ವಂತ ಬದುಕೇ ನಮಗೆ ಇತರರ ಜೀವನವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ದಾರಿ ತೋರಿಸಬೇಕು. ಇಲ್ಲಿ ಮತ್ತೆ ನಿಮ್ಮ ಜೀವನಕ್ಕೇನಾಗಿದೆ? ನಿಮ್ಮ ಬದುಕು ನಿಮಗೆಷ್ಟು ಪ್ರಿಯವೋ ಒಬ್ಬ ಸ್ತ್ರೀಗೆ ಕೂಡಾ ಆಕೆಯ ಜೀವನ ಅಷ್ಟೇ ಪ್ರಿಯವಾದದ್ದಲ್ಲವೇ! ಸ್ತ್ರೀಯರನ್ನು ಪುರುಷರಂತಲ್ಲದೆ ಬೇರೆ ಯಾವುದೋ ಪದಾರ್ಥದೊಂದಿಗೆ ಭೂಮಿಯಲ್ಲಿನ ಮಣ್ಣಿನಿಂದಲೋ, ಕಲ್ಲಿನಿಂದಲೋ, ತುಕ್ಕು ಹಿಡಿದ ಕಬ್ಬಿಣದಿಂದಲೋ ತಯಾರಿ ಮಾಡಿದಂತೆ, ನಿಮ್ಮ ಜೀವನವನ್ನೇನೋ ಶುದ್ಧವಾದ ಬಂಗಾರದಿಂದ ಮಾಡಿದಂತೆ ಮಾತಾಡುತ್ತಿರುತ್ತೀರಿ. ನಿಮ್ಮ ದೃಷ್ಟಿಯಲ್ಲಿ ಸ್ತ್ರೀ ಒಂದು ಹೇನು, ನೊಣದಂತಹ ಕೀಳಾದ ಕೀಟ. ನಿಮ್ಮ ಅನುಭವವೇನೋ ಇದೆಲ್ಲ ಸರಿಯಾದುದೆಂದು,

ಒಳ್ಳೆಯದೆಂದು ಹೇಳುತ್ತದೆ. ನಾನು ಹೇಳುವುದೇನು ಎನ್ನುತ್ತೀರಾ? ಒಂದು ಸಾರಿ ಸ್ತ್ರೀ ಗಂಡ ಸತ್ತು ಹೋದ ಮೇಲೆ ಆಕೆ ಪಡುವ ಪಾಡು ನಾಯಿ ಕೂಡಾ ಸಹಿಸದು ಅನ್ನುತ್ತೇನೆ. ಆಕೆಗೆ ಇನ್ನು ಮುಂದೆ ನಡೆಯುವುದೇನು? ಮೊದಲಿಗೆ ಆಕೆಯ ಸುರುಳಿಗೂದಲನ್ನು ಪೂರ್ತಿಯಾಗಿ ನಿಮ್ಮ ಕಣ್ಣು ತಂಪಾಗುವಂತೆ ತೆಗೆದು ಹಾಕುವುದಕ್ಕೆ ಹಜಾಮ ಬರುತ್ತಾನೆ. ಆಕೆಯ ಆಭರಣಗಳನ್ನೆಲ್ಲ ತೆಗೆದು ಹಾಕುತ್ತಾರೆ. ಆಕೆಯ ಅಂದವೆಲ್ಲ ಮಾಯವಾಗಿ ಹೋಗುತ್ತದೆ. ಆಕೆಯನ್ನು ಯಾರಿಗೂ ಸೇರದಂತವಳಾಗಿ ಎಲ್ಲವನ್ನು ತೆಗೆದು ಹಾಕಿ ವಿಕಾರವಾಗಿ ಸಿದ್ಧಪಡಿಸಿ, ಕೆಲಸಕ್ಕೆ ಬಾರದ ಮಡಕೆಯಂತೆ ಒಂದು ಮೂಲೆಯಲ್ಲಿ ಮುಚ್ಚಿಡುತ್ತಾರೆ. ಮುತ್ತೈದೆಯರು ಹೋಗುವ ಮದುವೆಗೆ, ಹಬ್ಬಗಳಿಗೆ, ಶುಭ ಕಾರ್ಯಗಳಿಗೆ ಆಕೆಯನ್ನು ನಿಷೇಧಿ ಸುತ್ತಾರೆ. ಈ ನಿಬಂಧನೆಗಳೆಲ್ಲ ಯಾತಕ್ಕಾಗಿ? ಆಕೆಯ ಗಂಡ ಸತ್ತು ಹೋಗಿದ್ದಕ್ಕೇನಾ? ಆಕೆ ದುರದೃಷ್ಟ ವಂತಳು. ಅದು ವಿಧಿ. ಆಕೆಯ ಹಣೆಯಲ್ಲಿ ಬರೆದ ಬರಹ. ಆಕೆಯ ಮುಖವನ್ನು ಯಾರೂ ನೋಡಬಾರದು; ಅದು ಅಪಶಕುನ. ಈಗ ಆಕೆ ಇಂತವುಗಳಿಗೆಲ್ಲ ಪ್ರತೀಕ. ಸರಿ ಆಕೆಯ ಗಂಡ ಸತ್ತು ಹೋದ. ಸತ್ತು ಹೋಗಿಲ್ಲವೆಂದು ಯಾರೂ ಅನ್ನುತ್ತಿಲ್ಲವಲ್ಲ! ಆಕೆ ಏನಾದರೂ ಭಗವಂತನನ್ನು ರಹಸ್ಯವಾಗಿ "ನನ್ನ ಗಂಡನನ್ನು ಬೇಗ ಕರೆದುಕೊಂಡು ಹೋಗು ಸ್ವಾಮಿ ಎಂದು ಪ್ರಾರ್ಥಿಸಲಿಲ್ಲವಲ್ಲ! ನಿಜಕ್ಕೂ ಆಕೆ ದೇವರನ್ನು ತನ್ನ ಮೇಲೆ ಕರುಣೆ ತೋರಿ "ಸ್ವಾಮಿ, ನನ್ನ ಗಂಡನನ್ನು ಬೇಗ ಕರೆದುಕೊಂಡು ಹೋಗು, ನನಗೆ ಈ ಹಿಂಸೆಗಳಿಂದ ಬಿಡುಗಡೆ ಮಾಡು" ಎಂದು ಪ್ರಾರ್ಥಿಸಿರಬಹುದು. ಇಲ್ಲದೆ ಹೋದರೆ ಆ ಮಹಾರಾಯ ಹೋದರೆ ತಾನು ಅನುಭವಿಸಬೇಕಾದ ತೊಂದರೆಗಳನ್ನು ನೆನೆಯುತ್ತ ಆ ಯೋಚನೆಗಳನ್ನು ನಿಲ್ಲಿಸಿರಬಹುದು. ಯಾರು ಹೇಳಬಲ್ಲರು? ಅಲ್ಲ, ಪೂರ್ವದಲ್ಲಿ ನಮ್ಮವರು ಅಂದಂತೆ "ಪಾಪವನ್ನು ನಾರಾಯಣನು ಮಾಡಿದ. ಪ್ರಾಯಶ್ಚಿತ್ತವನ್ನು ಕೇಶವನು ಮಾಡಬೇಕು". ಒಬ್ಬ ಗಂಡನ ಜೀವನ ಕೊನೆಗೊಂಡು ಮುಗಿದು ಹೋಯಿತು. ಅವನ ಒಳಿತು ಕೆಡುಕುಗಳನ್ನು ಅಂದಾಜು ಹಾಕಿದರು. ಅವನು ಹೊರಟು ಹೋದ. ಆದರೆ ಅದಕ್ಕೆ ಹೆಂಡತಿಯನ್ನು ಏಕೆ ಹೊಣೆಗಾತಿಯನ್ನಾಗಿ ಮಾಡಬೇಕು? ಹೋಗಲಿ ಬಿಡಿ! ಆಕೆಯದೇ ಬಾಧ್ಯತೆ ಎಂದು ಕೊಳ್ಳೋಣ. ಆಕೆಯ ಗಂಡ ಸತ್ತು ಹೋದ ಕೂಡಲೇ ಜೀವನದಲ್ಲಿ ಎಲ್ಲ ಬಿಟ್ಟುಕೊಟ್ಟು ಒಂದೆಡೆ ಕುಳಿತು "ಹರಿ, ಹರ" ಎಂದು ಭಗವಂತನಿಗೆ ಮೊರೆಯಿಟ್ಟುಕೊಳ್ಳುತ್ತ ಕುಳಿತುಕೊಳ್ಳ ಬೇಕೆಂದು ಆಶಿಸಿದರೆ ಮತ್ತೆ ಪುರುಷನು ಕೂಡ ಅದೇ ಕೆಲಸವನ್ನು ಏಕೆ ಮಾಡಬಾರದು? ಮತ್ತೆ ಅವನೇಕೆ ಸೊಗಸಾಗಿ ಕೂಡಲೇ ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಸಂತಸದಿಂದ ಜೀವನ ಕಳೆಯಬೇಕು? ಶಾಸ್ತ್ರಗಳನ್ನು ಬರೆದ ಪಂಡಿತರು ತಮ್ಮ ಕ್ರೂರವಾದ ನೋಟವನ್ನು ಸ್ತ್ರೀಯರ ಮೇಲೆಯೇ ವಿಶೇಷವಾಗಿ ಬೀರಿದ್ದಾರಾ? ಬಹುಶಃ ಯಾವುದೋ ಒಂದು ಕಾಲದಲ್ಲಿ ಯಾರೋ ಒಬ್ಬ ಸ್ತ್ರೀ ಹೋಗಿ ಅವರ ಮನೆಗೆ ಬೆಂಕಿಯನ್ನು ಇಟ್ಟಿರುವ ಕೆಲಸ ಮಾಡಿರಬೇಕು. ಬಹುಶಃ ಆ ಒಬ್ಬ ಮಹಿಳೆಯ ಬಗ್ಗೆ ಈ ಶಾಸ್ತ್ರಗಳೆಲ್ಲ ಹೊಸದಾಗಿ ಬರೆದು ಹಾಕಿ ಅದು ಎಲ್ಲ ಸ್ತ್ರೀಯರಿಗೂ ಅನ್ವಯಿಸುವಂತೆ ಆಪಾದಿಸಿದರೇನೋ?

ಅವರು ಆ ಶಾಸ್ತ್ರಗಳನ್ನು ಆಗಲೇ ಗಂಡಸರ ಮೇಲೂ ಅನ್ವಯಿಸಿದ್ದರೆ ಅದೂ ಚೆನ್ನಾಗಿಯೇ ಇರುತ್ತಿತ್ತು. ಆದರೆ ಅವರಿಂದ ನಾವು ಆ ಕೆಲಸವನ್ನು ಎಂದಾದರೂ ಮಾಡಿಸಬಲ್ಲವೇ! ಆ ಶಾಸ್ತ್ರಗಳನ್ನು ಬರೆದವರು ಅವುಗಳನ್ನು ಸಿದ್ಧಪಡಿಸಿದಾಗ ಅವರ ತಲೆಯನ್ನು ಬಹಳ ಜಾಣತನ ದಿಂದ ಬಳಸಿದರು. ಎಲ್ಲ ಅವರಿಗೆ ಅನುಕೂಲವಾಗುವಂತೆ ಬರೆದುಕೊಂಡರು. ಬಹಳ ಅದ್ಭುತವಾಗಿದೆಯೆಲ್ಲ! ಅದೇ ಸಮಯದಲ್ಲಿ ಅವರು "ಯಾವ ಗಂಡಸೂ ಮೊದಲ ಹೆಂಡತಿ ಸತ್ತುಹೋದ ನಂತರ ಎರಡನೇ ಮದುವೆ ಮಾಡಿಕೊಳ್ಳಬಾರದು. ಹಾಗೆ ಮಾಡಿದರೆ ತಾಯಿಯೊಂದಿಗೆ ಕೂಡಿದಷ್ಟು ಪಾಪ. ಜನರು ಅವನನ್ನು ಕೂಡಾ ಅವನ ಹಣೆಯ ಮೇಲೆ ದುರದೃಷ್ಟ ಬರೆದಿಟ್ಟಿದೆ. ಅವನ ಮುಖವನ್ನು ನಾವು ನೋಡಬಾರದು ಎನ್ನುತ್ತಿದ್ದರು. ಅವನನ್ನು ಮದುವೆ ಮತ್ತಿತರ ಸಮಾರಂಭಗಳಿಗೆ ಬರದಂತೆ ಊರ ಹೊರಗಿನ ಯಾವುದಾದರೂ ಮಠದಲ್ಲಿ ಬಂಧಿಸುತ್ತಿದ್ದರು. ಇದನ್ನು ಗಮನಿಸಿದರೆ ನಮಗೆ ಸ್ಪಷ್ಟವಾಗಿ ಅರ್ಥವಾಗು ವುದಿಲ್ಲವೇ ಈ ಶಾಸ್ತ್ರಗಳನ್ನು ಬರೆದವರು ಎಷ್ಟು ಮಂದಿಯಾದರೂ ಹೆಣ್ಣುಗಳನ್ನು ಮದುವೆಯಾಗುವುದಕ್ಕೆ ಅವಕಾಶ ಕೊಟ್ಟಾಗ ಅವರಿಗೆ ಅನುಕೂಲವಾಗಿ ಯೋಚಿಸಿದರೆಂದು. ಇನ್ನೇನು ಅವರ ಅದೃಷ್ಟ ಬೆಳೆಯಿತು. ಹೆಂಡತಿ ಸತ್ತು ಹೋದರೂ, ಪಾಪ ದುರದೃಷ್ಟವಂತಳು ಕಾಯಿಲೆ ಬಿದ್ದರೂ ಇನ್ನೇನು ನಮ್ಮವನು ಕೂಡಲೇ ಇನ್ನೊಬ್ಬಳನ್ನು ತಗುಲಿಸಿಕೊಳ್ಳುತ್ತಾನೆ. ಅವನು ಹಣವಂತನೂ ಆಗಿದ್ದರೆ ಮತ್ತಷ್ಟು ಅದೃಷ್ಟವಂತನೆಂದಾಯಿತು! ಎರಡು ಬಗೆಯ ಅಂತಸ್ತು ಅವನ ವರವಾಗುತ್ತದೆ. ಒಂದು ಅವನ ಹಣದಿಂದ, ಎರಡನೆಯದು ಅವನು ಗಂಡಸಾದ್ದರಿಂದ! ಅವನನ್ನು ಇನ್ನು ಹಿಂದಕ್ಕೆಳೆಯುವುದು ಯಾವುದೂ ಇರುವುದಿಲ್ಲ.

ಒಂದು ವೇಳೆ ಎಂಬತ್ತು ವರ್ಷಕ್ಕೂ ಹೆಚ್ಚಾಗಿ ಒಡೆಲಲ್ಲ ಸುಕ್ಕುಗಟ್ಟಿ ಸಕಲ ಗುಣಸಂಪನ್ನ ರಾರಾದರೂ ನಿಮಗೆ ತಿಳಿದಿದ್ದರೆ ಅವರಿಗೆ ಕೂಡ "ಅದೇನು ಮಾತು, ನಿಮಗೆ ವಯಸ್ಸಾಯಿ ತೆಂದು ಯಾರಂತಾರೆ? ಯಾರಾದರೂ ಆ ಮಾತೆಂದರೆ ಅವರ ಹಲ್ಲುದುರಿಸುತ್ತೇನೆಂದು" ಹೇಳುವ ಜಿಡ್ಡು ಮುಖದ ಭಜಂತ್ರಿಯವರಿರುತ್ತಾರೆ. ಕೂಡಲೇ ಆ ಮುದುಕ "ನನ್ನ ಕೂದಲು ನೋಡಯ್ಯಾ? ಇದರಿಂದಲೇ ಎಲ್ಲ ಕೆಟ್ಟು ಹೋಯಿತು" ಎನ್ನುತ್ತಾನೆ. "ಅದರದೇನು ಬಿಡಿ, ಈ ಕ್ರೀಮನ್ನು ಸ್ವಲ್ಪ ತೆಗೆದುಕೊಂಡು ತಲೆಗೆ ಬಳಿದುಕೊಂಡರೆ ನಾಳೆಗೆಲ್ಲ ಬಿಳಿ ಕೂದಲು ಕಾಣಿಸದಂತೆ ಸರಿ ಹೋಗುತ್ತದೆ" ಎಂದು ನಾಯಿಂದ ಸಮಾಧಾನ ಪಡಿಸುತ್ತಾನೆ. "ಅದೂ ಸರಿ, ನನ್ನ ಕೂದಲು ಸರಿಯಾಯಿತು. ಮತ್ತೆ ಹಲ್ಲುಗಳ ಸಂಗತಿಯೇನು? ಬಾಯಲ್ಲಿ ಒಂದು ಹಲ್ಲು ಕೂಡಾ ಉಳಿಯದಂತೆ ಉದುರಿ ಹೋಗಿವೆ. ಇದರ ಬಗ್ಗೆ ಏನಾದರೂ ಮಾಡುವುದಕ್ಕೆ ಆಗುತ್ತದಾ ಎನ್ನುತ್ತಾನವನು. ಅದೊಂದು ದೊಡ್ಡ ಸಮಸ್ಯೆಯೇನ್ರಿ! ನಾಳೆ ಹಲ್ಲಿನ ಡಾಕ್ಟರ ಬಳಿ ಹೋಗೋಣ. ಒಟ್ಟು ಹೊಸ ಹಲ್ಲುಗಳು ಮೂವತ್ತೆರಡನ್ನು ಕಟ್ಟಿಸಿ ಕೊಳ್ಳೋಣ. ಈ ಸಾರಿ ಹಲ್ಲುಜ್ಜುವಾಗ ಇನ್ನೇನಾದರೂ ಒಂದೋ ಎರಡೋ ಉಳಿದಿದ್ದರೆ ಅವನ್ನು ಕಿತ್ತು ಹಾಕಿರಿ. ಇನ್ನೇನು ಆತ ಆ ಕೆಲಸಕ್ಕೆ ಸಿದ್ಧವಾಗುತ್ತಾನೆ. "ಇಪ್ಪತ್ತು ವರ್ಷದ

ಯುವಕರು ಕೂಡಾ ಇನ್ನು ನಿಮ್ಮ ಪಕ್ಕದಲ್ಲಿ ನಡೆಯುವುದಕ್ಕೆ ಧೈರ್ಯ ಮಾಡುವುದಿಲ್ಲ. ನಮ್ಮವು ಹಳೆ ಮೂಳೆ ಕಣ್ರೀ! ಆದರೂ ಮೆಣಸು ಹಳೆಯವಾದರೂ, ಕೊಳೆತರೂ ಜೋಳಕ್ಕಿಂತಲೂ ಕಡಿಮೆ ಅನಿಸುತ್ತವೆಯೇ ಹೇಳ್ರೀ". ಇನ್ನೇನು ವ್ಯವಸ್ಥೆಯೆಲ್ಲ ಆಗುತ್ತದೆ. ಮುದುಕ ಅಂತಹ ಯೋಚನೆಗೇ ಉಬ್ಬಿ ಹೋಗಿ, ಗರ್ವದಿಂದ ಎದೆಯನ್ನು ಉಬ್ಬಿಸುತ್ತಾನೆ. ಅವನ ತಲೆಯ ಮೇಲೆ ಉಳಿದ ನಾಲ್ಕು ಮೊಳಕೆಯ ಕೂದಲು, ಅವನ ಕಣ್ಣುಬ್ಬು, ಮೀಸೆ ಹತ್ತಿಯಂತೆ ಬೆಳ್ಳಗಾಗಿದ್ದರೂ ಅವನ ಬಳಿ ನೂರು ರೂಪಾಯಿ ಕೊಟ್ಟು ತರಿಸಿದ ತೈಲವಿದೆ. ತಾನು ಕೇಳಿದ ಪ್ರಕಾರ ಅದನ್ನು ದಿನಕ್ಕೆ ಮೂರು ಸಾರಿ ಬಳಿದುಕೊಳ್ಳುತ್ತಾನೆ. ಒಳ್ಳೆಯ ಬಟ್ಟೆಗಳನ್ನು ತೊಟ್ಟುಕೊಳ್ಳಲು ಆರಂಭಿಸುತ್ತಾನೆ. ಧೋತಿಯನ್ನು ಸೊಗಸಾಗಿ ನೆರಿಗೆ ಹಾಕಿ ಗಟ್ಟಿಯಾಗಿ ಕಟ್ಟಿಕೊಳ್ಳುತ್ತಾನೆ. ಜರಿ ಅಂಚಿನ ರುಮಾಲು ಇಟ್ಟುಕೊಳ್ಳುತ್ತಾನೆ. ಹೊಸದಾಗಿ ಮಿಂಚುವ ಅಂಗಿಯನ್ನು ಬಲವಂತದಿಂದ ಅವನ ಮುದಿ ಶರೀರಕ್ಕೇರಿಸುತ್ತಾನೆ. ಭುಜದ ಮೇಲೆ ಸೊಗಸಾದ ಶಾಲು, ಕಟ್ಟಿಸಿಕೊಂಡ ಹಲ್ಲುಗಳನ್ನು ಬೊಚ್ಚು ಬಾಯಿಗೆ ತಗುಲಿಸುತ್ತಾನೆ. ಆ ಇಟ್ಟುಕೊಂಡ ಹಲ್ಲುಗಳು ಕೆಂಪಾಗಿ ಮಿಂಚಲು ಬಾಯಿಗೆ ಕುಟ್ಟಿದ ಅಡಿಕೆ ಎಲೆಯನ್ನು ತುರುಕಿಕೊಳ್ಳುತ್ತಾನೆ. ಕೆಂಪಾದ ಗಿರಕಿ ಚಪ್ಪಲಿಗಳನ್ನು ಕಾಲಿಗೆ ಮೆಟ್ಟಿಕೊಳ್ಳುತ್ತಾನೆ. ದಾರಿಯಲ್ಲಿ ಹೆಜ್ಜೆ ತಡಬಡಾಯಿಸದಂತೆ ವಿದೇಶದಿಂದ ತರಿಸಿದ ಊರುಗೋಲು! ಇನ್ನು ಅವನು ತಿನ್ನುವುದೇನು ಗೊತ್ತಾ? ಬಾದಾಮಿ ಪಾಕ, ಕರಿದ ಸಿಹಿ ತಿಂಡಿಗಳು, ತರಕಾರಿಯಿಂದ ಮಾಡಿದ ಹಲ್ವಾ, ದಿನಕ್ಕೆ ಹತ್ತು ಸಾರಿ ಆರೋಗಿಸುವುದು ಶರೀರಕ್ಕೆ ದೃಢತ್ವ ಬರುವುದಕ್ಕೆ. ಕೆನ್ನೆಗಳು ಒಳಕ್ಕೆ ಗುಳಿ ಬಿದ್ದ ಅಂದವಿಕಾರವಾದ ಮುದಿ ಮುಖವನ್ನು ದಿನಕ್ಕೆ ಹತ್ತಾರು ಸಾರಿ ಕನ್ನಡಿಯಲ್ಲಿ ನೋಡಿಕೊಂಡು, ಒಳಗೊಳಗೆ ಉಬ್ಬಿ ಹೋಗುತ್ತ ದಾರಿಯಲ್ಲಿ ಹೋಗುವವರನ್ನು ಕೇಳುತ್ತಿರುತ್ತಾನೆ. "ಏನ್ರೀ, ನಾನು ಈ ನಡುವೆ ಹೇಗೆ ಕಾಣಿಸುತ್ತೀನಿ? ಚೆನ್ನಾಗಿದ್ದೀನಲ್ವಾ!" "ಒಂದು ದಿನ ಯಾವನೋ ತುಂಟ ಸಿಕ್ಕಿ "ಚೆನ್ನಾಗಿ ಇದ್ದೀರಿ! ನಿಮಗೆ ಯಾವ ವಯಸ್ಸಾಗಿದೆ! ನಮ್ಮ ಗಣಪತಿಯವರಿಗಿಂತಲೂ ಒಂದು ದಿನ ಕೂಡಾ ನಿಮಗೆ ವಯಸ್ಸು ಹೆಚ್ಚಾಗಿಲ್ಲ! ನೀವು ಮತ್ತೆ ಒಬ್ಬ ಹೆಂಡತಿಯನ್ನು ಹುಡುಕಿಕೊಳ್ಳಬೇಕು. ನಮಗೇ ಮನೆಯಲ್ಲಿ ಈ ನಡುವೆ ಹೊತ್ತು ಹೋಗುತ್ತಿಲ್ಲ. ನಿಮಗೆ ಹೇಗೆ ನಡೆಯುತ್ತದೆ! ನಮ್ಮ ಹಿರಿಯರು ಹೇಳಿಯೇ ಇದ್ದಾರೆ. ಆರ್ಥಿಕ ತೊಂದರೆಗಳಲ್ಲಿ ನಂಟರು ಅಗತ್ಯ. ಅದೇ ಭೇದಿಯಾದರೆ ಹೆಂಡತಿ ಪಕ್ಕದಲ್ಲಿರಬೇಕೆಂದು" ಎನ್ನುತ್ತಾನೆ.

ಇನ್ನೇನಿದೆ! ಈ ಮುದಿಯ ಪ್ರತಿ ನಿಮಿಷ ಒಂದು ಹೆಣ್ಣಿಗಾಗಿ ಮೈಯೆಲ್ಲ ಕಣ್ಣು ಮಾಡಿಕೊಂಡು ಹುಡುಕುತ್ತ ಕಳೆಯುತ್ತಾನೆ. ಇನ್ನೇನು ಕೆಲಸವಾಗುತ್ತದೆ. ಆ ಮುದಿ ಹೆಣ ಎರಡು ಮೂರು ಸಾವಿರ ಖರ್ಚು ಮಾಡಿ ಚಿಗರೆಗಂಗಳ ಹುಡುಗಿಯೊಬ್ಬಳನ್ನು ತಂದು ಕೊಳ್ಳುತ್ತಾನೆ. ಒಂದು ಆಡಿನ ಮರಿಯನ್ನು ಕಟುಕನಿಂದ ಕೊಂಡು ಅದನ್ನು ಹುಲಿಯ ಬೇಟೆಯಲ್ಲಿ ಎರವಾಗಿ ಕಟ್ಟಿದಂತೆ. ಒಂದು ದಿನ ಹೊರಗೆ ಹೋದವನು ಎಲ್ಲಿಯೋ ಒಂದು ಕಡೆ ಜೀವ ಬಿಡುತ್ತಾನೆ.

ಅಷ್ಟೇ ಕತೆ ಮುಗಿಯುತ್ತದೆ. ಅವನ ಪ್ರಾಪಂಚಿಕ ಜೀವನ ಮುಗಿದು ಹೋಗುತ್ತದೆ. ಕಷ್ಟಗಳನ್ನೆಲ್ಲ ಭರಿಸುವುದಕ್ಕೆ ಆಕೆ ಉಳಿದುಬಿಡುತ್ತಾಳೆ ಭೂಮಿಯ ಮೇಲೆ. ಹೌದಾ ಅಲ್ವಾ?

ನೀವು ಯಾರಾದರೂ ಒಬ್ಬ ಸ್ತ್ರೀ ಇಂತಹ ವೇಷ ಹಾಕುವುದನ್ನು ನೋಡಿದ್ದೀರಾ? ಒಂದು ಸಾರಿ ಆಕೆಯ ಮೇಲೆ ಆಗಸದಿಂದ ವಿಧಿಯ ಕೊಡಲಿ ಏಟು ಬಿದ್ದ ನಂತರ ಆಕೆ ವಿಧವೆಯಾಗಿ ಭಾರವನ್ನು ಹೊರುತ್ತ, ಗತಿಸಿದ ಗಂಡನ ಒಳ್ಳೆಯ ಗುಣ, ಕೆಟ್ಟ ಗುಣಗಳನ್ನು ಹೊಗಳುತ್ತ, ಮನೆಯಲ್ಲಿ ಉಳಿದ ಎಲ್ಲರ ಚೀತ್ಕಾರವನ್ನು ತಾನು ಸಾಯುವವರಗೆ ಸಹಿಸುತ್ತಾಳೆ.

ಗಂಡನಿಗೆ ಚಿಕ್ಕ ಕಾಯಿಲೆಯಾದರೆ ಭಯದಿಂದ ಸ್ತ್ರೀ ಗಂಟಲು ಒಣಗಿ ಹೋಗುತ್ತದೆ. ಅವನನ್ನು ಜಾಗರೂಕತೆಯಿಂದ ನೋಡಿಕೊಳ್ಳುತ್ತ ತನ್ನ ಪ್ರಾಣಕ್ಕಿಂತಲೂ ಅವನ ಬಗ್ಗೆಯೇ ಹೆಚ್ಚಿನ ಆತಂಕಗೊಳ್ಳುತ್ತಾಳೆ. ಅದು ಭಕ್ತಿ ಎಂದು ನೀವೆನ್ನಬಹುದು. ಭಯ ಕೂಡ ಆಗಬಹು ದೇನೋ! ಆಕೆ ಅವನ ಮಾತನ್ನು ಚಾಚೂ ತಪ್ಪದಂತೆ ಪಾಲಿಸುತ್ತಾಳೆ. ಸ್ತ್ರೀ ಆದರೂ ಪುರುಷನಾದರೂ ಎದುರಿನಲ್ಲಿರುವವರೊಂದಿಗೆ ಪ್ರೇಮದಿಂದ ಪ್ರಾಮಾಣಿಕವಾಗಿರಬಹುದು. ಇಲ್ಲದೆ ಹೋದರೆ ಸ್ತ್ರೀ ಗಂಡನೊಂದಿಗೆ ಉತ್ತಮಳಾಗಿ ಇಲ್ಲದಿರುವ ಅವಕಾಶವೇ ಇಲ್ಲ! ಆಕೆಯ ಯೋಚನೆಗಳು ಆಕೆಗೆ ಇದ್ದೇ ಇರುತ್ತವೆ. ಹೊತ್ತು ಕಂತುವ ಹೊತ್ತಿಗೆ ನಿಮ್ಮಿಷ್ಟಾನುಸಾರ ನೀವು ಕೊಟ್ಟ ತೆಗಳಿಕೆ ಹೊಗಳಿಕೆಯನ್ನು ಆಕೆ ಸಹಿಸುತ್ತಿರುವಾಗ, ಆಕೆ ಒಳ್ಳೆಯ ಗುಣವಂತಳಾಗಿರಬೇಕೆಂದು ನೀವು ಹೇಗೆ ಹೇಳಬಲ್ಲಿರಿ? ಸಹಜವಾಗಿ ಮನುಷ್ಯರು ನಡೆದುಕೊಳ್ಳುವುದು, ಒಳ್ಳೆಯದಾಗಿ ಕೆಟ್ಟದಾಗಿಯಾದರೂ ಹೊರಗಿನವರಿಂದಲೇ ಕಲಿತು ಕೊಳ್ಳುತ್ತಾರೆ. ನೀವೊಂದು ಸಾರಿ ಒಬ್ಬ ಮೋಸಗಾರನಿಂದ ಹೊಡೆತ ತಿಂದರೆ, ನೀವು ಅವನಿಗಿಂತಲೂ ಹತ್ತುಪಟ್ಟು ದೊಡ್ಡ ಮೋಸಗಾರನಾಗುವ ಅವಕಾಶವಿಲ್ಲವೇ!

ಈ ವಿಷಯವಾದರೂ ಅಷ್ಟೇ! ಇಂಗ್ಲಿಶಿನಲ್ಲಿ ಒಂದು ಗಾದೆ ಇದೆ. ಕರುಣೆಯಿಂದ ಕರುಣೆ ಹುಟ್ಟುತ್ತದೆ ಎಂದು. ಕರುಣೆಯ ಹೊಟ್ಟೆಯಿಂದ ಕರುಣೆ ಹುಟ್ಟಿದಂತೆಯೇ ನೀವು ನಿಮ್ಮ ಮನಸ್ಸಿನಲ್ಲಿ ಹುಟ್ಟುವ ಯೋಚನೆಗಳ ಬಗ್ಗೆ ಮೊದಲು ಸೂಕ್ಷ್ಮವಾಗಿ ನೋಡಿಕೊಂಡು, ಅದರಿಂದ ಹೊರಗಿನವರಿಗೇನು ಯೋಚನೆಗಳು ಹುಟ್ಟುತ್ತವೆಯೋ ಲೆಕ್ಕ ಹಾಕಿರಿ. ಆದರೆ ಗಂಡಸರ ವಿಷಯದಲ್ಲಿ ಇದು ಕೂಡಾ ಕೆಲಸಕ್ಕೆ ಬರುವುದಿಲ್ಲ. ಒಬ್ಬ ಪುರುಷನ ಹೆಂಡತಿ ಒಂದು ವರ್ಷವೋ ಎರಡು ವರ್ಷವೋ ಕಾಯಿಲೆಯಲ್ಲಿದ್ದರೆ ಆಕೆ ಯಾವಾಗ ಸಾಯುತ್ತಾಳೋ, ಇದೆಲ್ಲ ಯಾವಾಗ ಮುಗಿಯುತ್ತದೋ ಎಂದು ಯೋಚಿಸುತ್ತಾನೆ. ಇಲ್ಲದಿದ್ದರೆ "ಆಕೆಗೆ ಔಷಧಿ ಕೊಟ್ಟು ಕೊಟ್ಟು ಜಿಗುಪ್ಸೆಗೊಂಡು ನನಗೇ ಕಾಯಿಲೆ ಬರುವಂತಿದೆ" ಎನ್ನುತ್ತಾನೆ. ಅದೇ ಸ್ತ್ರೀ ಆದರೆ ಆಕೆಯ ಪರಿಸ್ಥಿತಿ ಹೇಗಿದ್ದರೂ ಜನ ಏನೆಂದುಕೊಳ್ಳುತ್ತಾರೋ ಎಂಬ ಭಯದಿಂದಲಾದರೂ ಹಾಗೆ ಅನ್ನುವುದಿಲ್ಲ. ಗಂಡನನ್ನು ಮಾತ್ರ ಅವನು ಎಂತಹವನಾದರೂ, ಎಂತಹ ಪರಿಸ್ಥಿತಿಯಲ್ಲಿದ್ದರೂ ಆಕೆ ಗೌರವದಿಂದಲೇ ನೋಡಬೇಕು. ಮುಸ್ಲಿಮರಂತೆ, ನೀವು ಎಂತಹವರಾದರೂ ಹೆಸರು ಮಾತ್ರ ದೊಡ್ಡದಾಗಿಯೇ ಇರಬೇಕು. ಒಬ್ಬ ಮನುಷ್ಯ

ಧನಿಕನಾದರೆ, 'ಅಮೀರ್' ಎಂದು, ಬಡವನಾದರೆ 'ಫಕೀರ್' ಎಂದು, ಸತ್ತು ಹೋದ ನಂತರ ಅವನನ್ನು 'ಪೀರ್' ಎಂದು ಕರೆಯುತ್ತಾರೆ. ಹಾಗೆಯೇ ಮದುವೆಯಾಗದವನನ್ನು 'ಬ್ರಹ್ಮಚಾರಿ' ಎಂದು ಕರೆದರೆ ಮದುವೆಯಾದವನನ್ನು ಗೃಹಸ್ಥನೆಂದು, ಕೌಟುಂಬಿಕನೆಂದು, ಸಂಸಾರಸ್ಥನೆಂದು ಕರೆಯುತ್ತಾರೆ. ಜೀವನದಲ್ಲಿ ಅನೇಕ ಸ್ಥಿತಿಗಳನ್ನು ದಾಟಿ ಹೋಗಿ ಪ್ರಾಪಂಚಿಕ ಜೀವನ ಬಿಟ್ಟವನನ್ನು 'ಸನ್ಯಾಸಿ' ಎನ್ನುತ್ತಾರೆ. ಅಲ್ಲಿಗೆ ಮುಕ್ತಾಯ. ದಿನದಲ್ಲಿ ಸನ್ಯಾಸ ತೆಗೆದುಕೊಳ್ಳುವುದಕ್ಕೆ ಸಾಯಂಕಾಲ ಸಮಯ ಒಳ್ಳೆಯದಲ್ಲವೇ! ಆದರೆ ನೀವು ಮಾತ್ರ ಕೊನೆಯ ನಿಮಿಷದವರೆಗೆ ನಿಮ್ಮ ಜೀವದ ಮೇಲೆ ಆಸೆಯಿಲ್ಲವೆಂದು ಹೇಳುವವರೆಗೂ ಡಾಕ್ಟರನ್ನು ಬಿಡುವುದಿಲ್ಲ. ಆಗ ಮಾತ್ರ ನೀವು ಸನ್ಯಾಸ ಸ್ವೀಕರಿಸುತ್ತೀರಿ, ಕೊನೆಗೆ ಬೆಳಕರಿಯುವ ಮೊದಲು.

ಎಂಥಾ ಠಕ್ಕ ಗುಳ್ಳೆನರಿಗಳು ನೀವು. ನಿಜಕ್ಕೂ ಅಸಾಧ್ಯರು. ಈ ಇಂಗ್ಲಿಶರ ಸರಕಾರವನ್ನು ಕೊನೆಯವರೆಗೂ ಮುಂದುವರಿಸಿದರೆ! ಅವರು ಬಂದ ನಂತರವೇ ಸ್ತ್ರೀಯರಿಗೆ ಓದುವ ಅಭ್ಯಾಸ ಸಿಕ್ಕಿದ್ದು. ಮಾನಸಿಕವಾದ, ಬಾಹ್ಯವಾದ ಎಲ್ಲ ಬಗೆಯ ಪರಿಸ್ಥಿತಿಗಳನ್ನು ಎದುರಿಸುವ ರೀತಿಯಲ್ಲಿ ಅವರ ಮನಸ್ಸು ಧೈರ್ಯವನ್ನು ಪಡೆಯಿತು. ಅವರ ಹೃದಯದಲ್ಲಿ ಗೂಡು ಕಟ್ಟಿಕೊಂಡ ಅಜ್ಞಾನ ಚದುರಿ ಹೋಯಿತು. ಅವರು ಯಾವುದು ಒಳ್ಳೆಯದೋ, ಕೆಟ್ಟದೋ ತಿಳಿದುಕೊಳ್ಳುತ್ತಿದ್ದಾರೆ. ಯಾರೊಂದಿಗೆ ಹೇಗೆ ನಡೆದುಕೊಳ್ಳಬೇಕೋ, ಜೀವನವೆಂಬ ಗಾಡಿಯನ್ನು ಜಗತ್ತಿನಲ್ಲಿ ಹೇಗೆ ನಡೆಸಬೇಕೋ, ಸತ್ಯ, ಧರ್ಮ, ಪಾತಿವ್ರತ್ಯವೆಂದರೆ ಏನೋ ಸ್ವಲ್ಪಮಟ್ಟಿಗೆ ಅರ್ಥ ಮಾಡಿಕೊಂಡರು. ಇವುಗಳೆಲ್ಲದರ ಮೂಲದಿಂದ ಭಾರತದಲ್ಲಿ ಪರಿಸ್ಥಿತಿಗಳು ಸ್ವಲ್ಪಮಟ್ಟಿಗೆ ಬದಲಾಗುತ್ತಿವೆ. ಆದರೂ ಇನ್ನೂ ಕೊಂಚ ಮಂದಿ, 'ಪೂನಾ ವೈಭವ್'ನಂಥ ವಾರ್ತಾ ಪತ್ರಿಕೆ ಮಾತ್ರ ನರನರಗಳಲ್ಲೂ ಸ್ತ್ರೀಯರನ್ನು ದ್ವೇಷಿಸುತ್ತದೆ. ಇವರಿಗೆ ಹೊಸದಾಗಿ ಬರುವ ಬದಲಾವಣೆಗಳೆಲ್ಲದರ ಮೇಲೆ ದ್ವೇಷವೇ. ಇಲ್ಲದೆ ಹೋದರೆ ಆ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಮೂಲಕ ಹಾಗೆನಿಸುತ್ತದೆಯೇನೋ! ಅಂಥಾ ಲೇಖನಗಳು ಕಳೆದ ಮೂರು ನಾಲ್ಕು ತಿಂಗಳಿಂದ ಪತ್ರಿಕೆಗಳಲ್ಲಿ ಹೇರಳವಾಗಿ ಬರುತ್ತಿವೆ. ವಿಜಯಲಕ್ಷ್ಮಿ[1] ಎಂಬ ವಿಧವೆ ಗರ್ಭಪಾತ ಮಾಡಿಸಿಕೊಳ್ಳುವುದೋ ಅಥವಾ ಹುಟ್ಟಿದ ಮಗುವನ್ನು ಸ್ವರ್ಗಕ್ಕೆ ಕಳುಹಿಸುವುದೋ ಮಾಡಿದಂತಿದ್ದಾಳೆ. ಆ ವಿಷಯದ ಮೇಲೆ ಸದ್ಯ ವಿಚಾರಣೆ ನಡೆಯುತ್ತಿದೆ. ಪಾಪ ಆ ವಿಧವೆಯ ಬಗ್ಗೆ ಸಹೃದಯದಿಂದ ಯೋಚಿಸಿದವರಾರೂ ಸರ್ಕಾರಕ್ಕೆ ವಿಧವೆಯರು ತಪ್ಪದೆ ಮರುಮದುವೆ ಮಾಡಿಕೊಳ್ಳುವಂತೆ ಒತ್ತಾಯ ತರಬೇಕೆಂದು ಬರೆದರು. ಇನ್ನೇನಿದೆ, ಮಹಾನುಭಾವ 'ಪೂನಾ ವೈಭವ್' ಪತ್ರಿಕೆ ಎಡಿಟರ್‌ಗೆ ವಿಪರೀತವಾದ ಕೋಪ ಬಂತು. ಅರಚಲು ಆರಂಭಿಸಿದ. "ಇಂಗ್ಲಿಶ್ ಸರ್ಕಾರ ನಮ್ಮ ಧಾರ್ಮಿಕ ವಿಷಯದಲ್ಲಿ ಮೂಗು ತೂರಿಸಬಾರದೆಂದು" ತಾನು ಮೂಗು ತೂರಿಸಿದ. ನಿಜಕ್ಕೂ ಆತ ಉಳಿದವರಿಗಿಂತ ಭಿನ್ನವಾದವನೇನೂ ಅಲ್ಲ. ನೋಡುವುದಕ್ಕೆ ಅವನು ಸಮಾಜ ಸುಧಾರಕನಾಗಿ ಇರುವುದಿಲ್ಲ ವಾದರೂ ಅವನು ಸುಧಾರಕನೇ. ಇಲ್ಲದಿದ್ದರೆ ಅವನ ಸುಧಾರಣೆಗಳೆಲ್ಲ ಮುಸುಕು

ಹಾಕಿಕೊಂಡಿರುತ್ತವೆ. ನೀವು ಶ್ರದ್ಧೆಯಿಂದ ಗಮನಿಸಿದರೆ ಯೂರೋಪ್ ವಾಸಿಗಳಿಗೂ ನಮಗೂ ದೊಡ್ಡ ಧಾರ್ಮಿಕ ಪರವಾದ ಭೇದಗಳು ಈಗೇನಿವೆ? ಒಂದೇ ಮುಖ್ಯವಾದ ಭೇದವಿದೆ. ಅದೇನೆಂದರೆ ಬೇರೆ ಕುಲದಲ್ಲಿ ಸ್ತ್ರೀಯನ್ನು ಮದುವೆ ಮಾಡಿಕೊಳ್ಳುವುದಾಗಲಿ, ಆಕೆಯೊಂದಿಗೆ ಇತರೆ ಶಾರೀರಿಕ ಸಂಬಂಧ ಹೊಂದಿರುವುದಾಗಲಿ ನಮ್ಮವರು ಮಾಡುವುದಿಲ್ಲ. ಅದೊಂದೇ ಸದ್ಯ ಉಳಿದಿದೆ. ಇನ್ನುಳಿದವುಗಳಲ್ಲಿ ಯೂರೋಪ್‌ವಾಸಿಗಳ ರೂಢಿಗಳನ್ನು ನೀವು ಯಾವುದನ್ನು ಸ್ವಂತ ಮಾಡಿಕೊಳ್ಳಲಿಲ್ಲ?

ಅವರ ಬಟ್ಟೆಗಳಂತವನ್ನೇ ನೀವು ಹಾಕಿಕೊಳ್ಳುತ್ತೀರಿ. ನೀವು ಕೂಡ ಅವರಷ್ಟು ಅಥವಾ ಹೆಚ್ಚಾಗಿ ವಿದ್ಯಾವಂತರಾಗಿದ್ದೀರಿ. ಅವರು ತಿನ್ನುವ ಮಾಂಸವಾಗಲಿ, ಕುಡಿಯುವ ಪಾನೀಯಗಳಾಗಲಿ ನೀವು ಕೂಡ ಪುಷ್ಕಳವಾಗಿ ಅರಗಿಸಿಕೊಳ್ಳಲು ಆರಂಭಿಸಿದ್ದೀರಿ. ಎಲ್ಲ ವಿಷಯಗಳಲ್ಲೂ ಅವರನ್ನು ಅನುಕರಿಸುವ ಪ್ರಯತ್ನ ಮಾಡುತ್ತಲೇ ಅವರು ನಮ್ಮ ಧರ್ಮದಲ್ಲಿ ಮೂಗು ತೂರಿಸಬಾರದೆಂದು ಗಲಾಟೆ ಮಾಡುತ್ತಿದ್ದೀರಿ. ಆದರೂ ಈ ದಿನಗಳಲ್ಲಿ ಈ ಧರ್ಮ ಎಲ್ಲಿಯವರೆಗೆ ಉಳಿದಿದೆ? ನಿಮಗಿಷ್ಟ ಬಂದ ಕಡೆ ರೈಲಲ್ಲಿ ದೋಣಿಗಳಲ್ಲಿ ಹೋಗಿ ಇರುತ್ತೀರಿ. ಥೇಟ್ ಅವರಂತೆಯೇ ಬಟ್ಟೆಗಳನ್ನು ತೊಟ್ಟುಕೊಳ್ಳುತ್ತೀರಿ. ಮೈಮೇಲೆ ಅಂಗಿ, ತಲೆಯ ಮೇಲೆ ಟೋಪಿ, ಪ್ಯಾಂಟ್, ಸ್ಯಾಕ್ಸ್, ಬೂಟು, ಕರವಸ್ತ್ರ ಕೈಯಲ್ಲಿ, ಬಾಯಲ್ಲಿ ಪೈಪ್ ನೀವು ಕೂಡ ಖಚಿತವಾದ ದೊರೆಗಳಂತೆ ಸಿದ್ಧವಾಗುತ್ತೀರಿ (ಒಂದೇ ವ್ಯತ್ಯಾಸವೆಂದರೆ ಅವರು ಪೂರ್ತಿ ಬೆಳ್ಳಗಿದ್ದರೆ ನೀವು ಅರ್ಧ ಕಪ್ಪಗೆ ಅರ್ಧ ಬೆಳ್ಳಗೆ ಮಚ್ಚೆಯ ಕುದುರೆಯಂತೆ ಇರುತ್ತೀರಿ). ತಿನ್ನಬಾರದ ಪದಾರ್ಥಗಳನ್ನು ನಿಮಗೆ ಮನಸು ಬಂದಾಗಲೆಲ್ಲ ತಿನ್ನುತ್ತೀರಿ. ಮಾಡಬಾರದ ಕೆಲಸಗಳನ್ನೆಲ್ಲ ಮಾಡುತ್ತೀರಿ. ಮತ್ತೆ ಹಿಂದಕ್ಕೆ ತಿರುಗಿ ನೀವೇ ಧರ್ಮವನ್ನು ಕಾಪಾಡುವ ಕರ್ತರು ಎನ್ನುತ್ತೀರಿ. ಹಾಗೆ ಮಾತಾಡುವುದಕ್ಕೆ ನಿಮಗೆ ಕೊಂಚ ಕೂಡ ನಾಚಿಕೆಯಿಲ್ಲವೇ?

ನೀವು ಹಡಗಿನಲ್ಲಿ ನಿಮ್ಮ ಜಾತಿಯವರೊಬ್ಬರೂ ಇಲ್ಲದ ದೇಶಕ್ಕೆ ಹೋಗುತ್ತೀರಿ. ನೀವು ಅಲ್ಲಿಯವರೊಂದಿಗೆ ಬೆರೆತು ಹೋಗಿ ವರ್ಷಗಟ್ಟಲೆ ಕಾಲವನ್ನು ಅವರ ಬಳಿ ಕಳೆಯುತ್ತೀರಿ. ಆ ಬಳಿಕ ಹಿಂದಕ್ಕೆ ತಿರುಗಿ ಬಂದು ಪಂಚಗವ್ಯ ಪ್ರಾಯಶ್ಚಿತ್ತ ಮಾಡಿಕೊಂಡು ಮತ್ತೆ ಸಿದ್ಧವಾಗುತ್ತೀರಿ, ಹೆಮ್ಮೆಯಿಂದ ಜಾತಿಯ ಪಂಕ್ತಿ ಭೋಜನಕ್ಕೆ.

ನಿಮಗೆ ನೀವು ಎಲ್ಲ ಸರಿಯಾಗಿವೆ ಅಂದುಕೊಳ್ಳುತ್ತೀರಿ. ಆದರೆ ನಿಜಕ್ಕೂ ತಿನ್ನಬಾರದ ಪದಾರ್ಥಗಳನ್ನು ತಿಂದ ಬಳಿಕ ನಿಮ್ಮ ಕರುಳು, ಸ್ನಾನ ಮಾಡಿ ಪ್ರಾಯಶ್ಚಿತ್ತ ಮಾಡಿಕೊಂಡು ಗಂಜಲವನ್ನು ಮೈಗೆ ಬಳಿದುಕೊಂಡ ಕೂಡಲೇ ಶುಭ್ರವಾಗುತ್ತದೆಯೇ? ನಿಮ್ಮ ಧರ್ಮಕ್ಕಾಗಿ ನಿಜಕ್ಕೂ ಅಷ್ಟು ಕಣ್ಣೀರು ವ್ಯಯಿಸಬೇಕೇ? ನಿಜಕ್ಕೂ ನಾವು ಧರ್ಮವನ್ನು ರಕ್ಷಿಸಿಕೊಳ್ಳುವ ಅವಕಾಶದಲ್ಲಿ ಸರ್ಕಾರ ಈ ವಿಷಯದಲ್ಲಿ ಪ್ರವೇಶಿಸಿ ನೀವು ನಿಮ್ಮ ಹಣವನ್ನೆಲ್ಲ ಸಾಲಾಗಿ ಸೀಸೆಗಳ ಮೇಲೆ ವ್ಯಯಿಸುವುದು, ನೀವು ಸಾವಿರಾರು ಕೋಳಿಗಳು, ಬೇರೆ ಪಕ್ಷಿಗಳು, ಪ್ರಾಣಿಗಳು, ಆ ಆಹಾರಕ್ಕಾಗಿ ಸಾಯಿಸುವುದು ಮುಂತಾದುವನ್ನು ನಿಲ್ಲಿಸುವುದರಲ್ಲೇ ಇದೆಯಲ್ಲವೇ!

"ಹೊಸಬ ಮನೆಗೆ ಬಂದರೆ ಅಪಾಯ ಬಂದಂತೆ" ಎಂಬ ಪೂರ್ವದ ಗಾದೆ ನನಗೆ ಬಹಳ ಇಷ್ಟ. ನಾನು ಆ ಗಾದೆಯ ಪ್ರಕಾರವೇ ಪೂರ್ತಿಯಾಗಿ ನಡೆದುಕೊಳ್ಳುವವಳು. ನೀವು ಬಿಳಿಯರ ಅಭ್ಯಾಸಗಳಲ್ಲಿ ಒಂದನ್ನು ತಗುಲಿಸಿಕೊಳ್ಳದೆ ನಮ್ಮ ಧರ್ಮವನ್ನು ಅಕ್ಷರಶಃ ಪಾಲಿಸಿದ್ದರೆ! ಪಾಪ, ಆ ವಿಧವೆಯರು ಕೂಡ ಅವರ ಅದೃಷ್ಟಗಳೊಂದಿಗೆ ಚೆನ್ನಾಗುತ್ತವೆಯೆಂದು ಅಂದುಕೊಂಡು ಸುಮ್ಮನಾಗುತ್ತಿದ್ದರು. ಈಗ ಮನು ಹೇಳಿದ್ದೆಲ್ಲವೂ ಬದಲಾಗಿ ಹೋಗಿದೆ, ಗಾಳಿಯಲ್ಲಿ ಹೊರಟು ಹೋಗಿದೆ. ಈಗ ಉಳಿದಿದ್ದೇನು? ಬಿಳಿಯರು ನಿಮಗಿಂತಲೂ ಸಾವಿರಪಾಲು ಮೇಲು. ಅವರು ಮನಸ್ಸು ಬಂದಂತೆ ನಮ್ಮ ಅಭ್ಯಾಸಗಳಲ್ಲಿ ಒಂದನ್ನಾದರೂ ಅನುಕರಿಸುತ್ತಾರಾ? ಅದಕ್ಕೆ ವಿರುದ್ಧವಾಗಿ ನಿಮ್ಮ ವೇಷಗಳನ್ನು ನೋಡಿ ಅವರು ನಗುತ್ತಾರೆ? ನೀವೇ ಯೋಚಿಸಿರಿ. ಅಯ್ಯೋ ಕತ್ತೆಗಳಿರಾ! ಯಾರಾದರೂ ದೂರ ಪ್ರದೇಶದಿಂದ ನಮ್ಮ ಪೂರ್ವಿಕರಿಂದ ತಿರುಗಿ ನೋಡುವುದಕ್ಕೆ ಬಂದರೆ ಅವರು ಈ ಪ್ರದೇಶವನ್ನು ನಾಡನ್ನು ಕೂಡ ಗುರುತು ಹಿಡಿಯುವುದಿಲ್ಲ. ಕಳೆದ ಐವತ್ತು ವರ್ಷಗಳಲ್ಲಿ ಬಂದ ಕಲೆ, ಶಿಕ್ಷಣ ಉಳಿದ ದೊಡ್ಡ ಬದಲಾವಣೆಗಳನ್ನು ನೀವೇ ಮನೆ ಬಿಟ್ಟು ಓಡಿ ಹೋಗಿ ಕೆಲವು ವರ್ಷಗಳ ಬಳಿಕ ಹಿಂದಿರುಗಿ ಬಂದಾಗಲೂ ಗುರುತು ಹಿಡಿಯಲಾರಿರಿ.

ಅವೇನಂತೀರಾ? ಪೂರ್ವದಲ್ಲಿ ನೀವು ಪುರಾಣ, ವೇದಗಳನ್ನು ಕೇಳುವ ಪ್ರದೇಶದಲ್ಲಿ ಈಗ ದೊಡ್ಡದಾಗಿ ಎಬಿಸಿಡಿಗಳನ್ನು ಓದುತ್ತಿದ್ದೀರಿ. ಆ ದಿನಗಳಲ್ಲಿ ಮನುಷ್ಯರು ಅವರ ತಾಕತ್ತಿಗೆ ತಕ್ಕಂತೆ ಪೂರ್ವದ ಪದ್ಧತಿಯಲ್ಲಿ ಅಲಂಕರಿಸಿಕೊಳ್ಳುತ್ತಿದ್ದರೂ ಉಲ್ಲನ್‌ಶಾಲುಗಳು, ಆನಿಕೊಂಡು ಕುಳಿತುಕೊಳ್ಳುವುದಕ್ಕೆ ದಿಂಡುಗಳು, ಚಿಕ್ಕ ಚಿಕ್ಕ ಮಣೆಗಳು ಮುಂತಾದುವನ್ನು ಬಳಸುತ್ತಿದ್ದರು. ಅಡಿಗೆ ಸಾಮಗ್ರಿಗೆ ಮೆಟಲ್ ಪಾತ್ರೆಗಳು, ತಟ್ಟೆಗಳು, ಕಂಚು ದೀಪಗಳು, ಎಣ್ಣೆಯಲ್ಲಿ ಬಟ್ಟೆಯ ತುಂಡುಗಳನ್ನು ನೆನೆಸಿ ಹತ್ತಿಸಿದ ದೊಡ್ಡ ದೀವಟಿಗೆಗಳು ಇರುತ್ತಿದ್ದವು. ಅವೇನೂ ಇಲ್ಲದೆ ಈಗೇನೋ ಕುರ್ಚಿಗಳು, ಮಂಚಗಳು, ಮೇಜುಗಳು, ನಮ್ಮ ಪಾತ್ರೆಗಳಿಗೆ ಬದಲಾಗಿ ಕಪ್ಪು ಸಾಸರ್‌ಗಳು, ಚಾಕು ಕತ್ತರಿಗಳು, ಚಮಚಗಳು, ಸೀಮೆ ಎಣ್ಣೆ ದೀಪಗಳು, ಚಂದ್ರಿಕೆ ಆಕಾರದಲ್ಲಿರುವ ದೀಪಗಳು, ಓದುವುದಕ್ಕೆ ಬೇರೆ ದೀಪಗಳು. ಪೂರ್ವದಲ್ಲಿ ವರಾಂಡಗಳು, ಒಳಗೆ ಅಂಗಳವಲ್ಲದೆ ಈಗ ಎಲ್ಲ ಬಂಗಲೆಗಳೇ. ಸರಿ, ಈಗ ನಾವು ಹೊರಗೆ ಹೋಗೋಣ. ಬಹುಶಃ ನಿಮ್ಮ ಹಳೆಯ ಕಾಲದ ನಂಟರು ಈ ಪ್ರದೇಶವನ್ನು, ಪೂರ್ವದ ಮನೆಗಳನ್ನು ಗಮನಿಸಿಯಾದರೂ ಗುರುತು ಹಿಡಿಯುತ್ತಿದ್ದರೇನೋ! ಆದರೆ ಮನುಷ್ಯರು ಹಾಕಿಕೊಳ್ಳುವ ದಿರಿಸನ್ನು ಗಮನಿಸಿ ಆತ ಈಗೇನೂ ಗುರುತು ಹಿಡಿಯಲಾರ. ಏಕೆಂದು ನೀವು ಕೇಳಬಹುದು? ಮೊದಲು ಮನುಷ್ಯರ ರುಮಾಲನ್ನು ನೋಡಿದೆವೆಂದರೆ ಅದನ್ನು ಯಾವ ರೀತಿಯಲ್ಲಾದರೂ ಸರಿ ಸುತ್ತಿಕೊಳ್ಳುತ್ತಿದ್ದಾರೆ. ಇಲ್ಲದಿದ್ದರೆ ಟೋಪಿಗಳು, ಅದೂ ಇಲ್ಲದಿದ್ದರೆ ಕರಿಯದೋ ಬಿಳಿಯದೋ ಉದ್ದನೆಯ ಬಟ್ಟೆಯ ತುಂಡುಗಳನ್ನು ತೆಗೆದುಕೊಂಡು ಕೈಗೆ ಬಂದ ರೀತಿಯಲ್ಲಿ ತಲೆಗೆ ಸುತ್ತಿಕೊಳ್ಳುತ್ತಾರೆ. ಹತ್ತು ಇಪ್ಪತ್ತು ವರ್ಷಗಳ ಕೆಳಗೆ ಹಾಗೆ ಯಾವುದೋ ಸಿಕ್ಕಿದ್ದ ಬಟ್ಟೆಯನ್ನು ತಲೆಗೆ ಸುತ್ತಿಕೊಳ್ಳುವುದು ತೆಲುಗಿನವರಲ್ಲಿ,

ಕುಟುಂಬದಲ್ಲಿ ಯಾರಾದರೂ ಸತ್ತು ಹೋದಾಗ ತಪ್ಪದೆ ಕಾಣಿಸುತ್ತಿತ್ತಲ್ಲವೇ? ಪೂರ್ವದ ದಿನಗಳಲ್ಲಿ ತಲೆಗೆ ಬಟ್ಟೆ ಸುತ್ತಿಕೊಂಡ ವಿಧಾನವನ್ನು ಗಮನಿಸಿ ಒಬ್ಬ ವ್ಯಕ್ತಿ ತೆಲುಗಿನವನೋ ಅವನ ಕುಟುಂಬದಲ್ಲಿ ಈ ನಡುವೆ ಯಾರೋ ಸತ್ತು ಹೋಗಿದ್ದರೆಂದೋ ಹೇಳುತ್ತಿದ್ದರು. ಈ ದಿನಗಳಲ್ಲಿ ಎಲ್ಲಿ ನೋಡಿದರೂ ಅವೇ ರುಮಾಲುಗಳು, ಕೋಟುಗಳು, ಅಂಗಿಗಳು, ಚೈನಿಗೆ ನೇತಾಡುವ ಗಡಿಯಾರಗಳು. ಒಬ್ಬ ಮನುಷ್ಯ ಯಾರೆಂದು ನೀವು ಹೇಗೆ ಹೇಳಬಲ್ಲಿರಿ? ಕೆಳಗೆ ನೋಡಿದರೆ ನಿಮಗೆ ಕಾಲ ಮೇಲೆ ಪ್ಯಾಂಟ್, ಬೂಟ್, ಸ್ಯಾಕ್ಸ್ ಕಾಣಿಸುತ್ತವೆ. ಅವನು ಮುಸ್ಲಿಮನೇ? ಪಾರಸಿಯವನೇ? ಅಥವಾ ಬಿಳಿ ದೊರೆಯಂತವನೇ? ನೀವು ಹೋಗಿ ಅವನನ್ನೇ ಕೇಳಬೇಕು ಅವನಾರೆಂದು?

ಬಟ್ಟೆಗಳ ಬಗ್ಗೆ ಈ ವ್ಯವಹಾರ. ನೀವು ಅವರ ಕಚೇರಿಯ ಸುತ್ತಲೂ ತಿರುಗುತ್ತೀರಲ್ಲಾ! ಸರಿ ಹೋಗಲಿ, ಅವರಂತೆಯೇ ಬಟ್ಟೆಗಳನ್ನು ತೊಟ್ಟುಕೊಳ್ಳಿರಿ. ಬೆಳ್ಳಗೆ ಇರುವವರಿಗಾದರೆ ಅವು ಚೆನ್ನಾಗಿ ಒಪ್ಪುತ್ತವೆ. ಆದರೆ ಇದ್ದಿಲಿನಷ್ಟು ಕಪ್ಪಗಿರುವ ವ್ಯಕ್ತಿಗೆ ಅವನ್ನು ಹಾಕಿಕೊಂಡರೆ ನೋಡುವುದಕ್ಕೆ ಅವನಾವುದೋ ವಿಚಿತ್ರ ವೇಷ ಹಾಕಿಕೊಂಡಂತಿರುತ್ತದೆ. ಅದು ವೇಷಧಾರಣೆ ಯಲ್ಲಿರುವ ವಿಚಿತ್ರ. ಕುಡಿಯುವ ಪಾನೀಯಗಳಲ್ಲಿ ಇನ್ನೊಂದು ವಿಚಿತ್ರ ಇದೆ. ಒಬ್ಬ ಬಿಳಿ ದೊರೆ ಸಾಮಾನ್ಯವಾಗಿ ಒಂದು ಸೀಸೆಯನ್ನು ಎರಡು ದಿನ ಬಳಸುತ್ತಾನೆ. ನಮ್ಮವರಿಗೆ ಮಾತ್ರ ನಿಮಿಷಕ್ಕೆ ಒಂದು ಸೀಸೆ ಬೇಕು. ಅಲ್ಲದೆ ಊಟ ಮಾಡುವುದಕ್ಕೆ ಒಂದು ಪಾರಿವಾಳದ ಜೊತೆ ಕೂಪಾ ಬೇಕು. ಆ ಬಳಿಕ ಹೊರಡುತ್ತಾರೆ ಧರ್ಮದ ಬಗ್ಗೆ ತಾವೆಷ್ಟು ತಾಪತ್ರಯ ಪಡುತ್ತಿದ್ದಾರೋ, ನಮ್ಮ ಧರ್ಮದ ವಿಷಯದಲ್ಲಿ ಇನ್ನೊಬ್ಬರ ಪ್ರವೇಶ ಎಷ್ಟು ಅನಗತ್ಯವೋ ಸಾರಿ ಹೇಳುವುದಕ್ಕೆ. ಅಂಥವರನ್ನು ಏನೆನ್ನಬೇಕು ನಿಜಕ್ಕೂ?

ನೋಡಿರಿ, ಅವರು ನಿಮ್ಮ ದೇಶಕ್ಕೆ ನಿಮ್ಮ ಜನರಿಗೆ ಬೇಕಾದ ವಿದ್ಯೆಗಳನ್ನೆಲ್ಲ ತಂದಿದ್ದಾರೆ. ಅವರು ಮನುಷ್ಯರಾಗಿ ಹೇಗೆ ಬದುಕಬೇಕೋ ನಿಮಗೆ ಹೇಳಿದ್ದಾರೆ. ಇದಕ್ಕೂ ಮುನ್ನ ನೀವು ಮನುಷ್ಯರೇ ಆದರೂ ಅಜ್ಞಾನದಿಂದ, ಬುದ್ಧಿಹೀನತೆಯಿಂದ ಕಾಡುಮನುಷ್ಯರಾಗಿ ಬದುಕು ತ್ತಿದ್ದಾರೆ. ನಿಮಗೆ ತಿಳಿದದ್ದೆಲ್ಲ ನೀನೊಂದು ಹಾಕಿದರೆ ನಾನೊಂದು ಹಾಕುತ್ತೇನೆ ಎನ್ನುವುದು. ಅಂದು ಮರಾಠಾ ರಾಜ್ಯದಲ್ಲಿ ಹೋರಾಟ ವಿಪ್ಲವಗಳಿರುತ್ತಿದ್ದವು. ಅವನ್ನೆಲ್ಲ ನಿಲ್ಲಿಸಿ ನಿಮಗೆ ಶಿಕ್ಷಣ ಕೊಡುವುದಕ್ಕೆ ಅವರು ಕೋಟ್ಯಂತರ ರೂಪಾಯಿ ಖರ್ಚು ಮಾಡಿದರು. ಅವರು ಎಲ್ಲ ಬಗೆಯ ಶಿಕ್ಷಣ, ಕಲೆ, ಕಾನೂನು, ನಿಬಂಧನೆಗಳನ್ನು ತಂದು, ಕಚೇರಿಗಳನ್ನು, ನ್ಯಾಯ ಸ್ಥಾನವನ್ನು ರೂಪಿಸಿ ಎಲ್ಲರನ್ನೂ ಶಾಂತಿ ಸುಖದಿಂದ ಜೀವಿಸುವಂತೆ ನೋಡಿದರು. ಬೆಟ್ಟಗಳನ್ನು ಕಡಿದು ರೈಲು ಮಾರ್ಗಗಳನ್ನು ಅಳವಡಿಸಿ ರೈಲುಗಳು - ಅವೇ ಅಗ್ನಿ ರಥಗಳು- ಓಡುವುದಕ್ಕೆ ವ್ಯವಸ್ಥೆ ಮಾಡಿದರು. ಪೂರ್ವ ಕಾಲದಲ್ಲಿ ಎಂದೋ, ಸುಮಾರು ದ್ವಾಪರ ಯುಗದಲ್ಲಿ ಮನುಷ್ಯರು ವೀರರೆಲ್ಲ, ಕಾರ್ಲೇ, ನಾಸಿಕ್‌ನಂಥ ಕಡೆ ದೊಡ್ಡ ಗುಹೆಗಳನ್ನು ನಿರ್ಮಿಸಿದರು. ಅವು ನನಗೆ ತಿಳಿದಿರುವವು. ಅವಲ್ಲದೆ ಭೂಮಿಯ ಒಳಗೆ ನೂರಾರು ಸಾವಿರಾರು ಗುಹೆಗಳಿವೆ. ಈ ದಿನಗಳಲ್ಲಿ ಜನರ ಅಭಿಪ್ರಾಯ ಏನೆಂದರೆ ಪಾಂಡವರು

ಅಜ್ಞಾತವಾಸ ಮಾಡುವ ದಿನಗಳಲ್ಲಿ ಈ ಗುಹೆಗಳನ್ನು ತೋಡಿದರೆಂದು. ಯಾರಾದರೂ ಪಾಂಡವರನ್ನಾಗಲಿ, ದ್ರೌಪದಿಯನ್ನಾಗಲಿ ನೋಡಿದ್ದಾರಾ? ಇಂದಿನ ಪ್ರಭುತ್ವವೇ ನಿಜವಾದ ಪಾಂಡವರೆಂದು ಹೇಳಬೇಕು. ರಾಮವಿಜಯವೆಂಬ ಕಾವ್ಯದಲ್ಲಿ 'ಶ್ರೀಧರಸ್ವಾಮಿ' ಇಂದ್ರಜಿತ್ ದೇವನಿಗೆ ಅಗ್ನಿಯಿಂದ ಕೂಡಿದ ಅರ್ಪಣೆಯನ್ನು ಮಾಡಿದನೆಂದು ಅದಕ್ಕೇ ತನಗಾಗಿ ಅಗ್ನಿರಥ ನಿರ್ಮಿಸಿಕೊಂಡನೆಂದು ಬರೆದ. ಆದರೆ ಆ ಅಗ್ನಿರಥ ಈ ದಿನಗಳಲ್ಲಿರುವಂತೆ ಲೆಕ್ಕವಿಲ್ಲದಷ್ಟು ಅತಿ ಭಾರವಾದ ವಸ್ತುಗಳನ್ನು ಗಾಳಿಯಂತೆ ಹೇಳಿದ ವೇಳೆಗೆ ಹೇಳಿದ ಕಡೆಗೆ ತೆಗೆದುಕೊಂಡು ಹೋಗುವಂತಹದಲ್ಲ. ಇವು ನಾವು ವರ್ಣಿಸಲಾಗದ ಎಷ್ಟೋ ಅದ್ಭುತವಾದ ವಿಸ್ಮಯಗಳಲ್ಲಿ ಕೆಲವು ಮಾತ್ರವೇ. ಒಂದು ದಿನ ರಾತ್ರಿ ಹೊತ್ತು ಬೆನ್ನಿನ ಮೇಲೆ ಬೇಕಾದಷ್ಟು ಬೆಳ್ಳಿಯನ್ನು ಹೊತ್ತುಕೊಂಡು ಹೊರಗೆ ಹೋಗಲು ಪ್ರಯತ್ನಿಸಿರಿ, ನಿಮಗೇನು ಭಯವಿಲ್ಲ. ನಿಮ್ಮ ಸುಖ ಸಂತೋಷಗಳಿಗಾಗಿ ಈ ಸರ್ಕಾರ ಎಷ್ಟೋ ಮಾಡಿದೆ. ಅವರೇ ಮತ್ತಷ್ಟು ಮುಂದಕ್ಕೆ ಹೋಗಿ ನಮ್ಮ ಧರ್ಮದಲ್ಲಿ ಬದಲಾವಣೆಗಳನ್ನು ತಂದು, ಅಬಲೆಯರಾದ ಮಹಿಳೆಯರನ್ನು ಸಬಲೆಯರಾಗಿ ಮಾಡದೆ ಹೋದರೆ, ಅವರನ್ನು ಈ ಮೋಸಭರಿತವಾದ ಧರ್ಮ, ಅದು ಸೃಷ್ಟಿಸುವ ದುಃಖದಿಂದ ಕಾಪಾಡದೆ ಹೋದರೆ, ಇನ್ನಾರು ಇವೆಲ್ಲವನ್ನು ಮಾಡುತ್ತಾರೆ?

'ವೈಭವ್' ಸಂಪಾದಕ ಏನೆನ್ನುತ್ತಾನೆ ಎಂದರೆ ಸರ್ಕಾರ ಇಲ್ಲಿಯವರೆಗೆ ಮಾಡಿದ ಕಾನೂನುಗಳೆಲ್ಲ ಕಟ್ಟಿಗೆಯೊಂದರ ತೆಳುವಾದ ಮೊನೆಯಂತವು ಮಾತ್ರವೇ ಎಂದು. ಆತ ಬರೆಯುವುದನ್ನು ಗಮನಿಸಿ ನೋಡಿದರೆ ನಿಮ್ಮ ಗಂಡಸರೇ ಮೋಸಗಾರರು, ದ್ರೋಹಿಗಳು. "ವಿಧವೆಯರ ತಲೆಗೂದಲನ್ನು ನಾವು ಬೋಳಿಸುವುದನ್ನು ಬಿಡಿಸಿದರೆ, ಈ ಸರ್ಕಾರ ನೂರಾರು ಭಾವನಾಖಾನಿಯಂಥ ವೇಶ್ಯಾಗೃಹಗಳನ್ನು ನಿರ್ಮಿಸುತ್ತದೆಂದು ನಿಮ್ಮ ದೇವರುಗಳು ಕೂಡ ಅವರನ್ನೇ ಕಣ್ಣು ಪಾಪೆಯಂತೆ ಕಾಪಾಡುತ್ತ, ಆಶೀರ್ವಾದವನ್ನು ಅವರ ಮೇಲೆಯೇ ಸುರಿಸುತ್ತಾರೆ. ಎಷ್ಟೋ ಹೊಸ ನ್ಯಾಯಾಲಯಗಳನ್ನು ನಿರ್ಮಿಸಿ 'ವಿಜಯಲಕ್ಷ್ಮಿ' ಕೇಸಿನಂಥ ವನ್ನು ನೋಡಬೇಕಾಗಿ ಬರುತ್ತದೆ". ನಿಜಕ್ಕೂ ಸರ್ಕಾರ ವೇಶ್ಯಾಗೃಹಗಳನ್ನಲ್ಲ, ಆ ಸ್ತ್ರೀಯರಲ್ಲಿ ಪ್ರತಿಯೊಬ್ಬರಿಗೂ ಒಂದು ಸೊಗಸಾದ ಮನೆ, ನಿಮ್ಮಂತಹವರನ್ನು ಹಾಕುವುದಕ್ಕೆ ಒಂದು ದೊಡ್ಡ ಕಾರಾಗೃಹವನ್ನು ನಿರ್ಮಿಸಬೇಕು. ಹೇಗಂತೀರಾ? ಒಂದು ವೇಳೆ ಸರ್ಕಾರ ವಿಧವಾ ವಿವಾಹವನ್ನು ಸಾಧ್ಯಗೊಳಿಸಿತೆಂದುಕೊಳ್ಳಿರಿ. ಆಗ ಈ ವಿಧವೆಯರಲ್ಲಿ ಪ್ರತಿಯೊಬ್ಬರೂ ತಮ್ಮ ಹೊಸ ಗಂಡಂದಿರೊಂದಿಗೆ ಸಂತೋಷದಿಂದ ತಮ್ಮ ಗೃಹ ಸಾಮ್ರಾಜ್ಯಗಳಲ್ಲಿ ಜೀವಿಸುತ್ತ ಮಾನಸಿಕವಾಗಿ ದೃಢಪಟ್ಟು ಬ್ರಿಟಿಶ್ ಸರ್ಕಾರಕ್ಕೆ ಜೀವನ ಪರ್ಯಂತ ಅನುಯಾಯಿ ಗಳಾಗುತ್ತಾರೆ. ಆಗ ಸರ್ಕಾರ ಈ ಸಿಂಹಗಳಂಥ, ಮೇಕೆಗಳಂಥ ಗಂಡಸರನ್ನು ಅವರಲ್ಲಿ ಉಕ್ಕುವ ಕಾಮದಿಂದ, ಅವರ ಕುಡಿತದಿಂದ ಕೆಟ್ಟು ಹೋದ ತಲೆಗಳಿಂದ, ಮಾಂಸ ತುಂಬಿದ ಹೊಟ್ಟೆಗಳಿಂದ ಕೆಟ್ಟಿರುವ ಅವರನ್ನು ದೊಡ್ಡ ಕಾರಾಗೃಹದಲ್ಲಿ ಹಾಕಬೇಕು. ಈ ಪಶುಗಳಂತಹ ಮನುಷ್ಯರಿಂದ ಕಠಿಣವಾದ ಕೆಲಸ ಮಾಡಿಸಿ, ಪ್ರಸ್ತುತ ಅಧಿಕ ಶ್ರಮದಿಂದ ತೊಂದರೆ ಪಡುತ್ತಿರುವ ಎಮ್ಮೆಗಳು, ಕೋಣಗಳು, ಕುದುರೆಗಳು, ಕತ್ತೆಗಳನ್ನು ಬಿಟ್ಟು ಸರ್ಕಾರದವರು

ಬಹಳ ಹಣವನ್ನು ಉಳಿಸಬಹುದು. ಅವರು ಆ ಕೆಲಸ ಮಾಡಿದರೆ ತಮ್ಮ ಖಜಾನೆಯನ್ನು ತುಂಬಿಕೊಳ್ಳಬಹುದು, ಆ ಕೈಯಿಂದಲೇ ಪುಣ್ಯ ಗಳಿಸಿಕೊಳ್ಳಬಹುದು.

ಒಬ್ಬ ತಾಯಿ ತಂದೆ ತಮ್ಮ ಮಗಳನ್ನು ನಿಮ್ಮ ಕಾಲು ತೊಳೆದು ಧಾರೆಯೆರೆದುಕೊಟ್ಟ ಮೇಲೆ ಆಕೆಯ ಸಂಗತಿ ಅಲ್ಲಿಗೆ ಮುಗಿಯಿತು. ಒಂದು ಸಾರಿ ಆಕೆ ಮನೆ ಬಿಟ್ಟು ಹೋದ ಮೇಲೆ ಮತ್ತೆ ಅವರಿಗೆ ಕಾಣುವುದಿಲ್ಲ. ದುಃಖದಾಯಕವಾದ ಸಂಗತಿಯೇನೆಂದರೆ ಸಹಜಸಿದ್ಧವಾದ ಮಮಕಾರದಿಂದ ಆ ತಾಯಿ ತಂದೆ ತಮ್ಮ ಮಗಳನ್ನು ಪ್ರೀತಿಯಿಂದ, ಅಕ್ಕರೆಯಿಂದ ತಮ್ಮ ಕೈಯಲ್ಲಾಗುವಷ್ಟು ಪೋಷಿಸಿ ಬೆಳೆಸಿ ದೊಡ್ಡವಳನ್ನಾಗಿ ಮಾಡುತ್ತಾರೆ. ಆಕೆಗೆ ಜೀವನದಲ್ಲಿ ಒಳ್ಳೆಯ ಸ್ಥಾನ, ಸಂತೋಷ ದಕ್ಕಬೇಕೆಂದು ಆಕೆಗೆ ಹೊಸದಾಗಿ ಬಂದ ಅತ್ತೆ ಮಾವಂದಿರು ಆಕೆಯನ್ನು ಪ್ರೀತಿಯಿಂದ ನೋಡಬೇಕೆಂಬ ಆಸೆಯಿಂದ ಎಷ್ಟೋ ಕಷ್ಟಪಟ್ಟು ಆಕೆಯ ವಿವಾಹ ಪ್ರಯತ್ನವನ್ನು ಮಾಡುತ್ತಾರೆ. ಆಕೆ ಅದೃಷ್ಟವಂತಳಾದರೆ ಎಲ್ಲವೂ ಚೆನ್ನಾಗಿಯೇ ಇರುತ್ತದೆ. ಒಂದು ವೇಳೆ ಇಲ್ಲದೆ ಹೋದರೆ! ಜೀವನಪರ್ಯಂತ ಆಕೆಯನ್ನು ತಾಯಿ ತಂದೆಯರು ಪ್ರಾಣಕ್ಕಿಂತಲೂ ಹೆಚ್ಚಾಗಿ ನೋಡಿಕೊಂಡರು. ಯಾವತ್ತೂ ಅವರಿಂದ ಸಣ್ಣ ಏಟು ತಿನ್ನದ ಆಕೆಗೆ ನಿಮ್ಮ ಮುಷ್ಟಿಘಾತಗಳು ಬೆನ್ನಿನ ಮೇಲೆ ಬಿದ್ದರೆ ಹೇಗಿರುತ್ತದೆ? ಆಕೆಯ ತಾಯಿ ತಂದೆಯರಿಗೆ ಹೇಗನ್ನಿಸುತ್ತದೆ? ನಾವು ಈ ಘೋರ ಸತ್ಯವನ್ನು ಬರೆದರೆ ರಾಮಾಯಣದಷ್ಟು ದೊಡ್ಡ ಗ್ರಂಥ ಸಿದ್ಧವಾಗುತ್ತದೆ.

ಒಂದು ವೇಳೆ ನೀವು ನಿಮ್ಮ ಹೆಂಡತಿಯನ್ನು ಚೆನ್ನಾಗಿ ನೋಡಿಕೊಂಡರೂ ಅದು ಸಾಮಾನ್ಯವಾಗಿ ಪರರ ದೃಷ್ಟಿಗೇ ಪರಿಮಿತ. ನೀವು ಶರೀರದ ಮೇಲ್ಭಾಗದಲ್ಲಿ ಅಂದವಾದ ಕೆಂಪು ಬಣ್ಣದ ನೂಲು ಜರಿ ಸೇರಿಸಿ ಹಾಕಿದ ಅದ್ಭುತವಾದ ಅಂಗಿ ಮೇಲೆ ಹಾಕಿಕೊಂಡು, ಕೆಳ ಭಾಗದಲ್ಲಿ ಹರಿದ ಹಳೆಯ ದುಪ್ಪಟಿ ಸುತ್ತಿಕೊಳ್ಳುವಂಥವರು. ನೀವು ಆಕೆಯನ್ನು ಮುಡಿಯಿಂದ ಅಡಿಯವರೆಗೆ ಒಡವೆಗಳಿಂದ ತುಂಬಬಹುದು. ಆಭರಣಗಳಿಂದ ಕಟ್ಟಿದ ಮನೆಯಲ್ಲಿಡಬಹುದು. ಆದರೆ ಆಕೆಯನ್ನು ನೀವು ಪ್ರೀತಿಯಿಂದ ನೋಡಿಕೊಳ್ಳದಿದ್ದರೆ ಆಕೆ ದುಃಖವನ್ನು ಬಿಟ್ಟು ಬೇರೆನನ್ನೂ ಅನುಭವಿಸುವುದಿಲ್ಲ. ಅದು ಎಂಥಾ ದುಃಖವೆಂದರೆ ಅದು ಒಬ್ಬರು ವರ್ಣಿಸಲಾರದ್ದು, ಅನುಭವಿಸಿ ಮಾತ್ರವೇ ತಿಳಿದುಕೊಳ್ಳಬೇಕಾದದ್ದು.

ಮಹಿಳೆಯರು ಈ ಜಗತ್ತಿನಲ್ಲಿ ಎಲ್ಲ ಬಗೆಯ ಶಾರೀರಿಕ ಶ್ರಮ, ಕಷ್ಟ, ಹಸಿವು, ದಾಹ, ಹಿಂಸೆ, ಹೊಡೆತವನ್ನು ಸಹಿಸುತ್ತಿರುತ್ತಾರೆ. ಅವರು ನಿಮ್ಮಿಂದ ಬಯಸುವುದು ಒಂದು ಒಳ್ಳೆಯ ಮಾತು ಮಾತ್ರವೇ. ನಿಜವೇ, ನೀವು ಹೊರಗೆ ಹೋಗಿ ಹಣ ಸಂಪಾದಿಸಿಕೊಂಡು ಬರಬೇಕು. ಆದರೆ ಆಕೆ ಮನೆ ನಡೆಸಬೇಕು, ನಿಮ್ಮ ಮಾತು ಚಾಚೂ ತಪ್ಪದಂತೆ ಪಾಲಿಸಬೇಕು, ಎಲ್ಲ ವೇಳೆಯಲ್ಲೂ ವಿನಯದಿಂದ ಇರಬೇಕು, ಅಜ್ಞಾನದಲ್ಲಿ ಇದ್ದು, ಆಕೆಯ ಶರೀರದ ಆನಂದವೆಲ್ಲ ಚಿಕ್ಕ ಚಿಕ್ಕ ಚೂರುಗಳಾಗಿ ಆಕೆಯ ಮೂಳೆಗಳು ಕರಗಿ ಹೋಗಿ, ಆಕೆಯ ರಕ್ತ ನೀರಾಗಿ ಹೋಗುವವರೆಗೆ ಅಧಿಕ ಶಾರೀರಿಕ ಶ್ರಮ ಪಡುತ್ತ, ಆಕೆಯ ಕಣ್ಣು ಮಾತ್ರ ನಿಮ್ಮ ಮುಖದ ಮೇಲೆಯೇ ಇಟ್ಟುಕೊಂಡು ತಿರುಗಬೇಕು. ಆಕೆಯೆಡೆಗೆ ನೀವು ಆದರದಿಂದ

ನೋಡಿ, ಒಂದು ಚಿಕ್ಕ ನಗುವಿನಲ್ಲಿ ನಿಮ್ಮ ಹಲ್ಲು ತಳಕ್ಕನೆ ಮಿಂಚಿದರೆ ಅದೇ ಆಕೆಗೆ ಅಲೌಕಿಕ ಆನಂದ. ಅದೇ ಆಕೆಗೆ ಸ್ಫೂರ್ತಿ. ನೀವು ವಹಿಸುವ ಮತ್ತಷ್ಟು ಕೆಲಸಗಳನ್ನು ಭುಜದ ಮೇಲೆ ಹಾಕಿಕೊಂಡು, ಹೊಸದಾಗಿ ಕಲಿತುಕೊಂಡು ಮತ್ತೆ ಮಾಡುತ್ತಾಳೆ. ಈ ಮುನ್ನ ತಿಳಿದ ಗಾದೆಯನ್ನೇ ಗಮನಿಸಿರಿ. "ಗಂಡನ ಹೊಗಳಿಕೆಯೇ ಜೇನು, ಅದೇ ಅಮೃತ" ಎಂದು. ಆಕೆ ಒಂದು ಅಂದವಾದ ಕಸೂತಿ ಕೆಲಸ ಮಾಡಿದ ಬಟ್ಟೆಯನ್ನು ತೆಗೆದುಕೊಂಡು ಬಂದು ತೋರಿಸಿದರೂ, ನಿಮಗಾಗಿ ಒಳ್ಳೆಯ ಕರಿದ ತಿಂಡಿ ಮಾಡಿ ಬಡಿಸಿದರೂ ನೀವು ಹೀಗೆ ಅಂದಿರಿ ಎಂದುಕೊಳ್ಳಿರಿ. "ಅರೇ, ಇದು ನಿಜವಾಗಿ ನೀನು ಮಾಡಿದೆಯಾ? ನೋಡು, ಮತ್ತೆ ಅಷ್ಟು ಕಷ್ಟಪಟ್ಟು ಕೆಲಸ ಮಾಡಬೇಕಾಗಿಲ್ಲ. ನಿನಗೆ ಮತ್ತೆ ನಡು ನೋವು ಬರಬಹುದು. ಕಣ್ಣಿಗೆ ನೋವಾಗುವುದಿಲ್ಲವೇ! ನಮ್ಮ ಮಕ್ಕಳು ಇದರಿಂದ ತೊಂದರೆ ಅನುಭವಿಸಬಾರದು. ಡಾಕ್ಟರ್ ಬಳಿಗೆ ನೀನು ಹೋಗದಂತೆ ಆರೋಗ್ಯವನ್ನು ನೋಡಿಕೊಳ್ಳಬೇಕಲ್ವಾ! ಕೊಂಚ ಕೆಲಸ ಕಡಿಮೆ ಮಾಡಿಕೋ!" ಇಲ್ಲದೆ ಹೋದರೆ ನೀವು ಸ್ನೇಹಿತರೊಂದಿಗೆ ಇದ್ದೀರಿ ಎಂದುಕೊಳ್ಳಿರಿ. "ನಿಮಗೆ ಗೊತ್ತಾ! ನಾನು ಬಹಳ ಅದೃಷ್ಟವಂತ. ಮನೆಯಲ್ಲಿ ಯಾವ ವಿಷಯದ ಬಗ್ಗೆಯೂ ನಾನು ಗಾಬರಿಪಡಬೇಕಾದ ಅಗತ್ಯವಿಲ್ಲ. ನಮ್ಮ ಮನೆಗೆ ಹೋಗಿ ಅಲ್ಲಿ ಕಾಲಕ್ಷೇಪ ಮಾಡೋಣ ನಡೆಯಿರಿ. ನಮ್ಮ ಮನೆಯಷ್ಟು ಹಾಯಾಗಿರುವ ಮನೆ ಇನ್ನೊಂದು ಸಿಗುವುದು ಕಷ್ಟ" ಎಂದಿರಿ ಎಂದುಕೊಳ್ಳಿರಿ. ಪ್ರೀತಿಯಿಂದ ಕೂಡಿದ ಆ ಹೊಗಳಿಕೆ ಯನ್ನು ಕೇಳಿದ ಕೂಡಲೇ ಚಿಕ್ಕಂದಿನಿಂದ ಆಕೆ ಪಟ್ಟ ಸಂಕಟಗಳೆಲ್ಲ, ನೀವು ಆಕೆಯನ್ನು ಹೊಡೆದು ಬಡಿದು ಬಯ್ದ ಸಂಗತಿಗಳನ್ನೆಲ್ಲ ಮರೆತುಹೋಗುತ್ತಾಳೆ. ಆಕೆ ತನ್ನ ಸ್ವಾಮಿ, ಪ್ರಭು ಮಾತಾಡಿದ ಮಾತುಗಳು ಕೇಳಿ, ಭೂಮಿಯ ಮೇಲೆ ತನ್ನಷ್ಟು ಅದೃಷ್ಟವಂತಳು ಇಲ್ಲವೆಂದುಕೊಳ್ಳುತ್ತಾಳೆ. ಆಕೆಯ ಹೃದಯ ಮಮಕಾರದಿಂದ ಉಕ್ಕುತ್ತದೆ. ಆಕೆ ನೀವು ತೋರಿಸುವ ಚಿಕ್ಕ ಚಿಕ್ಕ ಪ್ರೇಮಕ್ಕಾಗಿ ಆಸೆಯಿಂದ ಎದುರು ನೋಡುತ್ತ ಇರುತ್ತಾಳೆ. ನೀವೇನೋ ಆಕೆಯನ್ನು ಯಾವಾಗಲೂ ಅವಮಾನಕರವಾದ ಹೆಸರುಗಳಿಂದ ಕರೆಯುತ್ತಿರುತ್ತೀರಿ. ಈ ಮಾತಿನಲ್ಲಿ ಸುಳ್ಳೇನೂ ಇಲ್ಲ. ಇದೇ ನಿಜಕ್ಕೂ ಆಕೆಯ ಹಣೆಯಲ್ಲಿ ಬರೆದಿಟ್ಟ ವಿಧಿ.

ಮತ್ತೆ ನೀವೇನೋ ದೇವರಲ್ಲವೇ! ಮತ್ಯಾಕೆ ಇಂಥಾ ವಿಚಿತ್ರವಾದ ಕೆಲಸಗಳನ್ನು ಮಾಡುತ್ತಾ ಇರುತ್ತೀರಿ? ಇದು ಯಾರಿಗಾದರೂ ಅರ್ಥವಾಗುತ್ತದಾ? ನೋಡಿರಿ! ಒಬ್ಬ ಸ್ತ್ರೀ ತನ್ನ ಮೇಲೆ ಅಧಿಕಾರ ಚಲಾಯಿಸುವ ಮನುಷ್ಯನೊಂದಿಗೆ ಊಳಿಗದ ಆಳಿನಂತೆ ಜೀವನಪರ್ಯಂತ ಕಳೆಯುತ್ತಾಳೆ. ಆಕೆಯ ಗಂಡನ ಇಷ್ಟಾನಿಷ್ಟಗಳು ಜಾಗರೂಕತೆಯಿಂದ ಬಂಗಾರ ತೂಗುವ ಒಂದು ಚಿಕ್ಕ ತಕ್ಕಡಿಯಿಂದ ತೂಗಿದಂತೆ ನೋಡಿಕೊಳ್ಳುತ್ತ, ಮನೆಯಲ್ಲಿ ತನಗೆ ಮೀರಿದ ಭಾರವಾದ ಕೆಲಸಗಳನ್ನು ಮಾಡುತ್ತ, ಅವನ ಕುಟುಂಬದಲ್ಲಿ ಅವರು ಆಕೆಯನ್ನು ಏನೆಂದರೂ ಸಹಿಸುತ್ತ ಇರಬೇಕು. ಒಂದೊಂದು ಸಾರಿ ಆಕೆ ಬಾಡಿಗೆಗೆ ತಂದ ಎತ್ತಿನಂತೆ ಕೆಲಸ ಮಾಡುತ್ತ ಇರುತ್ತಾಳೆ. ಇನ್ನೊಂದು ಸಾರಿ ಜಿಂಕೆಯಂತೆ ಹಗಲಿರುಳು ಮನೆ ಗಾಗಿ ಮನೆಯ ವ್ಯಕ್ತಿಗಳಿಗಾಗಿ ಧಾವಂತದಿಂದ ಓಡಾಡುತ್ತಿರುತ್ತಾಳೆ. ಇವೆಲ್ಲ ಮಾಡುತ್ತಿದ್ದರೂ

ಆಕೆಗೆ ಒಂದು ಮಾತು ಆಡುವ ಅಧಿಕಾರವಾಗಲಿ, ತನ್ನ ಸ್ವಂತ ಎಂದು ಹೇಳಿಕೊಳ್ಳುವುದಕ್ಕೆ ಒಂದು ಚಿಟಿಕೆ ಕಾಳಾದರೂ ಇವೆಯೊ? ಆದರೆ, ವಿಧಾತಾ ನೀನೇ ಹೇಳು, ಆಕೆಯ ಹಣೆಯಲ್ಲಿ ಎಂತಹ ಬರಹ ಬರೆದಿದ್ದಿಯೇ! ಆಕೆಯ ಜೀವನಕ್ಕೆ ಇಷ್ಟು ಬರೆದಿರುವೆಯಾದರೆ ಆಕೆಯನ್ನು ನೀನು ಹುಟ್ಟಿದ ಕೂಡಲೇ ಏತಕ್ಕೆ ಸಾಯಿಸಲಿಲ್ಲ? ಹಾಗೆ ಮಾಡಿದ್ದರೆ ಇಂದು ನಿನಗೆ ಸಾವಿರಾರು ಮಂದಿ ಮಹಿಳೆಯರಿಂದ ಬಯ್ಗುಳು ತಪ್ಪುತ್ತಿದ್ದವಲ್ಲವೇ!

ನಿಮ್ಮ ದೇವರುಗಳು ಕೂಡ ಗಂಡಸರನ್ನೇ ಕಣ್ಣಪಾಪೆಯಂತೆ ಕಾಪಾಡುತ್ತ, ಆಶೀರ್ವಾದ ಗಳನ್ನೆಲ್ಲ ಅವರ ಮೇಲೆಯೇ ಸುರಿಸುತ್ತಾರೆ. ನಿಮ್ಮ ಸಹಜೀವಿಗಳ ಸರ್ವ ಸ್ವಾತಂತ್ರ್ಯಕ್ಕಾಗಿ. ಹೆಂಗಸರನ್ನು ಬಂಧಿಸಿಡುವುದರಲ್ಲಿ ನಿಮಗಿಷ್ಟು ಉತ್ಸಾಹ ಹೇಗೆ ಬರುತ್ತದೆ? ಬಹುಶಃ ನಿಮಗೆ ಕೂಡ ಗಂಡಸರು, ಅಂತಹವರಿಗಿರುವ ಹೆಮ್ಮೆ ಇರುವುದರಿಂದಲೇನೋ!

ನೀವು ದೇವರುಗಳು, ಹೌದಾ! ನಿಮ್ಮ ಬಾಗಿಲುಗಳು ಎಲ್ಲರಿಗಾಗಿ ಯಾವ ಭೇದಭಾವ ವಿಲ್ಲದೆ ತೆರೆದೇ ಇರುತ್ತವೆ. ಮತ್ತೆ ಇದೆಲ್ಲ ಏನು? ನಿಜಕ್ಕೂ ಭೇದಭಾವಕ್ಕೆ ತಂದೆಯಂತಹ ವರಲ್ಲವೇ ನೀವು! ನೀವೇ ಕಥಾಪುರುಷರನ್ನು ಸೃಷ್ಟಿಸಿದಂತೆ ಸ್ತ್ರೀಯರನ್ನು ಕೂಡ ಸೃಷ್ಟಿಸಿದ್ದು. ಮತ್ತೆ ಒಬ್ಬರಿಗೆ ಸಂತೋಷ ಒಬ್ಬರಿಗೆ ದುಃಖ ಬರೆದಿಟ್ಟಿದ್ದೀಯ ಏತಕ್ಕೆ? ಎಂಥಾ ಕೆಲಸ ಮಾಡಿದೆ ಸ್ವಾಮಿ! ಆದರೆ ಅದರ ಫಲಿತಾಂಶವನ್ನು ಅನುಭವಿಸುವುದು ಮಹಿಳೆಯರು-ಅವರು ಮಾತ್ರ ತಪ್ಪದೆ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ.

ಸ್ತ್ರೀಯರಲ್ಲಿ ಇರುತ್ತವೆಯೆಂದುಕೊಳ್ಳುವ ಕುಂದುಕೊರತೆಗಳ ಕುರಿತು ನಾವು ಓದುತ್ತಿರುತ್ತೇವೆ. ಅವುಗಳ ಬಗ್ಗೆ ಕೇಳುತ್ತಲೇ ನಮ್ಮ ದೈನಂದಿನ ಕೆಲಸಗಳನ್ನು ಮಾಡುತ್ತಿ ರುತ್ತೇವೆ. ಮತ್ತೆ ಗಂಡಸರಲ್ಲಿ ಈ ಕೊರತೆಗಳೇ ಇಲ್ಲವೇ? ಸ್ತ್ರೀಯರೇ ಸುಳ್ಳು ಹೇಳುತ್ತಾರಾ, ಪುರುಷರು ಹೇಳುವುದಿಲ್ಲವೇ? ಮತ್ತೆ ಕಳ್ಳತನದ ಸಂಗತಿ, ವೇಶ್ಯೆಯರ ಸುತ್ತಲೂ ತಿರುಗುವುದು, ಸಾಯಿಸುವುದು, ದೋಚಿಕೊಳ್ಳುವುದು, ಮೋಸ, ಸರ್ಕಾರದ ಹಣವನ್ನು ಲಂಚವಾಗಿ ಸ್ವೀಕರಿಸುವುದು, ಸುಳ್ಳನ್ನು ನಿಜವೆಂದು ಬದಲಾಯಿಸುವುದು, ನಿಜವನ್ನು ಸುಳ್ಳೆಂದು ಬದಲಾಯಿಸುವುದು - ಗಂಡಸರು ಈ ಕೆಲಸಗಳನ್ನೇನೂ ಮಾಡುವುದಿಲ್ಲವೇ? ಕೈಕೇಯಿ ದಶರಥನಿಗೆ, "ನೀನು ರಾಮನನ್ನು ಹದಿನಾಲ್ಕು ವರ್ಷ ಕಾಡಿಗೆ ಕಳುಹಿಸಿ ನನ್ನ ಮಗ ಭರತನಿಗೆ ಅಯೋಧ್ಯೆಯ ಸಿಂಹಾಸನದ ಮೇಲೆ ಕುಳ್ಳಿಸೆಂದು" ಹೇಳುವ ಅಂಶದಲ್ಲಿ ಸ್ತ್ರೀಯರ ಬಗ್ಗೆ ಬಹಳ ಬರೆದರು. ಆದರೆ ಆ ದಿನಗಳಲ್ಲಿ ಪುರುಷರು, ಸತ್ಯಯುಗದವರು ಅವರು ನಿಜ ವಾಗಿಯೇ ಸತ್ಯವನ್ನು ಬಿಡುವವರಲ್ಲ. ಒಂದು ಸಾರಿ ಮಾತು ಕೊಟ್ಟರೆಂದರೆ ತಪ್ಪುತ್ತಿರಲಿಲ್ಲ. ಹರಿಶ್ಚಂದ್ರನು ತನ್ನ ಪಟ್ಟಣದಲ್ಲಿ ಕಂಡ ಬ್ರಾಹ್ಮಣನಿಗೆ ರಾಜ್ಯವನ್ನೇ ಧಾರೆಯೆರೆದ. ಅದಕ್ಕೆ ವಿಶ್ವಾಮಿತ್ರನು ಅವನನ್ನು ನಾನಾ ಬಗೆಯಲ್ಲಿ ಪರೀಕ್ಷಿಸಿದ. ಒಂದು ಪಾರಿವಾಳಕ್ಕಾಗಿ ಶಿಬಿ ಚಕ್ರವರ್ತಿ ತನ್ನ ಶರೀರದ ಮಾಂಸವನ್ನೇ ಕೊಯ್ದು ತೂಕ ಹಾಕುವುದಕ್ಕಾಗಿ ತಕ್ಕಡಿಯಲ್ಲಿಟ್ಟ. ಯವನಪ್ಪರಾಜ ದ್ವಾರಕಾಧೀಶ ಶ್ರೀಕೃಷ್ಣ ಪರಮಾತ್ಮನಿಗೆ ಕೊಟ್ಟ ಮಾತು ಉಳಿಸಿಕೊಳ್ಳು ವುದಕ್ಕಾಗಿ ತನ್ನ ಶರೀರವನ್ನೇ ಗರಗಸದಿಂದ ಕೊಯ್ಯುವುದಕ್ಕಾಗಿ ಧಾರಾದತ್ತ ಮಾಡಿದ.

ಹಾಗೆಯೇ ದಶರಥ ರಾಮನನ್ನು ಕೈಕೇಯಿಯ ಆಜ್ಞೆ ಪ್ರಕಾರ ಕಾಡಿಗೆ ಕಳುಹಿಸಿ, ಅದೇ ಸತ್ಯದಲ್ಲಿರುವ ಸಾರ ಅಂದುಕೊಂಡ. ಸತ್ಯಕ್ಕಾಗಿ ಪುರುಷರು ಎಷ್ಟು ತ್ಯಾಗವನ್ನಾದರೂ ಸಹಿಸುತ್ತಿದ್ದರು. ಆ ದಿನಗಳಲ್ಲಿ ಮನುಷ್ಯರು ಮೂರು ಬಗೆಯ ನಿರ್ಧಾರಗಳಿಗೆ ತಲೆಬಾಗು ತ್ತಿದ್ದರು. ಅದು ಸ್ತ್ರೀಯರಿಗೆ, ಮಕ್ಕಳಿಗೆ, ರಾಜರಿಗೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಜನ ಒಬ್ಬರೇ ಒಬ್ಬರಿಗೆ ಬಾಗುತ್ತಾರೆ. ಅದು ಅಧಿಕಾರದಲ್ಲಿರುವವರಿಗೆ. ಮಕ್ಕಳು ಕೂಡ ಇಂದಿಗೂ ತಮಗೆ ತೋಚಿದಂತೆ ಮಾಡಬಹುದು. ಆದರೆ ಹೆಂಗಸರು ಮಾತ್ರ ತಾವೆಂದುಕೊಂಡಿದ್ದನ್ನೇನೂ ಮಾಡಲಾರರು. ಹೇಗೆ ಮಾಡುವರೋ ನನಗೆ ತಿಳಿಯುತ್ತಿಲ್ಲ. ಯಾರಾದರೂ ಪ್ರಯತ್ನ ಮಾಡಿದರೋ ಬೆನ್ನಿನ ಮೇಲೆ ಚರ್ಮ ಎದ್ದು ಬರುವವರೆಗೆ ಒದೆಗಳು ಬೀಳುತ್ತವೆ, ಆರು ತಿಂಗಳೋ ವರ್ಷವೋ ಆ ಡೋಸ್ ಉಳಿಯುವಂತೆ. ಈ ದಿನಗಳಲ್ಲಿ ಹೆಂಗಸರು ಮನಸ್ಸಿಗೆ ಬಂದಂತೆ ವರ್ತಿಸಿದರೆ ನಡೆಯುವುದಿಷ್ಟೆ. ಆದ್ದರಿಂದ ಯಾರು ಆ ಸಾಹಸ ಮಾಡುತ್ತಾರೆ? ಇನ್ನೊಬ್ಬಳ ಗಾಯವಾದ ಬೆನ್ನನ್ನು ನೋಡಿದರೆ ಅದು ಸಾಕಿನ್ನು ಅನಿಸುತ್ತದೆ. ಇಲ್ಲಿ ಒಂದು ಪದ್ಯವನ್ನು ನೋಡೋಣ ನಾವು, ನಿಮಗೆ ಅರ್ಥವಾದ ಬಗೆಯನ್ನು ನೋಡೋಣ. ಅದರ ಸಾರ.

> ಸ್ತ್ರೀ ಸುಗುಣಗಳ ವೃಕ್ಷವನ್ನು ಕಡಿಯುವ ಕೊಡಲಿ ಮಾತ್ರವೇ
> ಸಾವಿರ ಜನ್ಮಗಳಲ್ಲಿ ಕೂಡ ಜೀವಿಗಳಿಗೆ ಅಡಚಣೆ
> ಆಕೆ ಮೋಹಿನಿಯೆಂದು, ಪ್ರಾಪಂಚಿಕ ನೋವುಗಳೆಲ್ಲಕ್ಕೂ ರೂಪವೆಂದು ತಿಳಿದುಕೊಳ್ಳಿರಿ
> ಕ್ಷಣಕ್ಷಣಕ್ಕೂ ಬದಲಾಗುವ ಬಯಕೆಗಳ ಸುಳಿ, ಅವಲಕ್ಷಣಗಳಿಗೆ
> ತವರು ಮನೆ, ಲಜ್ಜೆಗೇಡಿತನಕ್ಕೆ ನಗರವೇ,
> ತಪ್ಪುಗಳ ಗಣಿ, ಮೋಸಕ್ಕೆ ನಿಲಯ, ಅನುಮಾನದ ಹೊಲ
> ಸ್ವರ್ಗದ್ವಾರಕ್ಕೆ ಅಡ್ಡ, ನರಕ ನಗರಕ್ಕೆ ಬಾಗಿಲು, ಮಂತ್ರ ತಂತ್ರಗಳಿಗೆ ಬಾವಿ
> ಈ ಸ್ತ್ರೀಯಂತ್ರವನ್ನಾರು ತಯಾರಿಸಿದರೋ! ಸಿಹಿ ವಿಷವಿದು, ಎಲ್ಲ
> ಜೀವಿಗಳಿಗೂ ಬಲೆ ಇದು.

ಇದೇ ನೀವು ಮಾಡುವುದು. ನಿಮ್ಮಲ್ಲಿರುವ ದ್ವೇಷವನ್ನೆಲ್ಲ ಸ್ತ್ರೀಯರ ತಲೆಯ ಮೇಲೆ ಸುರಿಯುತ್ತೀರಿ, ನಿಮಗೆ ನೀವು ಎಷ್ಟೋ ಗುಣವಂತರಾಗಿ ಹೋಗುವುದಕ್ಕೆ.

ಸ್ತ್ರೀಯನ್ನು ನಿಮ್ಮಲ್ಲಿನ ಸದ್ಗುಣಗಳೆಲ್ಲವನ್ನು ಕಡಿಯುವ ಕೊಡಲಿಯೆಂದು ಒಂದು ಕಡೆ ಅನ್ನುತ್ತಲೇ ಇನ್ನೊಂದು ಕಡೆ ಆಕೆ ಪ್ರಾಣಕ್ಕಿಂತಲೂ ಹೆಚ್ಚೆಂದುಕೊಳ್ಳುತ್ತೀರಲ್ಲವೆ! ನಿಮ್ಮ ಆಧಿಪತ್ಯದಲ್ಲೇ ಆಕೆಯನ್ನು ಜೀವನಪರ್ಯಂತ ಇಟ್ಟುಕೊಂಡು, ಒಂದೆಡೆ ಆಕೆಯ ಒಳಿತು ಕೆಡುಕುಗಳನ್ನೆಲ್ಲ ನೋಡುತ್ತಲೇ ಮತ್ತೊಂದೆಡೆ ನಿತ್ಯ ಜೀವನದಲ್ಲಿ ಕೆಲಸಗಳಿಗಾಗಿ ಆಕೆಯೊಂದಿಗೆ ಎತ್ತಿನ ಚಾಕರಿ ಏಕೆ ಮಾಡಿಸುತ್ತೀರಿ? ನಿಜಕ್ಕೂ ಎತ್ತುಗಳು ಕೂಡಾ ನಿಮಗಿಂತಲೂ ಸ್ವಲ್ಪಮಟ್ಟಿಗೆ ಮೇಲು! ಕನಿಷ್ಟ ಅವುಗಳ ಒಳಿತು ಕೆಡುಕುಗಳನ್ನು ಅವು ನೋಡಿಕೊಳ್ಳುತ್ತವೆ. ಸರಿ ಇದೆಲ್ಲವನ್ನು ಬಿಟ್ಟುಬಿಡಿರಿ ಈಗ.

ಅಸಲು ವಿಷಯಕ್ಕೆ ಬರೋಣ. ಕ್ಷುದ್ರ ಮಂತ್ರಗಳಿಗಿಂತಲೂ ಹೆಚ್ಚು ಹಾನಿ ಮಾಡುವ ಶಕ್ತಿ ಸ್ತ್ರೀಯರೆಂಬ ಯಂತ್ರಗಳಲ್ಲಿದೆಯೆಂದುಕೊಂಡರೆ ಅವರಿಗಿಂತಲೂ ನಿಮಗೆ ಗಟ್ಟಿ ಮೆದುಳಿದೆಯಂದಲ್ಲವೇ! ನಿಮ್ಮ ಚುರುಕಾದ ಬುರುಡೆಯಿಂದ ನೀವು ಮಾಡದ ಕೆಲಸ ವಿದೆಯೇ? ನೀವು ಚಿಂತಿಸದ ದುಷ್ಕಾರ್ಯ ಈ ಲೋಕದಲ್ಲಿದೆಯೇ? ನೀವು ಅಧಿಕಾರದಲ್ಲಿದ್ದರೆ ಸ್ತ್ರೀಯರಿಗೇನು ಬಲವಿದೆ? ಅವರಿದ್ದೂ ಇಲ್ಲದಂತೆಯೇ ಲೆಕ್ಕ!

ಇನ್ನು ಎರಡನೆಯ ವಿಷಯಕ್ಕೆ ಬಂದರೆ ಸ್ತ್ರೀಯರು ಎಷ್ಟೋ ಭ್ರಮೆಗಳಲ್ಲಿ ಬಿದ್ದು ಗಿರಗಿರ ತಿರುಗುತ್ತಾರೆಂಬುದು ನಿಜವೇ! ಆದರೆ ಅವರು ವಿದ್ಯಾವಂತರಾಗದೆ ಹೋಗುವುದ ರಿಂದಲೇ ಪ್ರತಿಯೊಂದು ಭ್ರಾಂತಿ ಅವರ ತಲೆಯಲ್ಲಿ ತೂರಿ ಹೋಗುತ್ತದೆ ಲಘುವಾಗಿ. ಆದರೂ ಕೂಡ ಅವರ ವ್ಯಾಮೋಹಗಳೆಲ್ಲ ಅವರ ಕುಟುಂಬದ ಸುತ್ತ ತಿರುಗುತ್ತಿರುತ್ತವೆ. ಇನ್ನು ನಿಮ್ಮ ಮನಸ್ಸಿನೊಳಕ್ಕೆ ಇಣುಕಿ ನೋಡಿದರೆ ಅದರಲ್ಲಿ ವ್ಯಾಮೋಹಗಳು ಕಣ್ಣಿ ನೋಟಕ್ಕೆ ನಿಲುಕದಷ್ಟು ವೇಗವಾಗಿ ಗಿರಗಿರ ತಿರುಗುತ್ತಿರುತ್ತವೆ. ನಿಮ್ಮ ಮನಸ್ಸು ಎಷ್ಟೋ ಬಗೆಯ ಕುತಂತ್ರಗಳನ್ನು ಕಡೆಯುತ್ತ ದೇಶದಲ್ಲಿನ, ವಿದೇಶದಲ್ಲಿನ, ಊಹೆಗಳಲ್ಲಿರುವುವು, ವಾಸ್ತವದಲ್ಲಿರುವುವು ಎಲ್ಲವುಗಳೊಂದಿಗೆ ಯಂತ್ರಾಂಗ ಮಾಡಬೇಕೆಂದುಕೊಳ್ಳುತ್ತದೆ. ಈ ದಿನ ನೀವು ಯಾವನೋ ಬಡ್ಡಿ ವ್ಯಾಪಾರಿಯನ್ನು ಮೋಸ ಮಾಡಿ ಕೆಲವು ಸಾವಿರ ರೂಪಾಯಿ ಆತನಿಂದ ಲಪಟಾಯಿಸಬೇಕೆಂದುಕೊಳ್ಳಬಹುದು, ಯಾವನೋ ಒಬ್ಬ ಜಾಗೀರುದಾರನಿಗೆ ಕೊಂಚ ಸಮಾಚಾರ ಕೊಟ್ಟು, ಅವನಿಂದ ನಾಲ್ಕೈದುನೂರು ಎಗರಿಸಬಹುದು. ಈ ದಿನ ನಾವು ದೊರೆಗಳಿಗೆ ಅದೂ ಇದೂ ಹೇಳಿ ನ್ಯಾಯವನ್ನು ಒಬ್ಬನಿಗೆ ಅನುಕೂಲವಾಗುವಂತೆ ಮಾಡಬೇಕೆಂದು ಕೂಡ ನೀವೆನ್ನುತ್ತೀರೆಂದು ನನಗೆ ಗೊತ್ತು. ಇನ್ನೊಂದು ದಿನ ಒಬ್ಬ ನಕಲಿ ದಸ್ತಾವೇಜು ತಂದು ನಕಲು ತೆಗೆದು ಪುಸ್ತಕದಲ್ಲಿ ಸೇರಿಸುವುದಕ್ಕೆ ನೀವು ಯೋಚನೆ ಮಾಡ ಬಹುದು. ಆದರೆ ಸ್ತ್ರೀಯರು ಇಂತಹ ಕುತಂತ್ರ ಮಾಡುವುದನ್ನು ನೀವೆಲ್ಲಾದರೂ ನೋಡಿದ್ದೀರಾ? "ಓ, ಹೆಣ್ಣೇ! ಯಾತಕ್ಕೋ ತನಗೆ ತಾನು ಬಹಳ ಶ್ರೇಷ್ಠ ಅಂದುಕೊಳ್ಳುತ್ತಾಳೆ. ಹೇಗಾದರೂ ಈ ಜಂಭದ ಹೆಣ್ಣನ್ನು ನಿಯಂತ್ರಣದಲ್ಲಿಡಬೇಕು ಎಂದು ಕೊಳ್ಳುತ್ತೀರಿ. ಇಂಥಾ ವಿಚಿತ್ರ ಸ್ತ್ರೀಯರೆಲ್ಲ ಸೂರ್ಯನಂತೆ ಕಾಂತಿಯನ್ನು ಬೀರುವುದಿಲ್ಲ, ನಿಜವೇ! ಹಾಗೆಂದು ಅವರೆಲ್ಲರೂ ಒಳಗೆ ಹೊರಗೆ ಗಂಗಾ ಜಲದಷ್ಟು ಪವಿತ್ರರೇ ಎಂದರೆ ಅದೂ ಅಲ್ಲ. ಲೋಕದಲ್ಲಿನ ಸ್ತ್ರೀಯರೆಲ್ಲರನ್ನು ಸೇರಿಸಿಕೊಂಡರೆ ನೂರರಲ್ಲಿ ಹತ್ತು ಮಂದಿಗೆ ಮಾತ್ರವೇ ನಿಮ್ಮಂತೆ ವಿಚಿತ್ರ ಯೋಚನೆಗಳನ್ನು ಮಾಡುವ ತಲೆಗಳಿರುತ್ತವೆ. ಇನ್ನು ನಿಮ್ಮನ್ನು ಪರಿಶೀಲಿಸಿ ನೋಡಿದರೆ ಹೀಗೆ ಚಿತ್ರ ವಿಚಿತ್ರವಾದ ಯೋಚನೆಗಳನ್ನು ಮಾಡದವರು ನಿಮ್ಮಲ್ಲಿ ಒಬ್ಬರೂ ಇರುವುದಿಲ್ಲ.

ಇನ್ನು ಮೂರನೆಯ ವಿಷಯಕ್ಕೆ ಬಂದರೆ ಸ್ತ್ರೀಯರನ್ನು ಚಂಚಲತ್ವಕ್ಕೆ ಹೆಸರೆಂದು ಹೇಳಿದ್ದೀರಿ! ನೀವು ಗಂಡಸರು ಈ ವಿಷಯದಲ್ಲಿ ಬುದ್ಧಿವಂತರೆಂದುಕೊಳ್ಳುತ್ತಿದ್ದೀರಾ? ನೀವು ತೂಕ ಮಾಡಿ ನೋಡಿದರೆನ್ನಿರಿ. ನಿಮ್ಮೆಡೆ ತೂಕದ ಬಟ್ಟಲುಗಳು ನೂರುಪಟ್ಟು ಬಾರ ಹೆಚ್ಚಾಗಿ ಇಳಿಯುತ್ತವೆ.

ನಾಲ್ಕನೆಯ ಅಂಶ : ಸ್ತ್ರೀಯರು ಚಿಂತನಾರಾಹಿತ್ಯದಲ್ಲಿ ನಗರದಂತವರು. ಯೋಚನೆಯಿಲ್ಲದೆ ಬದುಕುವುದೆಂಬುದು ಸ್ತ್ರೀಯ ಕೈಯಲ್ಲಿ ಮಾತ್ರವೇ ಇದೆಯಾ? ಮತ್ತೆ ನೀವೋ, ಕೆಟ್ಟದಾಗಿ ನಂಬುಗೆದ್ರೋಹ ಮಾಡುತ್ತ, ಯಾರಿಗೋ ಮಾತುಕೊಟ್ಟು ನಯವಾಗಿ ಅವರ ಕೊರಳು ಕುಯ್ಯುವ ನೀವು, ಯಾವಾಗಲೂ ಯೋಚನೆಯಿಲ್ಲದ ಕೆಲಸಗಳನ್ನು ಮಾಡುವುದಿಲ್ಲವೆ? ಹೌದೌದು, ನೀವು ಯೋಚನಾ ಸಮುದ್ರರೇ, ಸ್ವೀಕರಿಸಿ ನಮ್ಮ ನಮಸ್ಕಾರಗಳನ್ನು. ಮತ್ತೆ ನೀವು ಎಷ್ಟೋ ಓದಿಕೊಂಡವರು, ಯೋಚನಾಪರರೆಂದು ಆಶಿಸುತ್ತೇವಲ್ಲವೆ! ಆದರೆ ಇದಕ್ಕೂ ಮುನ್ನ ಯಾರೂ ನೋಡದ ಮೂರ್ಖತನದ ಕೆಲಸವನ್ನು ದಿನವೂ ಮಾಡುತ್ತಿರುತ್ತೀರಿ. ಆದರೂ ನಿಮ್ಮನ್ನು ನೀವು ಶ್ರೇಷ್ಠ ಮೇಧಾವಿಗಳೆಂದುಕೊಳ್ಳುತ್ತೀರಿ. ಆದರೆ ನಾನು ನಿಮ್ಮನ್ನು ಏನೆಂದು ಕರೆದರೆ ಸರಿ ಹೋಗುತ್ತದೋ ಎಂಬ ಆಲೋಚನೆಯಲ್ಲಿದ್ದೇನೆ.

**ಟಿಪ್ಪಣಿಗಳು**

೧. ಗೋಪಿಕೆಯರ ನಾಯಕಿ.

೨. ಪಂಡರಾಪುರಕ್ಕೆ ಸೇರಿದ ೧೯ನೇ ಶತಮಾನದ ಬ್ರಾಹ್ಮಣ. ಅವನು ರಾಮವಿಜಯ, ಪಾಂಡವಪ್ರತಾಪ ಎಂಬ ಹೆಸರಿನಲ್ಲಿ ಮರಾಠಿ ರಾಮಾಯಣ, ಭಾಗವತ ಬರೆದಿದ್ದಾನೆ.

೩. ವಿಜಯಲಕ್ಷ್ಮಿ ೨೪ ವರ್ಷ ವಯಸ್ಸಿನ ಬ್ರಾಹ್ಮಣ ಕುಟುಂಬದ ವಿಧವೆ. ದಕ್ಷಿಣ ಗುಜರಾತ್‌ನ ಸೂರತ್ ಬಳಿ ಇರುವ ಓಲವಾಡ್ ಎಂಬ ಚಿಕ್ಕ ಗ್ರಾಮದಲ್ಲಿ ವಾಸವಿದ್ದಳು. ಆಕೆ ಗರ್ಭವತಿಯಾದಳೆಂಬ ಪುಕಾರು ಕೇಳಿ ಒಬ್ಬ ಪೋಲಿಸ್ ಆಕೆಯನ್ನು ನೋಡಿ ತಾನು ಕೇಳಿದ ವಿಷಯ ನಿಜ ಎಂದು ನಿರ್ಧರಿಸಿ, ಆ ವಿಷಯವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ಗೆ ತಿಳಿಸಿದ. ಆಕೆ ೧೮೮೧ ಮಾರ್ಚ್‌ನಲ್ಲಿ ಮಗುವನ್ನು ಹೆತ್ತು ಕಸದ ಕುಪ್ಪೆಯಲ್ಲಿ ಎಸೆದಳು. ಆಗ ಆಕೆಯನ್ನು ಬಂಧಿಸಿ ಸೂರತ್‌ಗೆ ಕರೆದುಕೊಂಡು ಹೋದರು. ಆಕೆ ಎರಡನೇ ದರ್ಜೆ ಮ್ಯಾಜಿಸ್ಟ್ರೇಟ್ ಮುಂದೆ ತಾನು ಒಂದು ಮಗುವಿಗೆ ಜನ್ಮ ನೀಡಿದ್ದನ್ನು, ಸಮಾಜದ ಅವಮಾನವನ್ನು ತಾಳದಿರಲು ಆ ಮಗುವನ್ನು ಅಡಿಗೆಯ ಮನೆಯಲ್ಲಿ ಬಳಸುವ ಚಾಕುವಿನಿಂದ ಕತ್ತು ಕುಯ್ದು ಕೊಂದೆನೆಂದು ಒಪ್ಪಿಕೊಂಡಳು. ೧೮೮೧ರಲ್ಲಿ ಸೂರತ್ ಸೆಶನ್ ಕೋರ್ಟ್‌ನಲ್ಲಿ ಆಕೆಯನ್ನು ವಿಚಾರಣೆ ನಡೆಸಿದ ಜಡ್ಜ್ ಆಕೆಗೆ ಗಲ್ಲುಶಿಕ್ಷೆ ವಿಧಿಸಿದ. ನಂತರ ಮುಂಬಯಿಯ ಅಪೀಲ್ ಕೋರ್ಟ್‌ನಲ್ಲಿ ಆಕೆಯನ್ನು ಮತ್ತೊಮ್ಮೆ ವಿಚಾರಣೆ ನಡೆಸಿ ಭಾರಿ ಬಹಿರಂಗ ಸಂಚಲನೆಯ ನಡುವೆ ಆಕೆಗೆ ದೇಶ ಬಹಿಷ್ಕಾರದ ಶಿಕ್ಷೆ ನೀಡಿದರು.

ವಿಜಯಲಕ್ಷ್ಮಿಯ ವ್ಯಾಜ್ಯವನ್ನು, ಆಕೆಗೆ ನ್ಯಾಯಾಲಯ ವಿಧಿಸಿದ ಶಿಕ್ಷೆಯನ್ನು, ಪತ್ರಿಕೆಗಳಲ್ಲಿ ಮತ್ತು ಬಹಿರಂಗವಾಗಿ ಆಕೆ ಅನುಭವಿಸಿದ ಅವಮಾನವನ್ನು ಗಮನಿಸಿದ ತಾರಾಬಾಯಿ ಶಿಂದೆ ಅಂದಿನ ಸಾಂಪ್ರದಾಯಿಕ ಕಟ್ಟುಪಾಡುಗಳ ಸ್ತ್ರೀ ಜೀವನವನ್ನು ಅವಲೋಕಿಸಿ ಆವೇಶದಿಂದ ಕುದಿದು **ಪುರುಷರ ಅಹಂಕಾರಕ್ಕೆ ಸವಾಲು** ಎಂಬ ಕಿರುಪುಸ್ತಕವನ್ನು ಮರಾಠಿಯಲ್ಲಿ ೧೮೮೨ರಲ್ಲಿ ಬರೆದಳು.

ಮಹಾರಾಷ್ಟ್ರದ ಒಂದು ಚಿಕ್ಕ ಪಟ್ಟಣ ಬುಲ್‌ಟಾಣದಲ್ಲಿದ್ದ ನಾಲ್ಕು ದೊಡ್ಡ ಕುಟುಂಬಗಳಲ್ಲಿ ತಾರಾಬಾಯಿ ಶಿಂಧೆ ಅವರದು ಒಂದು. ನಗರದ ಹೊರಗೆ

ಅವರಿಗೆ ಭೂಮಿಯಿದ್ದರೂ ಆಕೆಯ ತಂದೆ ಹರಿಶಿಂದೆ ಡಿ.ಸಿ. ಕಚೇರಿಯಲ್ಲಿ ಮುಖ್ಯ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದ. ಮಹಾತ್ಮ ಫುಲೆ ೧೮೭೩ರಲ್ಲಿ ಸ್ಥಾಪಿಸಿದ ಬ್ರಾಹ್ಮಣ ವಿರೋಧಿ, ಸಮಾಜ ಸುಧಾರಣಾ ಸಂಘ, ಸತ್ಯಶೋಧಕ ಸಮಾಜದಲ್ಲಿ ಮೊಟ್ಟಮೊದಲು ಸೇರಿದ ಸದಸ್ಯರಲ್ಲಿ ಅವರ ತಂದೆ ಒಬ್ಬ. ಫುಲೆ ಇವರ ಕುಟುಂಬಕ್ಕೆ ಹತ್ತಿರದ ಸ್ನೇಹಿತರಾದ್ದರಿಂದ ತಾರಾಬಾಯಿ ಮರಾಠಿ ಓದಲು, ಬರೆಯಲು ಕಲಿತುಕೊಂಡಳು.

ಆಕೆ ಈ ಪುಸ್ತಕದಲ್ಲಿ ಬಳಸಿದ ಪದಗಳ ಆಯ್ಕೆ, ಶೈಲಿ, ವಾದಿಸಿದ ವಿಧಾನವನ್ನು ಗಮನಿಸಿದರೆ ಆಕೆ ಬಳಸಿದ ಭಾಷೆ ಮೊನಚಿನಿಂದ ಕೂಡಿರುವುದು ಕಂಡು ಬರುತ್ತದೆ. ಮರಾಠಿ ನುಡಿಗಟ್ಟು, ಸಾಮಾನ್ಯರ ಆಡುಮಾತಿನಂತಿದ್ದು ಹಲವು ಪುಸ್ತಕಗಳನ್ನು, ಪುರಾಣಗಳನ್ನು ಚರ್ಚಿಸುತ್ತ, ವ್ಯಂಗ್ಯದಿಂದ ಹರಿತವಾಗಿರುವುದು ತಿಳಿಯುತ್ತದೆ. ಈ ಅನುವಾದ ಪುರುಷರ ಅಹಂಕಾರಕ್ಕೆ ಸವಾಲು ಪುಸ್ತಕದ ಮೊದಲ ಭಾಗವಾಗಿದೆ.

# ಈ ಸಂಚಿಕೆಯ ಲೇಖಕರು

೧. ಛಾಯಾ ದೇಗಾಂವಕರ್, ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨. ಎಚ್. ನಿಖಿಲಾ, ಪ್ರವಾಚಕರು, ಇಂಗ್ಲಿಷ್ ವಿಭಾಗ, ಪಾಂಡಿಚೇರಿ ವಿಶ್ವವಿದ್ಯಾಲಯ, ಪಾಂಡಿಚೇರಿ ೬೦೫ ೦೧೪

೩. ಡಾ. ಎಲ್.ಜಿ. ಮೀರಾ, ೧೪೯, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು ೫೬೦ ೦೪೦.

೪. ವಸು, ಪ್ರವಾಚಕರು, ಚರಿತ್ರೆ ವಿಭಾಗ, ಜ್ಞಾನಗಂಗೋತ್ರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೫೬೦ ೦೫೬.

೫. ಎಸ್. ಅನಂತ್, ಅಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಸರ್.ಎಂ.ವಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಭದ್ರಾವತಿ.

೬. ಮನೋರಂಜನಿ, ಆಲ್ಟರ್‌ನೇಟಿವ್ ಲಾ ಫೋರಮ್, ನಂ. ४, ३ನೇ ಕ್ರಾಸ್, ८ನೇ ಮೇನ್, ವಸಂತನಗರ, ಬೆಂಗಳೂರು ೫೬೦ ೦೫೨.

೭. ಸಿದ್ಧಗಂಗಮ್ಮ, ಗ್ರಾಮೀಣ ಅಭಿವೃದ್ಧಿ ಅಧ್ಯಯನಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೫೬೦ ೦೫೬.

೯. ಡಾ. ಸುಕನ್ಯಾ ಕಣಾರಳ್ಳಿ, ಬಿ.ಎಂ.ಎಸ್. ಮಹಿಳಾ ಮಹಾವಿದ್ಯಾಲಯ, ಬಸವನ ಗುಡಿ, ಬೆಂಗಳೂರು.

೧೦. ಲತಾ ಅಭಯ್, ಬಿ-೨೦, ಅಧ್ಯಾಪಕರ ವಸತಿಗೃಹಗಳು, ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ ೫೭೪ ೧೯೯, ದಕ್ಷಿಣ ಕನ್ನಡ ಜಿಲ್ಲೆ.

೧೧. ಸಬಿತಾ ಬನ್ನಾಡಿ, ಹಿರಿಯಶ್ರೇಣಿ ಕನ್ನಡ ಉಪನ್ಯಾಸಕರು, ಸರ್.ಎಂ.ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ನ್ಯೂಟೌನ್, ಭದ್ರಾವತಿ.

೧೨. ಆರ್.ಜಿ. ಮಠಪತಿ, ಉಪನ್ಯಾಸಕರು, ಸ್ನಾತಕೋತ್ತರ ಇಂಗ್ಲಿಷ್ ಕೇಂದ್ರ, ಬಾಗಲಕೋಟೆ.

೧೩. ಶ್ರೀ ಬಿ. ಸುಜ್ಞಾನಮೂರ್ತಿ, ಸಹಾಯಕ ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

# ಮಹಿಳಾ ಅಧ್ಯಯನ

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯ ಹೊಂದಿವೆ.



**ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**